# ಬೇವು-ಬೆಲ್ಲ




ಆನಂದ

ಉಷಾ ಸಾಹಿತ್ಯ ಮಾಲೆ
ಮೈಸೂರು

# ಬೇವು-ಬೆಲ್ಲ

M. N. PANDI
& R.S. [illegible]



ಆನಂದ




ಉಷಾ ಸಾಹಿತ್ಯ ಮಾಲೆ
ಮೈಸೂರು

# ಕೃತಜ್ಞತೆ

ಈ ಸಂಗ್ರಹಕ್ಕಾಗಿ ನನ್ನ ಕಥೆಗಳನ್ನು ಉಪಯೋಗಿಸಿಕೊಳ್ಳಲು ಅನುಮತಿ ಕೊಟ್ಟದ್ದಕ್ಕಾಗಿ, ಇವುಗಳನ್ನು ಬೇರೆ ಬೇರೆ ಸಂಗ್ರಹಗಳಲ್ಲಿ ಪ್ರಕಟಿಸಿರುವ ನನ್ನ ಆಪ್ತ ಮಿತ್ರರಾದ, ಮೈಸೂರಿನ 'ಕಾವ್ಯಾಲಯ'ದ ಒಡೆಯರಾದ ಶ್ರೀ ಚಿದಂಬರಂರವರಿಗೂ, ಬೆಂಗಳೂರಿನ 'ಸತ್ಯಶೋಧನ ಪ್ರಕಟನ ಮಂದಿರ'ದ ಒಡೆಯರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾಯರಿಗೂ,

ಈ ಸಂಗ್ರಹವು, ತಮ್ಮ ಸಂಸ್ಥೆಯ ಈ ವರ್ಷದ ಇಂಟರ್‌ಮೀಡಿಯೆಟ್ ತರಗತಿಯ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ ಪಠ್ಯಪುಸ್ತಕವನ್ನಾಗಿ ಆಯ್ದು ಮನ್ನಣೆಕೊಟ್ಟದ್ದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿವರ್ಗದವರಿಗೂ,

ಇದನ್ನು ಅಂದವಾಗಿ ಮುದ್ರಿಸಿಕೊಟ್ಟ 'ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್'ನ ಮಾಲೀಕರಾದ ಶ್ರೀ ಜಿ. ಎಚ್. ರಾಮರಾಯರಿಗೂ,

ಇದರ ತಯಾರಿಕೆ–ಮಾರಾಟ ಮುಂತಾದುವುಗಳ ಜವಾಬ್ದಾರಿಯನ್ನು ಕೃಪೆಯಿಟ್ಟು ವಹಿಸಿದ ಮೈಸೂರಿನ 'ಶ್ರೀ ರಾಮಚಂದ್ರ ಬುಕ್–ಡಿಪೋ' ಮಾಲೀಕರಿಗೂ,

ಕಡೆಯದಾಗಿ, ಉಳಿದಂತೆ ಹಗುರವಾಗಿರಬಹುದಾದ ಈ ಪುಸ್ತಕಕ್ಕೆ ಸಣ್ಣ ಕಥೆಗಳನ್ನು—ಅದರಲ್ಲೂ ಕನ್ನಡ ಸಣ್ಣ ಕಥೆಗಳನ್ನು ಕುರಿತು ವಿದ್ವತ್ಪೂರ್ಣವೂ ಸವಿಸ್ತಾರವೂ ಆದ ಪೀಠಿಕಾಪ್ರಕರಣವನ್ನು ಬರೆದುಕೊಟ್ಟು ಇದರ ತೂಕವನ್ನು ಬಹುಮಟ್ಟಿಗೆ ಹೆಚ್ಚಿಸಿದ ನನ್ನ ಪರಮ ಮಿತ್ರರಾದ ಶ್ರೀ ತ. ಸು. ಶಾಮರಾಯರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಇತಿ,

೧೩—೭—೫೧

ಆನಂದ

## ಎರಡನೆಯ ಮುದ್ರಣಕ್ಕೆ ಕಾರಣ

ಈ ಪುಸ್ತಕವನ್ನು ಧಾರವಾಡದ ಕರ್ಣಾಟಕ ವಿಶ್ವವಿದ್ಯಾನಿಲಯದ ಪಠ್ಯಪುಸ್ತಕ ಸಮಿತಿಯವರು ಕೃಪೆಗೈದು ತಮ್ಮ ವಿದ್ಯಾನಿಲಯದ I Year Arts, Science ಮತ್ತು Commerce ತರಗತಿಗಳಿಗೆ ಪಠ್ಯಪುಸ್ತಕವನ್ನಾಗಿ ಸ್ವೀಕರಿಸಿರುವುದರಿಂದ, ಈ ಎರಡನೇ ಮುದ್ರಣದ ಅವಶ್ಯಕವಾಯಿತು. ಇದಕ್ಕಾಗಿ ನಾನು, ಧಾರವಾಡದ ಕ. ವಿ. ವಿ. ನಿಲಯದ ಪಠ್ಯಪುಸ್ತಕ ಸಮಿತಿಯವರಿಗೂ, ಈ ಮುದ್ರಣದ ಹೊರೆಯನ್ನು ಹೊತ್ತಿರುವ ನನ್ನ ಮಿತ್ರರಾದ, ಮೈಸೂರು ಉಷಾ ಪ್ರೆಸ್ಸಿನ ಮಾಲೀಕರು ಶ್ರೀ ಆರ್. ಎನ್. ಹಬ್ಬು ಅವರಿಗೂ ಕೃತಜ್ಞನಾಗಿದ್ದೇನೆ.

೧೦೬೪/೫೨, ಸಿಮೆಂಟ್ ಬ್ಲಾಕ್
ಚಾಮುಂಡಿಪುರ, ಮೈಸೂರು
ತಾ|| ೧೪—೫—೧೯೫೬

ಇತಿ,

ಆನಂದ

# ವಿ ಷ ಯ ಕ್ರ ಮ

# ಪೀಠಿಕೆ

೧

‘ಕಥೆ’ ಎಂಬ ಮಾತನ್ನು ಕೇಳುತ್ತಲೇ ನಮ್ಮ ಬಾಲ್ಯದ ಸವಿನೆನಪು ನಮ್ಮ ಕಣ್ಣಿಗೆ ಕಟ್ಟಿದಂತಾಗುತ್ತದೆ. ಮನೆಯಲ್ಲಿರುವ ಮುಪ್ಪಿನ ಅಜ್ಜಿಯನ್ನು ಪೀಡಿಸಿ, ಕಾಡಿ, ಜೇನಿನಂತಹ ಕಥೆಗಳನ್ನು ಆಕೆಯಿಂದ ಹಿಂಡಿ ಹೊರತೆಗೆಯದ ನಿರ್ಭಾಗ್ಯ, ಬಾಲ್ಯದ ಸುಖದಲ್ಲಿ ಬಹುಭಾಗದಿಂದ ವಂಚಿತನಾದಂತೆಯೇ ಸರಿ. ಅಜ್ಜಿಯನ್ನು ಪಡೆಯುವ ಭಾಗ್ಯವಿಲ್ಲದವನು ಹೊಸದಾಗಿ ಮನೆಗೆ ಬಂದ ಅತ್ತಿಗೆಯನ್ನು ಆಶ್ರಯಿಸಬಹುದು; ರಾತ್ರಿಯವೇಳೆ ಒಬ್ಬಂಟಿಗಳಾಗಿ ಅಡುಗೆಯ ಮನೆಯನ್ನು ಸಾರಿಸುವಾಗಲೋ ಅಥವಾ ಕತ್ತಲೆಯಲ್ಲಿ ಮನೆಯ ಹೊರಗೆ ಮುಸುರೆಯನ್ನು ತಿಕ್ಕುವಾಗಲೋ, ಆಕೆ ತನ್ನ ಕುರುಡುಭಯದ ನಿವಾರಣೆಗಾಗಿ ಕಥೆಯ ಲಂಚವನ್ನಿತ್ತು ಎಳೆವರೆಯದ ಹುಡುಗನನ್ನು ತನ್ನ ಬಳಿಯಲ್ಲಿ ಇರಿಸಿಕೊಂಡಿರಬಹುದು. ಅದನ್ನು ನೆನೆದಾಗ ಅಂದಿನ ಆ ಸವಿ ಇಂದಿಗೂ ನಮ್ಮ ಬಾಯಲ್ಲಿ ನೀರೂರಿಸುತ್ತದೆ. ನಮ್ಮ ಲಾವಣಿ, ಹೆಣ್ಣುಮಕ್ಕಳ ಹಾಡುಗಳಂತೆ ಈ ಕಥೆಗಳೂ ನಮ್ಮ ಜಾನಪದ ಸಾಹಿತ್ಯದ ಭಂಡಾರದಲ್ಲಿನ ಅಮೂಲ್ಯ ರತ್ನಗಳು. ಶ್ರುತಿಗಳಂತೆ ಕಿವಿಯಿಂದ ಕಿವಿಗೆ ಹರಿದುಬಂದಿರುವ ಇವುಗಳ ಮೂಲ ಅಭೇದ್ಯ, ಅಸ್ಪಷ್ಟ; ಬಹುಶಃ ಮಾನವಜೀವಿ ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ಬೆತ್ತಲೆಯಾಗಿ ಬಯಲಿನಲ್ಲಿ ವಾಸಿಸುತ್ತಿದ್ದ ಕಾಲದಿಂದ ಹಿಡಿದು ಇಂದಿನವರೆಗೆ, ಕಾಲ ದೇಶಗಳ ಎಲ್ಲೆಯಿಲ್ಲದೆ, ಅವು ಬೆಳೆದುಬಂದಿರಬಹುದು.

ಕಥನಕಲೆ ಹೇಗೆ ಹುಟ್ಟಿತು? ಏಕೆ ಹುಟ್ಟಿತು? ಹೇಗೆ ಹುಟ್ಟಿತೆಂಬುದನ್ನು ಸ್ವಲ್ಪಮಟ್ಟಿಗೆ ಊಹಿಸಬಹುದು. ಅದು ಮನುಷ್ಯಸ್ವಭಾವಕ್ಕೆ ಅಂಟಿಬಂದ ಒಂದು ಗುಣವಿಶೇಷವಿರಬೇಕು. ನಾಲ್ಕು ಜನ ಒಟ್ಟಿಗೆ ಸೇರಿ ಹರಟೆ ಹೊಡೆಯಲು ಆರಂಭಿಸಿದರೆ, ಅಲ್ಲಿ ಒಂದು ಕಥೆಗೆ ಬೀಜಾವಾಪನೆಯಾಗುತ್ತದೆಂದು ಹೇಳಬಹುದು. ಮಾತು ಬಲ್ಲವನು, ತಾನು ಕಂಡ ಅಥವಾ ಕೇಳಿದ ಒಂದು ವ್ಯಕ್ತಿಯನ್ನೋ ದೃಶ್ಯವನ್ನೋ ಕುರಿತು, ಕೇಳುವವರ ಹೃದಯಂಗಮವಾಗುವಂತೆ ವರ್ಣಿಸಿ ಹೇಳುತ್ತಾನೆ; ಉಳಿದವರು ಅದನ್ನು ಮೈಮರೆತು ಆಲಿಸುತ್ತಾರೆ; ಅದೇ

ಕಥೆ. ಪ್ರಾಚೀನಮಾನವನು ನಿಸರ್ಗದಲ್ಲಿ ಬಿಡಿಸಲಾಗದ ಸಮಸ್ಯೆಗಳಿಗೆ ವಿವರಣೆಯನ್ನು ಹುಡುಕಹೊರಟಾಗ ಅವನ ಕಲ್ಪನೆಯಲ್ಲಿ ಕಥೆ ಮೂಡಿರಬೇಕೆಂದೂ, ಅದೇ ಕಥನಕಲೆಯ ತಲಕಾವೇರಿಯೆಂದೂ ಕೆಲವರು ಊಹಿಸುತ್ತಾರೆ. ಚಂದ್ರಗ್ರಹಣವನ್ನು ಕಂಡಾಗ ಅದು ಮಾನವರ ಶತ್ರುಗಳಾದ ರಾಕ್ಷಸರ ಆಕ್ರಮಣಕಾರ್ಯವೆಂದೆನಿಸಿರಬೇಕು, ಆತನಿಗೆ. ಅವರು ಏಕೆ ಆಕ್ರಮಿಸಿದರೆಂಬುದನ್ನು ಊಹಿಸಹೊರಟಾಗ ಒಂದು ಪುಟ್ಟ ಕಥೆ ಉದಯವಾಗಿರಬೇಕು; ಅದು ಜನರ ಬಾಯಿಂದ ಬಾಯಿಗೆ ಹಾರಿಬರುವಾಗ ಕೈಕಾಲುಗಳು ಹುಟ್ಟಿಕೊಂಡು ಸಮುದ್ರಮಥನ, ಅಮೃತಜನನ, ಮೋಹಿನೀ ಅವತರಣ, ರಾಕ್ಷಸಹನನ, ಚಂದ್ರ-ಸೂರ್ಯಗ್ರಹಣ—ಎಂಬ ಸ್ಪಷ್ಟ ರೂಪವನ್ನು ತಾಳಿರಬೇಕು. ಜನರಲ್ಲಿ ಹರಡಿದ್ದ ಇಂತಹ ಕಥೆಗಳನ್ನೆಲ್ಲಾ ಸಂಗ್ರಹಿಸಿಕೊಂಡು ಜನಮನೋರಂಜನೆಯನ್ನು ಸಾಧಿಸಿದವನು ನಮ್ಮ 'ಸೂತಪುರಾಣಿಕ.' ಇಂತಹ ಸೂತಪುರಾಣಿಕರು ನಮ್ಮ ದೇಶದಲ್ಲಿ ಮಾತ್ರವೇ ಅಲ್ಲ; ಎಲ್ಲ ದೇಶಗಳ ಪ್ರಾಚೀನ ಇತಿಹಾಸದಲ್ಲಿಯೂ ಕಂಡುಬರುತ್ತಾರೆ.

ಬರಿಯ ಬಾಯಿಮಾತಿನಲ್ಲಿದ್ದ ಕಥನಕಲೆಯನ್ನು ಬರಹದಲ್ಲಿ ಹಿಡಿದಿಡುವ ಕಾರ್ಯ ಬಹು ಹಿಂದಿನಿಂದಲೂ ನಡೆದುಬಂದಿದೆ. ಗ್ರೀಕರೂ ರೋಮನರೂ ತಮ್ಮ ಪುರಾಣಕಥೆಗಳನ್ನು ಕ್ರಿಸ್ತಪೂರ್ವ ಎಷ್ಟೋ ವರ್ಷಗಳ ಮುಂಚೆಯೇ ಬರೆದಿಟ್ಟರು. ಈಗ ಜಗತ್ತಿನ ಮೂಲೆಮೂಲೆಗೂ ಪರಿಚಿತವಾಗಿರುವ ಈಸೋಪನ ಕಥೆಗಳು ಗ್ರೀಕರಿಂದ ಬಂದವು. ಇಂಗ್ಲಿಷರ ಬೈಬಲಿನಲ್ಲಿ ಸುಂದರವಾದ ಅನೇಕ ಕಿರುಗತೆಗಳಿವೆ. ಫಿರ್‌ದೋಸಿಯ ಷಹನಾಮ ಪುಟ್ಟ ಕಥೆಗಳ ಒಂದು ಭಂಡಾರ. ಭರತಖಂಡವಂತೂ ಕಥೆಗಳ ತೌರೂರು. ವೇದ-ಉಪನಿಷತ್ತುಗಳೂ ಭಾರತ-ರಾಮಾಯಣಗಳೂ ಅಷ್ಟಾದಶ ಪುರಾಣ-ಉಪಪುರಾಣಗಳೂ ಧರ್ಮೋಪದೇಶಕ್ಕಾಗಿ ಕಥೆಗಳಿಗೆ ಆಶ್ರಯವಿತ್ತಿದ್ದರೆ, ಬೃಹತ್ಕಥೆ, ಕಥಾಸರಿತ್ಸಾಗರ, ಹಿತೋಪದೇಶ, ಪಂಚತಂತ್ರ, ಶೃಂಗಾರಶುಕಸಪ್ತತಿ, ದಶಕುಮಾರಚರಿತೆ ಮೊದಲಾದ ಗ್ರಂಥಗಳ ಕಥೆಗಳು ಲೌಕಿಕ ವಿವೇಕಬೋಧನೆಗೆ, ಜನಮನೋರಂಜನೆಗೆ ಮೀಸಲಾಗಿವೆ.

ಕನ್ನಡ ಸಾಹಿತ್ಯವನ್ನು ವಿವೇಚಿಸಿದಾಗಲೂ ಕಥೆಗಳಿಗೇನೂ ಕೊರತೆಯಿಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಚ್ಚು ಗದ್ಯಗ್ರಂಥಗಳು ನಮಗೆ

ದೊರೆಯುವುದಿಲ್ಲ. ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯೊಂದನ್ನು ಬಿಟ್ಟರೆ ಉಳಿದುವೆಲ್ಲಾ ಸಾಮಾನ್ಯವಾಗಿ ಪದ್ಯರೂಪದ ಕಥೆಗಳು. ನೃಪತುಂಗ ಕವಿ ತನ್ನ ಕವಿರಾಜಮಾರ್ಗದಲ್ಲಿ,

> ಮಿಗೆ ಕನ್ನಡ ಕಬ್ಬಂಗಳೊ
> ಳಗಣಿತ ಗುಣ ಗದ್ಯಪದ್ಯ ಸಮ್ಮಿಶ್ರಿತಮುಂ
> ನಿಗದಿಸುವರ್ ಗದ್ಯಕಥಾ
> ಪ್ರಗೀತಿಯಂ ತಚ್ಚಿರಂತನಾಚಾರ್ಯರ್ಕಳ್ [I, ೨೭]

ಎಂದೂ, ನಾಗವರ್ಮನು ತನ್ನ ಕಾವ್ಯಾವಲೋಕನದಲ್ಲಿ,

> ಗದ್ಯದೊಳೆ ಸಮೆದುಮಂತವು
> ಹೃದ್ಯ ವಚಃಪ್ರೌಢಿಗಳ್ ಕಥಾಖ್ಯಾಯಿಕೆಯೊಳ್ [೯೪೯]

ಎಂದೂ ಹೇಳಿ, ಕನ್ನಡದಲ್ಲಿ ಗದ್ಯಕಥೆಗಳಿದ್ದುದಕ್ಕೆ ಸಾಕ್ಷಿಯನ್ನು ನುಡಿದಿದ್ದಾರೆ. ಆವರೇನು? ಸಮುದ್ರವಿದ್ದೆಡೆ ಹಿಮಾಲಯ ಮೇಲಕ್ಕೆದ್ದು ಅದರ ಹುಟ್ಟಡಗಿ ಸಿರುವಂತೆ, ನೃಪತುಂಗನಿಗಿಂತಲೂ ಹಿಂದಿನ ಕಾವ್ಯವಾರಿಧಿಯೆಲ್ಲವೂ ಬತ್ತಿ, ಬರಿಯ ಪ್ರಶ್ನಾರ್ಥಕ ಚಿಹ್ನೆ ಮಾತ್ರ ಬೃಹದಾಕಾರದಿಂದ ಎದ್ದು ಕುಳಿತಿದೆ. ಅದರಿಂದ ಈಚಿನ ನಮ್ಮ ಸಾಹಿತ್ಯವೆಲ್ಲವೂ ಪ್ರಾಯಶಃ ಪದ್ಯರೂಪದಲ್ಲಿದೆ. ವ್ಯಾಕರಣ, ಛಂದಸ್ಸು, ಅಲಂಕಾರ ಮೊದಲಾದ ಶಾಸ್ತ್ರವಿಚಾರಗಳನ್ನು ಕೂಡ ಪದ್ಯರೂಪದಲ್ಲಿ ಬರೆದಿಡಬೇಕೆಂದು ನಮ್ಮ ಪ್ರಾಚೀನರ ಆಕಾಂಕ್ಷೆ. ಗದ್ಯಕ್ಕಿಂತಲೂ ಪದ್ಯಪಠನ ಹೆಚ್ಚು ಮನೋರಂಜಕವಾಗುತ್ತದೆ. ಅಲ್ಲದೆ ಯತಿ-ಗಣ-ಪ್ರಾಸಗಳೊಡನೆ ಲಯುಬದ್ಧವಾಗಿ ಹಾಡಿದುದು ಜ್ಞಾಪ್ತಿಯಲ್ಲಿ ನಿಲ್ಲುವಂತೆ ನಿರಾಡಂಬರವಾದ ಗದ್ಯ ನಿಲ್ಲಲಾರದು. 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿ'ಗಳಾಗಿದ್ದವರಿಂದ ಹೀಗೆ ಪ್ರಾಶಸ್ತ್ಯಪಡೆದ ಪದ್ಯರೂಪದಲ್ಲಿ ಕಿರುಗತೆಗಳೂ ತೂರಿಕೊಂಡುದು ಸ್ವಾಭಾವಿಕವಾಗಿಯೇ ಇದೆ. ಚಾವುಂಡರಾಯನ 'ದಶಕುಮಾರಚರಿತೆ', ಭವಾವಳಿಗಳನ್ನು ಒಳಗೊಂಡ ಜೈನರ ಪುರಾಣಗಳು, ನಯಸೇನನ 'ಧರ್ಮಾಮೃತ', ವೃತ್ತವಿಲಾಸನ 'ಧರ್ಮಪರೀಕ್ಷೆ', ದುರ್ಗಸಿಂಹನ 'ಪಂಚತಂತ್ರ', ನಾರಣಪ್ಪನ 'ಗದುಗಿನ ಭಾರತ', ಲಕ್ಷ್ಮೀಶನ 'ಜೈಮಿನಿಭಾರತ', ವಿರೂಪಾಕ್ಷ ಪಂಡಿತನ 'ಚನ್ನಬಸವಚರಿತೆ', ಹರಿಹರನ 'ರಗಳೆಗಳು', ಶಾಂತಲಿಂಗದೇಶಿಕನ 'ಭೈರವೇಶ್ವರ ಕಾವ್ಯ'ದ

‘ಕಥಾಸೂತ್ರರತ್ನಾಕರ’ ಮೊದಲಾದ ಅನೇಕ ಗ್ರಂಥಗಳೆಲ್ಲಾ ಕಿರುಗತೆಗಳ ಭಂಡಾರಗಳೇ.

೨

ಹೀಗೆ ಕನ್ನಡದಲ್ಲಿ ಅನಾದಿಯಾಗಿ ಹರಿದುಬಂದಿರುವ ಈ ಕಥನಕಲೆಯಲ್ಲಿ ಇತ್ತೀಚೆಗೆ ಎಂದರೆ ಸುಮಾರು ಮೂವತ್ತು ವರ್ಷಗಳಿಂದ ಒಂದು ಹೊಸ ರೂಪು ತೋರಿಬಂದಿದೆ. ಅದನ್ನು ‘ಸಣ್ಣ ಕಥೆ’ ಎಂಬ ಪಾರಿಭಾಷಿಕ ಶಬ್ದದಿಂದ ನಿರ್ದೇಶಿಸುವುದು ವಾಡಿಕೆ. ಶ್ರೀಮಾನ್ ಎಸ್. ವಿ. ರಂಗಣ್ಣನವರು ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಬರೆದಿರುವ ತಮ್ಮ ‘ಸಣ್ಣ ಕಥೆಗಳ ಸ್ವರೂಪ ಮತ್ತು ಸ್ವಾರಸ್ಯ’ ಎಂಬ ಲೇಖನದಲ್ಲಿ ‘ಸಣ್ಣ ಕಥೆ’ಯೆಂಬುದು ‘ಲಂಗವುಟ್ಟ ದೊರೆಸಾನಿ; ಈಚೆಗೆ ಸೀರೆಯುಟ್ಟು ನಮ್ಮ ನಾಡಿನ ಮುತ್ತೈದೆಯಾಗಲಾರಂಭಿಸಿದ್ದಾಳೆ’ ಎಂದು ಆಲಂಕಾರಿಕವಾಗಿ ವರ್ಣಿಸಿದ್ದಾರೆ. ನಿಜ. ಈ ಸಾಹಿತ್ಯವಿಭಾಗವು ಪಾಶ್ಚಾತ್ಯ ಸಾಹಿತ್ಯದ ಅನುಕರಣದಿಂದ ಆರಂಭವಾದುದು. ಹಿಂದೆ ಸಂಸ್ಕೃತ ಸಾಹಿತ್ಯವು ಕನ್ನಡದ ಮೇಲೆ ತನ್ನ ಪ್ರಭಾವದ ಚಿರಮುದ್ರೆಯನ್ನು ಒತ್ತಿತು; ಇಂದು ಆ ಕಾರ್ಯ ಇಂಗ್ಲಿಷಿನಿಂದ ನೆರವೇರುತ್ತಿದೆ. ಬೆಳೆಯುತ್ತಾ ಹೋಗುವ ಜೀವದ್ಭಾಷೆಯ ಲಕ್ಷಣವೇ ಇದು. ಎಲ್ಲೆಡೆಗೂ ಬೇರುಗಳನ್ನು ಬೀರಿ, ಪೋಷಕದ್ರವ್ಯವನ್ನು ಸಂಗ್ರಹಿಸುತ್ತಾ, ಮಹೋನ್ನತವಾಗಿ ಬೆಳೆಯುವ ಮಹಾವೃಕ್ಷದಂತೆ, ಭಾಷೆಯೂ ತನ್ನ ಔನ್ನತ್ಯವನ್ನು ಸಾಧಿಸಿಕೊಳ್ಳಲು ಎಲ್ಲೆಡೆಗಳಿಂದಲೂ ಭಾವಗಳನ್ನು ಸಂಗ್ರಹಿಸುತ್ತದೆ. ಪಾಶ್ಚಾತ್ಯರ ಆಳ್ವಿಕೆಯ ಪ್ರಭಾವದಿಂದ ಅವರ ನಾಗರಿಕತೆ–ಸಂಸ್ಕೃತಿಗಳು ಮುಂದ ಮುಂದವಾಗಿ ಹರಿದುಬಂದು, ಹಾಸುಹೊಕ್ಕಾಗಿ ಸೇರಿ, ನಮ್ಮ ಆಚಾರ–ವಿಚಾರ, ವೇಷ–ಭೂಷಣ, ಆಹಾರ–ವ್ಯವಹಾರಗಳಲ್ಲಿ ಎಷ್ಟೋ ಮಾರ್ಪಾಟಾಗಿರುವಂತೆ ಜೀವನದ ಪ್ರತಿಬಿಂಬವಾದ ಸಾಹಿತ್ಯದಲ್ಲಿಯೂ ಬದಲಾವಣೆಗಳಾಗಿರುವುದು ಅನಿವಾರ್ಯವಷ್ಟೇ ಅಲ್ಲ; ಕೇವಲ ಅಪೇಕ್ಷಣೀಯ. ಜ್ಞಾನದಾಯಕವಾದ ಬೆಳಕು ಪಶ್ಚಿಮದ ಕಿಟಕಿಯಿಂದ ಬಂದ ಮಾತ್ರಕ್ಕೆ ತಪ್ಪೇನು? ಅಗತ್ಯವಾಗಿಯೂ ಬರಲಿ.

‘ಸಣ್ಣ ಕಥೆ’ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಸಿಯಾಗಿದ್ದುದು ಈಗ

ತಾನೆ ವೃಕ್ಷರೂಪವನ್ನು ತಾಳುತ್ತಿದೆ. ಪಾಶ್ಚಾತ್ಯ ಸಾಹಿತ್ಯದಲ್ಲಿಯೂ ಅದು ಒಂದು ಹೊಸ ದಾರಿಯೇ. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಇದರ ಜನನವಾಯಿತೆಂದು ಹೇಳಬಹುದು. ಈಗ ಸುಮಾರು ನೂರಿಪ್ಪತ್ತು ವರ್ಷಗಳಲ್ಲಿ ಅದು ಅತ್ಯಂತ ಜನಪ್ರಿಯವಾಗಿ, ಅಪಾರವಾಗಿ ಬೆಳೆದಿದೆ. ಇದರ ಅಪಾರವಾದ ಪ್ರಾಶಸ್ತ್ಯಕ್ಕೆ ಪ್ರಮುಖ ಕಾರಣ, ಕಾಲದ ಅಭಾವ. ನಮ್ಮದು ಒಂದು ಯಂತ್ರಯುಗ. ಜೀವನ ಜೋರೆಯುವುದಕ್ಕಾಗಿ ನಡೆಯುತ್ತಿರುವ ಘನಸಂಗ್ರಾಮದಲ್ಲಿ ಕಾಲಕ್ಕೆ ಮೌಲ್ಯ ಮಿತಿಮೀರಿ ಬೆಳೆದಿದೆ. ಈ ಬಡಿದಾಟ ದಲ್ಲಿ ಮಾನವನ ಕಲಾಭಿರುಚಿಯೇ ಸತ್ತುಹೋಗುವಂತಾಯಿತು. ಅದನ್ನು ಉಳಿಸಿಕೊಳ್ಳಬೇಕಾದರೆ ಮನುಷ್ಯನ ಅನುಕೂಲಕ್ಕೆ ತಕ್ಕಂತೆ ಕಲೆಯನ್ನೇ ರೂಪಾಂತರಗೊಳಿಸುವುದು ಅನಿವಾರ್ಯವಾಯಿತು. ಅದರ ಫಲವಾಗಿಯೇ ಸಣ್ಣ ಕಥೆಗಳು, ಏಕಾಂಕ ನಾಟಕಗಳು, ಭಾವಗೀತೆಗಳು ಗಂಗಟ್ಟೆ ಪ್ರಬಲಿಸಿವೆ. ಪ್ರಕೃತ, ಸಣ್ಣ ಕಥೆಗಳನ್ನು ಕುರಿತು ಹೇಳುವುದಾದರೆ, ಈ ಹೊಸ ಹಾದಿಯನ್ನು ಹಾಕಿ, ಅದರ ಸ್ವರೂಪವನ್ನು ಬಹುಮಟ್ಟಿಗೆ ವಿವರಿಸಿದ ಕೀರ್ತಿ, ಎಡ್ಗರ್ ಅಲನ್ ಪೊ ಎಂಬ ಅಮೆರಿಕನಿಗೆ ಸಲ್ಲಬೇಕು. ಆತನ ಮೊದಲ ಕಥೆ—'ಎ ಮ್ಯಾನ್ಯುಸ್ಕ್ರಿಪ್ಟ್ ಫೌಂಡ್ ಇನ್ ಎ ಬಾಟಲ್' (ಸೀಸೆಯಲ್ಲಿ ಸಿಕ್ಕಿದ ಒಂದು ಹಸ್ತಪ್ರತಿ)—ಕ್ರಿ.ಶ. ೧೮೩೩ರಲ್ಲಿ ಬರೆದುದು.

ಕನ್ನಡ ಸಣ್ಣ ಕಥೆಗಳು ಪಾಶ್ಚಾತ್ಯ ಸಣ್ಣ ಕಥೆಗಳ ಅನುಕರಣದಿಂದಲೇ ಆರಂಭವಾದುದರಿಂದ ಪಾಶ್ಚಾತ್ಯರಲ್ಲಿ ಬೇರೆ ಬೇರೆ ಪಂಥಗಳ ಸ್ಥಾಪಕ ರಂತಿರುವ ಕೆಲವು ಪ್ರಮುಖರಾದ ಸಣ್ಣ ಕಥೆಗಾರರನ್ನು ಕುರಿತು ವಿವೇಚಿಸು ವುದು ಅತ್ಯಗತ್ಯ. ಸಣ್ಣ ಕಥೆಗಳ ವಿಧಾತೃವಿನಂತಿರುವ ಆಲನ್ ಪೊ, ಕಾಲದ ದೃಷ್ಟಿಯಿಂದ ಮಾತ್ರವೇ ಅಲ್ಲದೆ, ಯೋಗ್ಯತೆಯ ದೃಷ್ಟಿಯಿಂದಲೂ ಅಗ್ರಗಣ್ಯ ನಾದವನು. ಆತನು ಬಹು ದೊಡ್ಡ ಕಥೆಗಾರ. ಹೃದಯವನ್ನು ಕಲಕುವಂತಹ ಭಯಂಕರ ಸನ್ನಿವೇಶಗಳನ್ನು ಸೃಷ್ಟಿಸುವುದರಲ್ಲಿ ಆತನು ಅದ್ವಿತೀಯನೆಂದೇ ಹೇಳಬೇಕು. ಆತನ ಕಲಾಶಕ್ತಿಯ ಇಂದ್ರಜಾಲಕ್ಕೆ ಸಿಕ್ಕ ಓದುಗರು ಕಥೆ ಯನ್ನು ಓದುವವರೆಗೂ ಬೇರೊಂದು ಜಗತ್ತಿನಲ್ಲಿ—ಅದು ನರಕವೇ ಆಗಿರಲಿ— ಉಸಿರಾಡುತ್ತಿರುತ್ತಾರೆ; ಇಲ್ಲವೇ, ಉಸಿರು ಕಟ್ಟಿಕೊಂಡು, ಹೃದಯವನ್ನು ಹಿಡಿಕೆಯಲ್ಲಿ ಹಿಡಿದು, ಆತನು ತೋರಿಸುವ ಭಯಂಕರ ಜಗತ್ತನ್ನು ವಿಧೇಯತೆ

ಯಿಂದ ವೀಕ್ಷಿಸುತ್ತಾರೆ. ಆತನ ಹತ್ತು ಕಥೆಗಳನ್ನು ಓದಿದಮೇಲೆ ಈ ಭೀತಿ ತಕ್ಕಮಟ್ಟಿಗೆ ತಗ್ಗಬಹುದು. ಆದರೇನು ? ಕೆಲವು ದಿನಗಳನ್ನು ಬಿಟ್ಟು ಮತ್ತೆ ಓದಿದಾಗ, ಹಿಂದಿನ ಭಯಂಕರ ಅನುಭವದಲ್ಲಿ ಚಾಚೂ ಕಡಿಮೆಯಾಗುವುದಿಲ್ಲ. 'ಪೋ 'ನ ಸಮಕಾಲೀನನಾದ ನ್ಯಾಥಾನಿಯಾಲ್ ಹಾಥಾರ್ನ್ ಬಹುದೊಡ್ಡ ಕಥೆಗಾರ; ಆತನ ಕಥೆಗಳಲ್ಲೆಲ್ಲಾ ಒಂದೇ ಗುರಿ—ಧರ್ಮ ಅಥವಾ ನೀತಿ ನಿರೂಪಣೆ. ಆದರೂ ನೀತಿಯ ಭಾರದಿಂದ ಕಥೆಯೇನೂ ಕುಸಿಯುವುದಿಲ್ಲ. ಒಟ್ಟು ಕಥೆಯೇ ಒಂದು ನೀತಿಯಾಗಿರುವಂತೆ ಕಲಾಮಯವಾಗಿ ಬರೆಯುತ್ತಾನೆ, ಹಾಥಾರ್ನ್. ಇವನನ್ನು ಪೋ ಕಟುವಾಗಿ ಟೀಕಿಸಿದ್ದಾನೆ—ಅವನ ಕಥೆಗಳಲ್ಲಿ ವೈವಿಧ್ಯತೆಯೇ ಇಲ್ಲವೆಂದು. ಇದು ಬಹುಮಟ್ಟಿಗೆ ನಿಜ. ಹಾಥಾರ್ನನ 'ಟ್ವೈಸ್ ಟೋಲ್ಡ್ ' ಕಥೆಗಳಲ್ಲೆಲ್ಲಾ ನೀತಿಯ ಏಕನಾದವೊಂದೇ ಮಿಡಿಯುತ್ತದೆ. ಅವನನ್ನು ಟೀಕಿಸಿದ ಪೋ-ನಲ್ಲಿಯೂ ಈ ಅವೈವಿಧ್ಯತೆಯ ಕುಂದು ಹೆಪ್ಪುಗಟ್ಟಿ ಕುಳಿತಿದೆ. ಹಾಥಾರ್ನನ ಗುರಿಯಲ್ಲಿ ಮಾತ್ರ ಏಕನಾದವಾದರೆ ಪೋ-ನ ಗುರಿಯಲ್ಲಿಯೂ ವೈವಿಧ್ಯತೆಯಿಲ್ಲ; ಆತನ ವಾತಾವರಣಸೃಷ್ಟಿಯೂ ಅದೇ ಹಾಡು. ಇಷ್ಟೇ ಅಲ್ಲ; ಪೋ-ನ ಅನೇಕ ಕಥಾವಸ್ತುಗಳಲ್ಲಿಯೂ ನಿಕಟವಾದ ಸಾಮ್ಯ ಕಂಡುಬರುತ್ತದೆ. 'ದಿ ಬ್ಲ್ಯಾಕ್ ಕ್ಯಾಟ್', 'ದಿ ಪ್ರಿಮೆಚರ್ ಬರಿಯಲ್ ', 'ದಿ ಟೆಲ್ ಟೇಲ್ ಹಾರ್ಟ್ ', 'ಫಾಲ್ ಆಫ್ ದಿ ಹೌಸ್ ಆಫ್ ಅಷರ್ ' ಮೊದಲಾದ ಕಥೆಗಳ ವಸ್ತುಗಳಲ್ಲಿ ಹೆಚ್ಚು ವ್ಯತ್ಯಾಸವೇನೂ ಇಲ್ಲ. ಆದರೂ ಪೋ-ನಲ್ಲಿ ಹಾಥಾರ್ನನಿಗಿಂತಲೂ ಹಿರಿದಾದ ಕಲಾಶಕ್ತಿಯಿದೆ. ಮನುಷ್ಯನು ಪಾಪಿಯಾದರೆ ಆ ಪಾಪದಿಂದ ಅವನು ಯಾವ ಫಲಗಳನ್ನು ಅನುಭವಿಸಬೇಕಾಗುವುದೆಂಬುದನ್ನು ತೋರಿಸಿ, ಪುಣ್ಯಸಾಧನೆಯಿಂದ ಸ್ವರ್ಗಕ್ಕೆ ಹೋಗಿರೆಂದು ಬುದ್ಧಿ ಹೇಳುತ್ತಾನೆ, ಹಾಥಾರ್ನ್. ಪೋ ಆದರೋ, ಓದುಗರನ್ನು ನರಕಕ್ಕೇ ಎಳೆದುಕೊಂಡು ಹೋಗಿ, ಆ ಭಯಂಕರ ದರ್ಶನದಿಂದ ಅವರು ಪಾಪದ ಕಡೆ ಹೆಜ್ಜೆಯಿಕ್ಕದಂತೆ ಅವರನ್ನು ಹೆದರಿಸುತ್ತಾನೆ.

ಪಾಶ್ಚಾತ್ಯ ಸಣ್ಣ ಕಥೆಗಾರರಲ್ಲಿ ಹೆಸರಾಂತ ಮೂರನೆಯವನು ಬ್ರೆಟ್ ಹಾರ್ಟ್. ಆತನ 'ಲಕ್ ಆಫ್ ದಿ ರೋರಿಂಗ್ ಕ್ಯಾಂಪ್ ' ಎಂಬ ಕಥೆ ಪ್ರಕಟವಾಗುತ್ತಲೇ ಆತನು ಅತ್ಯಂತ ಜನಪ್ರಿಯನಾದ ಕಥೆಗಾರನಾದನು.

ಪೋ ಆಗಲಿ, ಹಾಥಾರ್ನ್ ಆಗಲಿ ಸಾಧಿಸದೆ ಹೋದ ಒಂದು ದೊಡ್ಡ ಕಾರ್ಯವನ್ನು ಈತನು ಸಾಧಿಸಿದನು. ಕೇವಲ ಪಿಶಾಚಸ್ವರೂಪರೆಂಬುವರಲ್ಲಿಯೂ ದೈವಿಕ ಗುಣಗಳು ಬೀಜರೂಪವಾಗಿ ಕುಳಿತಿರುವುದನ್ನು ಈತನ ಕಥೆಗಳು ಎತ್ತಿ ತೋರಿಸಿದವು. ಕುಡುಕರಲ್ಲಿ, ಜೂಜುಕೋರರಲ್ಲಿ ಎಂತಹ ಔದಾರ್ಯವಿರಬಲ್ಲುದು ! ಕೇವಲ ನೀಚರಾಗಿ ಅಧಃಪತನಗೊಂಡವರೂ ಮೃದುನುಡಿಗಳಿಂದ ಸನ್ಮಾರ್ಗ ಪ್ರವರ್ತಕರಾಗಬಲ್ಲರು—ಎಂಬುದನ್ನು ಬ್ರೆಟ್‌ಹಾರ್ಟ್ ತನ್ನ ಕಥೆಗಳಲ್ಲಿ ನಿರೂಪಿಸಿದ್ದಾನೆ. ಆತನ ಕಥೆಗಳನ್ನು 'ಭಾವತೆ'ಯ ಮಟ್ಟದ(Sentimentalism)ವೆಂದು ಕೆಲವು ವಿಮರ್ಶಕರು ತೆಗಳಿದ್ದಾರೆ. ಇದು ಸ್ವಲ್ಪಮಟ್ಟಿಗೆ ನಿಜವೆಂದು ಇಟ್ಟುಕೊಂಡರೂ ಆತನ ಅಮೂಲ್ಯವಾದ ಕಥಾವಸ್ತುಗಳಿಗಾಗಿ ಆತನನ್ನು ಮುಕ್ತಕಂಠದಿಂದ ಹೊಗಳಲೇಬೇಕು. ಆತನ ಕಥೆಗಳನ್ನು ಕುರಿತು 'ಆಲ್‌ಫ್ರೆಡ್ ಸಿ ವಾರ್ಡ್' ಎಂಬಾತನು 'ಬ್ರೆಟ್‌ಹಾರ್ಟನ ಗುರಿ, ಬಹು ಜನರಿಗೆ ಆದಷ್ಟು ಹೆಚ್ಚಾಗಿ ಆನಂದವನ್ನು ಕೊಡಬಲ್ಲ ಕಥೆಗಳನ್ನು ಹೇಳುವುದು. ಈ ಒಂದು ಗುರಿಯನ್ನು ಸಾಧಿಸುವುದೆಂದರೆ ಕಲೆಯ ಹಲವು ಸಮಸ್ಯೆಗಳನ್ನು ಬಿಡಿಸಿದಂತೆ; ಎಲ್ಲ ಜನರ ಎಲ್ಲ ಆಸಕ್ತಿಗಳನ್ನೂ ತೃಪ್ತಿಪಡಿಸಬಲ್ಲ ಕಥಾರೀತಿಯನ್ನು ಅನುಸರಿಸುವುದು ನೀತಿಯ ಪ್ರಪಂಚದಲ್ಲಿ ಅಷ್ಟೇನೂ ಪುರಸ್ಕೃತವಾಗದಿದ್ದರೂ ಕಲಾಪ್ರಪಂಚದಲ್ಲಿ ಅದು ಒಂದು ಆದರ್ಶದ ಅನ್ವೇಷಣೆಯೆಂದು ಭಾವಿಸಬಹುದು' ಎಂದು ಹೊಗಳಿದ್ದಾನೆ.೧

ಪೋನನ್ನು ಅನುಕರಿಸಿ, ಆತನಂತೆಯೇ ಪರಿಣಾಮಕರವಾದ ವಾತಾವರಣವನ್ನು ಸೃಷ್ಟಿಸುವುದರಲ್ಲಿ ಬಹು ಗಟ್ಟಿಗನಾದವನು 'ಆಂಬ್ರೋಸ್ ಬಿಯರ್ಸ್' ಎಂಬುವನು. ಆತನು ಅಮೆರಿಕದ ಅಂತರ್ಯುದ್ಧದಲ್ಲಿ ಭಾಗವಹಿಸಿದ್ದವನು. ಆತನು ಯುದ್ಧದಲ್ಲಿ ತೊಡಗಿದ್ದಾಗ ಕಂಡ ಭಯಂಕರ ಕಾರ್ಯಗಳನ್ನು ಪ್ರತಿಭಟಿಸಿ ಕಥೆಗಳನ್ನು ಬರೆದಿದ್ದಾನೆ. ಈ ಕಥೆಗಳಲ್ಲಿ ಅಂತಹ ಅದ್ಭುತವಾದ ಕಲಾಶಕ್ತಿಯೇನೂ ಕಂಡುಬರದಿದ್ದರೂ, ಹೃದಯದಲ್ಲಿ ದಯೆಯನ್ನೂ ಕಾರುಣ್ಯವನ್ನೂ ಕೆರಳಿಸಬಲ್ಲ ಶಕ್ತಿಯಿದೆ. ಆತನ ಕಥೆಗಳಲ್ಲಿ 'ಎ ಹಾರ್ಸ್‌ಮನ್ ಇನ್ ದಿ ಸ್ಕೈ' (ಆಕಾಶದಲ್ಲಿರುವ ಕುದುರೆಸವಾರ)೨ ಎಂಬ

---

೧ The Modern Short Story—p. 48.

೨ 'ಜೇನು-ಬೆಲ್ಲ'ದ 'ಅಶ್ವಾರೋಹಿ' ಈ ಕಥೆಯ ಆಧಾರದಿಂದ ಬರೆದುದು.

ಕಥೆ ಅತ್ಯುತ್ತಮವಾದುದು. ಕಥೆಯ ಬೆಳವಣಿಗೆಯಲ್ಲಿ ಕಾಣಬರುವ ಮಿತ, ಅದು ಕೊನೆಗೊಳ್ಳುವುದರಲ್ಲಿ ತೋರಿಬರುವ ಚಾತುರ್ಯ—ಅದನ್ನು ಇವು ಅತ್ಯುತ್ತಮವಾದ 'ಸಣ್ಣ ಕಥೆ'ಗಳ ಸಾಲಿನಲ್ಲಿ ಸೇರಲು ಅರ್ಹವಾಗಿ ಮಾಡಿವೆ.

ಅಮೆರಿಕದ ಸಣ್ಣ ಕಥೆಗಾರರಲ್ಲಿ ಹೆನ್ರಿ ಜೇಮ್ಸ್‌ನ ಹೆಸರನ್ನು ಮರೆಯುವಂತಿಲ್ಲ. ಆತನ 'ದಿ ಟರ್ನ್ ಆಫ್ ದಿ ಸ್ಕ್ರೂ' ಎಂಬುದು ಜಗತ್ತಿನ ದೆವ್ವದ ಕಥೆಗಳಲ್ಲೆಲ್ಲಾ ಅಗ್ರಗಣ್ಯವಾದುದೆಂದು ಆಲ್‌ಫ್ರೆಡ್ ಸಿ ವಾರ್ಡ್ ಎಂಬ ವಿಮರ್ಶಕನು ಅದನ್ನು ಹೊಗಳಿದ್ದಾನೆ. ಜೇಮ್ಸ್‌ನು ಪ್ರಜ್ಞಾಶೀಲನಾದ ಕಲೆಗಾರ; ಕಲ್ಪನಾಶಕ್ತಿಯ ಎಲ್ಲೆ ಕಟ್ಟುಗಳನ್ನು ಅರಿತವನಾದುದರಿಂದ ಅಸಾಧ್ಯವಾದುದಕ್ಕೆ ಕೈಯಿಕ್ಕುವುದೇ ಇಲ್ಲ. ಪೋ-ನಂತೆ ಈತನೂ ಪರಿಣಾಮಕರವಾದ ಸನ್ನಿವೇಶಗಳನ್ನು ಸೃಷ್ಟಿಸುವನಾದರೂ, ಇಬ್ಬರ ಕಲೆಗೂ ಅಗಾಧವಾದ ವ್ಯತ್ಯಾಸವಿದೆ. ಪೋ–ಗೆ ಓದುಗರ ಮನಸ್ಸೆಂಬುದು ತನ್ನ ಮನಬಂದಂತೆ ರೂಪಿಸಿಕೊಳ್ಳಬಹುದಾದ ಒಂದು ಸಾಧನವೆಂಬ ಭಾವನೆ. ಜೇಮ್ಸ್‌ನ ಬರಹವಾದರೊ, ಆತನೇ ತನ್ನ ಗ್ರಂಥಗಳ ಮುನ್ನುಡಿಯಲ್ಲಿ ಹೇಳಿಕೊಂಡಿರುವಂತೆ, 'ಕೆಡುಕಿನ ವಿಚಾರದಲ್ಲಿ ಓದುಗರಿಗಿರುವ ಭಾವನೆಯನ್ನು ಸಾಂದ್ರಗೊಳಿಸಿ ಅವರೇ ಅದನ್ನು ಕುರಿತು ಆಲೋಚಿಸುವಂತೆ ಮಾಡುತ್ತದೆ. ಹಾಗೆ ಮಾಡಿದಾಗ, ಬಾಯ್ಬಿಟ್ಟು ಹೇಳಿದಾಗ ಕಂಡುಬರುವ ಕಲಾತಂತ್ರದ ಶೈಥಿಲ್ಯ ನಿವಾರಿತವಾದಂತಾಗುತ್ತದೆ.' ಹೀಗೆ ಓದುಗರಲ್ಲಿ ಕಥೆಗಾರನ ಅಭೀಷ್ಟವನ್ನು ಮೂಡಿಸುವುದರಲ್ಲಿ ಆತ ಬಹುಜಾಣ. 'ದಿ ಟರ್ನ್ ಆಫ್ ದಿ ಸ್ಕ್ರೂ' ಆತನ ಈ ಕಲಾಜಾಣ್ಮೆಗೆ ಅತ್ಯುತ್ತಮ ಉದಾಹರಣೆ. ಅದರಲ್ಲಿ ಬರುವ ಯಾವ ಪರಿಣಾಮವೂ ಆಕಸ್ಮಿಕವಲ್ಲ. ಆತನು ಸ್ಪಷ್ಟವಾಗಿ ಬಾಯ್ಬಿಟ್ಟು ವಿಷಯ ನಿರೂಪಣೆ ಮಾಡಿದಾಗ ಉದ್ದೇಶಪೂರ್ವಕವಾಗಿಯೇ ಹಾಗೆ ಮಾಡಿರುತ್ತಾನೆ; ಓದುಗನ ಕಲ್ಪನೆ ಅಲ್ಲಿ ಲಗಾಮಿಲ್ಲದೆ ಹೋಗಕೂಡದೆಂದು ಆತನ ಆಶಯ. ವಾಚ್ಯವಾಗಿ ಹೇಳದಿದ್ದ ಕಡೆ ಓದುಗನ ಊಹೆಗೆ ಬೇಕೆಂದೇ ಅವಕಾಶ ಕೊಟ್ಟಿರುವನೆಂದು ಅರ್ಥಮಾಡಿಕೊಳ್ಳಬೇಕು. 'ದಿ ಟರ್ನ್ ಆಫ್ ದಿ ಸ್ಕ್ರೂ' ನಲ್ಲಿ ಆದಿ-ಅಂತ್ಯಗಳಿಲ್ಲ. ಆತನೇ ಹೇಳಿರುವಂತೆ 'ಘಟನೆಯ ಯಾವುದೋ ಒಂದು ಘಟ್ಟದಲ್ಲಿ ಕಥೆ ಆರಂಭವಾಗುತ್ತದೆ.' ಮುಗಿಯುವುದೂ ಯಾವುದೋ ಒಂದು ಅನಿರ್ದಿಷ್ಟವಾದ ಘಟ್ಟದಲ್ಲಿ. ಆದಿ-ಅಂತ್ಯಗಳನ್ನು ಓದುಗನು ಹೇಗೆ

ಊಹಿಸಿಕೊಂಡರೂ ಕಥೆಗೆ ಲೋಪ ಬರುವುದಿಲ್ಲ. ಕಥೆಯ ಬರವಣಿಗೆಯಲ್ಲಿ ಮಾತ್ರ, ಕ್ಷಣಕ್ಷಣಕ್ಕೂ ನಮ್ಮ ಅರಿವಿಲ್ಲದಂತೆಯೇ ಯಾವುದೋ ಒಂದು ನವೀನತೆ ಹೊಸದಾಗಿ ಪ್ರವೇಶಿಸಿ, ಕಥಾಪ್ರವಾಹದೊಡನೆ ಸಂಗಮಗೊಳ್ಳುತ್ತಿರುವಂತೆ ಭಾಸವಾಗುತ್ತದೆ. ಜೇಮ್ಸ್‌ನ ಈ ಕಥೆಯಲ್ಲಿ ಕಲೆ ಆದರ್ಶವನ್ನು ಸಾಧಿಸಿದೆಯೆಂದು ಹೇಳಬಹುದು. ಆದರೆ ಆತನದು ಪರಸ್ಪರ ಸಹಾಯಕ ಕಲೆ; ಓದುಗನು ತನ್ನ ಮನಸ್ಸನ್ನು ಕಥೆಗಾರನ ಮನಸ್ಸಿನೊಂದಿಗೆ ಹೊಂದಿಸಿಕೊಳ್ಳದ ಹೊರತು ಅದು ಫಲಕಾರಿಯಾಗದು. ತೂಕಡಿಸುವ ಜಡಭರತ ಜೇಮ್ಸ್‌ನ ಕಲಾಸ್ವಾರಸ್ಯವನ್ನು ಅರಿತುಕೊಳ್ಳಲಾರ.

ಅಮೆರಿಕದ ಕಥೆಗಾರರಲ್ಲಿ ಅತ್ಯಂತ ಹೆಸರಾದವನು ಓ ಹೆನ್ರಿ. ಇಂಗ್ಲಿಷ್ ಓದುವವರಿಗೆ ಅಮೆರಿಕದ ಭಾಷಾಪರಿಚಯವಾದುದು ಮೊಟ್ಟಮೊದಲು ಈ ಓ ಹೆನ್ರಿಯ ಕಥೆಗಳಿಂದ. ಬ್ರೆಟ್ ಹಾರ್ಟನ ತರುವಾಯ ಅಜ್ಞಾತವಾಸದಲ್ಲಿದ್ದ ಅಮೆರಿಕದ ಸಣ್ಣ ಕಥೆಗಳ ಕಲೆ, ಓ ಹೆನ್ರಿಯಿಂದ ಮತ್ತೆ ತಲೆಯೆತ್ತಿತೆಂದು ಹೇಳಬೇಕು. ಹೆನ್ರಿ ಜೇಮ್ಸ್ ಅಮೆರಿಕಾ ಜೀವನವನ್ನು ಚಿತ್ರಿಸುವುದರಲ್ಲಿ ಅಷ್ಟೇನೂ ಆಸಕ್ತನಾಗಿರಲಿಲ್ಲ; ಆಂಬ್ರೋಸ್ ಬಿಯರ್ಸ್‌ನು ಅಮೆರಿಕದಿಂದ ಹೊರಗೆ ಹೆಚ್ಚು ಪರಿಚಿತನಾಗಲೇ ಇಲ್ಲ. ಆದ್ದರಿಂದ ಸಣ್ಣ ಕಥೆಗಳ ಖ್ಯಾತಿ ವಿಶ್ವವ್ಯಾಪ್ತವಾಗುವಂತೆ ಮಾಡಿದ ಕೀರ್ತಿ ಬ್ರೆಟ್ ಹಾರ್ಟನ ನಂತರ ಓ ಹೆನ್ರಿಗೇ ಸಲ್ಲಬೇಕು. ಆತನ ಹಿಂದಿನ ಅಮೆರಿಕನರೆಲ್ಲರೂ ತಮ್ಮ ಸಾಹಿತ್ಯಸೃಷ್ಟಿಗೆ ಇಂಗ್ಲಿಷ್ ಭಾಷೆಯನ್ನೇ ಬಳಸುತ್ತಿದ್ದರು. ಓ ಹೆನ್ರಿ ಅಮೆರಿಕನ್ ಭಾಷೆಯನ್ನು ತನ್ನ ಕಥೆಗಳಲ್ಲಿ ಬಳಕೆಗೆ ತಂದ. ಸಾಹಿತ್ಯದಲ್ಲಿ ಬಳಸುವ ಭಾಷೆಯಲ್ಲಿ ಒಂದು ಬಗೆಯಾದ ಪ್ರಜಾಪ್ರಭುತ್ವವನ್ನು ಬಳಕೆಗೆ ತಂದ. ಹೃದಯಂಗಮವಾದ ನುಡಿಸಿರಿಗೆಯಿಂದ ಇತರ ಕಾವ್ಯಕರ್ತರು ತಮ್ಮ ಅಮರತೆಯನ್ನು ಪಡೆದಿದ್ದರೆ, ಓ ಹೆನ್ರಿಯ ಹಿರಿಮೆಗೆ ಆತನ ಅಂದಚೆಂದಗಳಿಲ್ಲದ ಬರವಣಿಗೆಯೆ ಕಾರಣವಾಗಿದೆ. ಓ ಹೆನ್ರಿ ಎಂಬುದು ಬರಿಯ ಕಾವ್ಯನಾಮ. ಆತನ ನಿಜವಾದ ಹೆಸರು ವಿಲಿಯಂ ಸಿಡ್ನಿ ಪೋರ್ಟರ್ ಎಂದು. ಕಾವ್ಯಸೃಷ್ಟಿಗೆ ಕೈಹಾಕುವ ಮುಂಚೆ ಆತ, ಜೀವನದ ನಾನಾ ಮುಖಗಳಲ್ಲಿ ತೊಳಲಿ ಬೇಕಾದಷ್ಟು ಜೀವನದ ಅನುಭವವನ್ನು ಪಡೆದಿದ್ದ. ಆದ್ದರಿಂದಲೇ ಲೀಲಾಜಾಲವಾಗಿ ಕಥೆಗಳ ಸುರಿಮಳೆಯನ್ನು ಸುರಿಸುತ್ತಾನೆ ಆತ. ಕಣ್ಣಿಗೆ ಕಂಡುದನ್ನೆಲ್ಲಾ ಆತ ಒಂದು

ಕಥೆಯಾಗಿ ಕಟ್ಟಿಡುತ್ತಾನೆ. ಇದರಿಂದ ಆತನ ಕಥಾವಲ್ಲರಿಯಲ್ಲಿ ಪಿರಕಿ ಹುವ್ವುಗಳಿಗೆ ಏನೂ ಕೊರತೆಯಿಲ್ಲ.[೧] ಅಸಂಖ್ಯಾತವಾದ ಆತನ ಕಥೆಗಳಲ್ಲಿ ಅತ್ಯುತ್ತಮವಾದವುಗಳೂ ಅತಿ ಸಾಧಾರಣವಾದವುಗಳೂ ಒಟ್ಟಿಗೆ ಬೆರೆತು ಕೊಂಡಿವೆ. ಅಲ್ಲದೆ ಆತನ ಕಥಾವಸ್ತುಗಳಲ್ಲಿ ಹೆಚ್ಚು ವೈವಿಧ್ಯವಿಲ್ಲ. ಒಂದೇ ವಸ್ತುವೇ ಬೇರೆ ಬೇರೆ ವೇಷಗಳಲ್ಲಿ ಹೊರಬರುತ್ತದೆ. ಆತನ ಪಾತ್ರಗಳೆಲ್ಲಾ ಸಾಮಾನ್ಯವಾಗಿ ಸಮಾಜದ ಕೆಳ ದರ್ಜೆಗೆ ಸೇರಿದವುಗಳೇ. ಎಲ್ಲರೂ ಪೊಲೀಸರ ಪರಿಚಯವುಳ್ಳ ಗೆಳೆಯರೇ. ಅನೇಕ ಸಂಪುಟಗಳಲ್ಲಿರುವ ಆತನ ಕಥೆಗಳಲ್ಲಿ 'ದಿ ಫೋರ್ ಮಿಲಿಯನ್' ಎಂಬುದು ಆತನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ. ಅದರ ಮುನ್ನುಡಿಯಲ್ಲಿ ಓ ಹೆನ್ರಿ 'ಕೆಲವು ಕಾಲದ ಹಿಂದೆ ನ್ಯೂಯಾರ್ಕಿನಲ್ಲಿ ನಾವು ಗಮನಿಸಬೇಕಾದ ಜನ ನಾನೂರೇ ನಾನೂರೆಂದು ಭಾವನೆಯಿತ್ತು. ಈಗ ಜನಗಣತಿಯಲ್ಲಿ ಜಾಣನಾದವನು ಬಂದು ಅದು ನಾನೂರಲ್ಲ, ನಾಲ್ವತ್ತು ಲಕ್ಷವೆಂದು ಈ ಕಥೆಗಳ ಮೂಲಕ ತೋರಿಸಹೊರಟಿದ್ದಾನೆ' ಎಂದು ಹೇಳಿಕೊಂಡಿದ್ದಾನೆ. ಮಾನವೀಯತೆಯಿಂದ ಕೂಡಿದ ಆತನ ಉದಾರ ಮನಸ್ಸು ಅಧಃಪತನಕ್ಕಿಳಿದ ಅಲ್ಪಜೀವಿಗಳಿಗೂ ಒಂದು ವ್ಯಕ್ತಿತ್ವವನ್ನು ಕಲ್ಪಿಸಿದೆ. 'ದಿ ಫೋರ್ ಮಿಲಿಯನ್'ನಲ್ಲಿ ಇರುವ ಇಪ್ಪತ್ತೈದು ಕಥೆಗಳಲ್ಲಿ ಲೆಕ್ಕವಿಲ್ಲದಷ್ಟು ವಿವಿಧ ರೀತಿಯ, ಉದ್ಯೋಗದ, ಅಭಿರುಚಿಯ, ಯೋಗ್ಯತೆಯ ಜನ ತುಂಬಿಕೊಂಡಿದ್ದಾರೆ. ಓ ಹೆನ್ರಿಯ ಕಥಾತಂತ್ರ ಅದ್ಭುತವಾದುದು. ತನ್ನ ಕಲಾಪ್ರಯೋಗದಿಂದ ಆತ ಓದುಗರನ್ನು ಒಪ್ಪಿಸಬಲ್ಲ, ಮೆಚ್ಚಿಸಬಲ್ಲ, ಹೊಗಳಿಕೆಯ ಕಾಣಿಕೆಯನ್ನು ಪಡೆಯಬಲ್ಲ. ಆತನ ಹಾಸ್ಯರಸೋತ್ಪಾದನ ಶಕ್ತಿ ಡಿಕನ್ಸ್‌ನನ್ನು ಜ್ಞಾಪಕಕ್ಕೆ ತರುತ್ತದೆ. ಡಿಕನ್ಸ್‌ನು ಓ ಹೆನ್ರಿಗಿಂತ ಹೆಚ್ಚು ಪ್ರತಿಭಾಶಾಲಿಯಿರಬಹುದು; ಆದರೆ ಅಸಮಂಜಸವಾದ

---

೧ ಹನ್ನೆರಡು ಸಂಪುಟಗಳ ಆತನ ಕಥೆಗಳಲ್ಲಿ ಒಂದು ಸಂಪುಟವಷ್ಟು ಕಾಳು; ಉಳಿದುದೆಲ್ಲಾ ಹೊಟ್ಟು, ಹುಲ್ಲು. ಇಂತಹ ಕಥೆಗಳಲ್ಲಿ ಜೀವನವಿಮರ್ಶೆಯನ್ನಾಗಲಿ ಆಲೋಚನೆಯ ಆಳವನ್ನಾಗಲೀ ನಿರೀಕ್ಷಿಸುವುದು ಆಶಾಭಂಗಕ್ಕೆ ಕಾರಣ. ಇವುಗಳಲ್ಲಿರುವ ಹಾಸ್ಯ ಕೂಡ ಕೇವಲ ತೆಳುವು. ಹೃದಯವನ್ನು ಹಿಂಡುವಂತಹ ಕರುಣಾಮಯ ಸನ್ನಿವೇಶಗಳು ಬಂದರೂ ಅವುಗಳಲ್ಲಿ ರುದ್ರತೆಯಾಗಲಿ, ಭವ್ಯತೆಯಾಗಲಿ ಇಲ್ಲ.

ಹೋಲಿಕೆಯನ್ನು ತಂದು ನಗುವನ್ನು ಕೆರಳಿಸುವುದರಲ್ಲಿ ಇಬ್ಬರೂ ಪ್ರವೀಣರು. 'ದಿ ಕಾಪ್ ಅಂಡ್ ದಿ ಆಂಥೆಮ್' ಆತನ ವ್ಯಂಗ್ಯ ಹಾಸ್ಯಕ್ಕೆ ಅತ್ಯುತ್ತಮ ಉದಾಹರಣೆ. 'ಅನ್ ಅಡ್‌ಜಸ್ಟ್‌ಮೆಂಟ್ ಆಫ್ ನೇಚರ್' ಕಥೆಯಲ್ಲಿ ಪ್ರತಿಭಾನ್ವಿತವಾದ ಪದಪ್ರಯೋಗದ ಜಾಣ್ಮೆಯನ್ನು [ಅಡಿಗೆಯ ದಾಸಿ ಮಿಲ್ಲಿ ಅನ್ನಾಧಿದೇವತೆ(The Goddes of the Grub)ಯಂತೆ!] ನಾವು ಕಾಣ ಬಹುದು. ಓ ಹೆನ್ರಿಗೆ ಬಹು ಆತುರ. ಸ್ವಲ್ಪ ತಾಳ್ಮೆಯಿಂದ ಇದ್ದಿದ್ದರೆ ಆತನು ಜಗತ್ತಿನ ಕಥೆಗಾರರಿಗೆಲ್ಲಾ ಗುರುವಾಗಬಹುದಿತ್ತು. ಆತನ 'ದಿ ಗಿಫ್ಟ್ ಆಫ್ ದಿ ಮ್ಯಾಗೀ' ಎಂತಹ ಸಂವಿಧಾನಚಾತುರ್ಯವನ್ನು ಒಳಗೊಂಡಿದೆ! ಅದೆಂತಹ ಅಚ್ಚುಕಟ್ಟು! ಕಥೆಗಾರನ ಕಲಾಶಕ್ತಿ ಇಲ್ಲಿ ಪರಿಣತಿಗೊಂಡಿದೆ. ಪರಿಣಾಮ ರಮಣೀಯವಾದ ಈ ಕಥೆಯೊಂದೇ ಸಾಕು, ಆತನನ್ನು ವಿಶ್ವದ ಕಥೆಗಾರರಲ್ಲಿ ಹಿರಿಯನನ್ನಾಗಿ ಪರಿಗಣಿಸಲು.

ಅಮೇರಿಕದಲ್ಲಿ ಆರಂಭವಾದ ಸಣ್ಣ ಕಥೆ ಜಗತ್ತಿನಲ್ಲೆಲ್ಲಾ ಪ್ರಸಾರವಾಯಿ ತಾದರೂ, ಮೊದಲು ಅಮೆರಿಕದ ಜೊತೆಜೊತೆಯಲ್ಲಿಯೇ ವೃದ್ಧಿಗೊಂಡುದು ಫ್ರಾನ್ಸ್‌ನಲ್ಲಿ. ಫ್ರೆಂಚ್ ಕಥೆಗಾರರಲ್ಲಿ ಮಾಪಸಾಂತ್ ಅಗ್ರಗಣ್ಯ. ಜಗತ್ತಿನ ಸಣ್ಣ ಕಥೆಗಾರರಿಗೆಲ್ಲ ಆತನನ್ನು ಗುರುವೆಂದು ಕರೆಯಬಹುದು. ಆ ಅದ್ವಿತೀಯ ಕಲಾವಿದನ ಕೈಲಿ ಕಗ್ಗಲ್ಲು ಚಿನ್ನವಾದೀತು; ಕೊರಡು ಕೊನರೀತು. ಸಮಾಜ ವನ್ನು ನೂತನ ದೃಷ್ಟಿಯಿಂದ ನಿರೀಕ್ಷಿಸಿ, ಸ್ವಂತಜೀವನಕ್ಕೆ ಒದಗಿದ ಅನುಭವ ಗಳಿಂದುಂತೆ, ರಸವತ್ತಾದ ಚಿತ್ರಗಳನ್ನು ಅತ್ಯಂತ ಮಾರ್ಮಿಕವಾಗಿ ಚಿತ್ರಿಸು ತ್ತಾನೆ. ಆತನ ನಿರೂಪಣಾಶಕ್ತಿ ಸೂತ್ರಬದ್ಧವಾದುದು; ಕಥೆಯ ತಿರುಳು ಹೃದಯಭೇದಕವಾದುದು. ಆತನು ಗೋಳುಬಾಳಿನ ಅಗ್ನಿಕುಂಡಕ್ಕೆ ಸಿಕ್ಕಿ ದಗ್ಧನಾಗಿಹೋದರೂ, ಕಲೆಗೆ ಕೈಹಾಕಿದುದರಿಂದ ಅಮರನಾಗಿಹೋಗಿದ್ದಾನೆ. ಚೆಕಾವ್, ಕೊಲೆಟ್, ಜೀಡ್ ಮೊದಲಾದ ಪ್ರಸಿದ್ಧ ಬರಹಗಾರರು ಈತನ ಕಲೆಯನ್ನು ತಮ್ಮ ಆದರ್ಶವಾಗಿ ಸ್ವೀಕರಿಸಿದ್ದಾರೆ. ಆದರೆ ಆತನು ಮೇಲಿಂದ ಮೇಲೆ ಪ್ರೇಮದ ವಿಕಾರವನ್ನೇ, ಲೈಂಗಿಕ ಜೀವನವನ್ನೇ ಕಥಾವಸ್ತುವಾಗಿ ಒಳಸಿಕೊಂಡುದರಿಂದಲೂ ಉನ್ನತ ಆದರ್ಶಗಳಿಲ್ಲದುದರಿಂದಲೂ ಆತನ ಕೀರ್ತಿಗೆ ಸ್ವಲ್ಪಮಟ್ಟಿಗೆ ಅಪೋಹ ಬಂದಿದೆ. ಆದರೂ ಆತನ 'ದಿ ನೆಕ್-ಲೇಸ್', 'ಬೌಲ್ ಡಿ ಸೂಫ್', 'ಮೂನ್‌ಲೈಟ್' ಮೊದಲಾದ ಕಥೆಗಳು

ವಸ್ತುವಿನ ದೃಷ್ಟಿಯಿಂದಲೂ ಘನತೆಯನ್ನು ಪಡೆದಿವೆ; ಉದಾತ್ತವಾದ ಧ್ಯೇಯವನ್ನೂ ಒಳಗೊಂಡಿವೆ.

ಮೆರಿಮೀ, ಗೌಟಿಯರ್, ಡೌಡೆಟ್—ಮೊದಲಾದುವು ಫ್ರೆಂಚ್ ಸಣ್ಣ ಕಥೆಗಾರರ ಇತರ ದೊಡ್ಡ ಹೆಸರುಗಳು.

ಅಮೆರಿಕದಲ್ಲಿ ಹುಟ್ಟಿದ ಸಣ್ಣ ಕಥೆಯು ಕಲೆ ಅರ್ಧ ಶತಮಾನಗಳಾದ ಮೇಲೆ ಇಂಗ್ಲೆಂಡಿನಲ್ಲಿ ಆರಂಭವಾಯಿತು. ರಾಬರ್ಟ್ ಲೂಯಿ ಸ್ಟೀವನ್‌ಸನ್ ೧೮೭೮ರಲ್ಲಿ ಪ್ರಕಟಮಾಡಿದ 'ನ್ಯೂ ಅರೇಬಿಯನ್ ನೈಟ್ಸ್' ಕಥೆಗಳು, ಇದಾದ ಒಂಬತ್ತು ವರ್ಷಗಳ ಮೇಲೆ, ರಡ್‌ಯಾರ್ಡ್ ಕಿಪ್ಲಿಂಗ್‌ನು ಬರೆದ 'ಪ್ಲೈನ್ ಟೇಲ್ಸ್ ಫ್ರಮ್ ಹಿಲ್ಸ್' ಎಂಬ ಕಥಾಗುಚ್ಛಗಳೊಡನೆ ಇಂಗ್ಲಿಷರ 'ಸಣ್ಣ ಕಥೆ'ಗಳ ಚಕ್ರ ಉರುಳಲಾರಂಭಿಸಿತು. ಇದಕ್ಕೂ ಮೊದಲೇ, ಜಾರ್ಜ್ ಮೆರಿಡಿತ್ ಮೊದಲಾದವರು ಸಣ್ಣ ಕಥೆಗಳಿಗೆ ಕೈಹಾಕಿದ್ದರಾದರೂ, ಅವರ ಸಾಹಿತ್ಯಸೃಷ್ಟಿಯಲ್ಲಿ ಅವುಗಳಿಗೆ ಅಗ್ರಸ್ಥಾನವಿಲ್ಲ; ಬಹುಶಃ ಅವರೆಲ್ಲರೂ ಪ್ರಮುಖವಾಗಿ ಕಾದಂಬರಿಕಾರರು. ಮೆರಿಡಿತ್ತನು ಸಣ್ಣ ಕಥೆಯ ಕಲೆಯ ಬೆಳವಣಿಗೆಗೆ ಸಹಾಯಕನಾಗದಿದ್ದರೂ ಅದನ್ನು ಸಾಹಿತ್ಯವೆಂದು ಪುರಸ್ಕರಿಸಿದ. ಆತನ 'ಕ್ಲೊ', 'ಜೆನರಲ್ ಓಪ್ಲ್', 'ಮಾರ್ಟಿನ್ ಟಿನ್‌ಮನ್' ಮೊದಲಾದವುಗಳಲ್ಲಿ ಸಜೀವ ಪಾತ್ರಸೃಷ್ಟಿಯನ್ನು ನಾವು ಕಾಣುತ್ತೇವೆ. ವೇಗವಾಗಿ ಹರಿದುಹೋಗುವ ಮನೋಭಾವಗಳನ್ನು ಹಿಡಿದು ಅವುಗಳಿಗೆ ಅಸ್ತಿತ್ವ ಕೊಡುವುದರಲ್ಲಿ, ವಿದ್ಯುದ್ವೇಗದಿಂದ ಕಂಡು ಕಣ್ಮರೆಯಾಗುವ ಚಿತ್ರಗಳನ್ನು ಕಣ್ಣೆದುರಿಗೆ ಹಿಡಿದಿಡುವುದರಲ್ಲಿ ಆತನು ಬಹು ಜಾಣ. ಆದರೂ ಆತನ ಸಣ್ಣ ಕಥೆಗಳು ಆತನ ಕಾದಂಬರಿಗಳಷ್ಟು ಪ್ರಭಾವಯುತವಾಗಿಲ್ಲ. ಮೊಟ್ಟಮೊದಲನೆಯ ಸುಪ್ರಸಿದ್ಧ ಸಣ್ಣ ಕಥೆಗಾರನೆಂಬ ಕೀರ್ತಿ ಇಂಗ್ಲಿಷರಲ್ಲಿ ಸ್ಟೀವನ್‌ಸನ್ನನಿಗೇ ಸಲ್ಲಬೇಕು. ಆತನ ಕಲ್ಪನಾಶಕ್ತಿ ಬಹು ದೀರ್ಘಕಾಲ ಧಾರಾಕಾರವಾಗಿ ಹರಿದುಹೋಗತಕ್ಕುದಲ್ಲ. ಸುಮಾರು ನಾಲ್ವತ್ತು ಐವತ್ತು ಪುಟಗಳನ್ನು ಬರೆಯುವುದರಲ್ಲಿ ಅದು ನಿಂತುಹೋಗುತ್ತದೆ. ಹೀಗೆ ನಿಂತ ಕಲ್ಪನೆಯ ಕುದುರೆಯನ್ನು ಹೊಡೆದು ಮುಂದುವರಿಸಬೇಕು. ಕಪ್ಪೆಯಂತೆ ಕುಪ್ಪಳಿಸುವ ಈ ಕಲ್ಪನೆಗೆ, ಕಾದಂಬರಿಗಿಂತಲೂ ಸಣ್ಣ ಕಥೆಗಳನ್ನು ಬರೆಯುಲು ಸೌಲಭ್ಯ ಹೆಚ್ಚು. ಆದ್ದರಿಂದಲೇ ಸ್ಟೀವನ್‌ಸನ್ನನ ಕಾದಂಬರಿಗಿಂತಲೂ ಆತನ ಸಣ್ಣ ಕಥೆಗಳು

ಜಗತ್ಪ್ರಸಿದ್ಧವಾಗಿವೆ. ಆತನು ಬಾಲ್ಯದಲ್ಲಿ ತನ್ನ ದಾದಿಯಾದ ಆಲಿಸನ್ ಕನ್ನಿಂಗ್‌ಹ್ಯಾಂ ಎಂಬುವಳಿಂದ ಬೇಕಾದಷ್ಟು ಕಥೆಗಳನ್ನು ಕೇಳಿದ್ದನಂತೆ; ಆ ಕಥೆಗಳೆಲ್ಲವೂ ಆತನಿಂದ ಅಮರವಾದವು. ಆತನ ಕಥೆಗಳಲ್ಲಿ 'ವಿಲ್ ಆಫ್ ದಿ ಮಿಲ್', 'ಮಾರ್ಕ್‌ಹೀಂ', 'ಥ್ರಾನ್ ಜಾನೆಟ್'—ಈ ಮೂರು ಅತ್ಯಂತ ಜನಪ್ರಿಯವಾದುವು. ಆತನಿಗೆ ಕಥೆ ಬರೆಯುವುದೆಂಬುದು ಕೇವಲ ಒಂದು ವಿನೋದವಾಗಿರಲಿಲ್ಲ; ಆತನ ಪ್ರತಿಯೊಂದು ಕಥೆಯಲ್ಲಿಯೂ ನೀತಿ ನಿರೂಪಣೆಯಿದೆ. ಈ ಉದ್ದೇಶವನ್ನು ಸಾಧಿಸಲು ತಕ್ಕಂತೆ ತನ್ನ ಕಲೆಯನ್ನು ಪ್ರಯತ್ನಪೂರ್ವಕವಾಗಿ ಬಳಸಬಲ್ಲ ದಕ್ಷ ಆತ. 'ವಿಲ್ ಆಫ್ ದಿ ಮಿಲ್' ಇದರಲ್ಲಿ, ಉದ್ಯೋಗವಿಲ್ಲದ ಬಾಳು ಜೀವಶ್ರವದ ಬಾಳು ಎಂಬ ತತ್ವವನ್ನು ನಿರೂಪಿಸುತ್ತಿದ್ದರೆ, 'ಮಾರ್ಕ್‌ಹೀಂ'ನಲ್ಲಿ ಮಠಾಧಿಪತಿಗಳು ವ್ಯಾಸಪೀಠದ ಮುಂದೆ ಕುಳಿತು ಬೋಧಿಸಬಹುದಾದ ನೀತಿಯೆಲ್ಲವೂ ಭಟ್ಟಿಯಿಳಿದಿದೆ. ಆತನ 'ಥ್ರಾನ್ ಜಾನೆಟ್' ಒಂದು ದೆವ್ವದ ಕಥೆ. ರೋಮಾಂಚಕಾರಕವಾದ ಈ ಕಥೆಯಲ್ಲಿ ಪ್ರೌಢಿಮೆಯನ್ನು ಅರಸುವುದು ರಂಗಸ್ಥಳದಲ್ಲಿ ನಿಜವಾದ ಬಿರುಗಾಳಿ, ಬಿರುಮಳೆಗಳನ್ನು ನಿರೀಕ್ಷಿಸಿದಂತೆ; ಅದರ ಹಿರಿಮೆಯಿರುವುದು ಓದುಗರ ಮನಸ್ಸನ್ನು ಗಾಢವಾಗಿ ಸೆರೆಹಿಡಿಯಬಲ್ಲ ಕಥಾನಿರೂಪಣೆಯಲ್ಲಿ. ಸ್ಟೀವನ್‌ಸನ್ ಇತರ ಇಂಗ್ಲಿಷ್ ಬರಹಗಾರರಿಗೆ ಮಾರ್ಗದರ್ಶಕನಾದ ಆಢ್ಯನೆಂಬುದಷ್ಟೇ ಅಲ್ಲ; ಆತನ ನಿರೂಪಣಾವಿಧಾನ ಅನನ್ಯಾದೃಶವಾದುದು. ಆತನ ಕಥೆಗಳಲ್ಲಿ ಎಷ್ಟೇ ಕಥೆಯಿರಲಿ, ಎಷ್ಟೇ ಅನಾವಶ್ಯಕ ವಿಷಯಗಳನ್ನು ಅವುಗಳಲ್ಲಿ ಆತನು ತುಂಬಿ ತುಂಬಿರಲಿ, ಓದುಗರ ಆಸಕ್ತಿಯನ್ನು ಅವಿಚಲವಾಗಿ ತಡೆದಿಡಬಲ್ಲ ಮಹಾಶಕ್ತಿಯಿದೆ ಆತನಿಗೆ. ಮಿತಿಯಂತೂ ಆತನ ಮನೆದೈವ. 'ಹೆಚ್ಚಾದುದನ್ನು ಕಿತ್ತುಹಾಕುವುದೇ ಕಲೆ' ಎಂಬ ವಾಲ್ಟರ್ ಪೀಟರನ ಸೂಕ್ತಿಗೆ ಸ್ಟೀವನ್‌ಸನ್ನನ ಬರವಣಿಗೆ ಉದಾಹರಣೆಯಾಗಿದೆ. ಆತನು ಒಂದೇ ವಾಕ್ಯದಲ್ಲಿ ಅದರ ಅಭಿಪ್ರಾಯವನ್ನು ಹುದುಗಿಸುತ್ತಾನೆ. ಇದರ ಮೇಲೆ, ಆತನ ಕಥೆಗಳಲ್ಲೆಲ್ಲಾ ಜನಪ್ರಿಯವಾದ ವಿಷಯವಿವೇಚನೆಯೇ. ಯಾವುದೊಂದು ಗುಂಪಿಗೆ ಮಾತ್ರ ಅನ್ವಯಿಸುವಂತಹ ಕಥಾವಸ್ತುಗಳನ್ನು ಆತ ಕಣ್ಣೆತ್ತಿಯೂ ನೋಡುವುದಿಲ್ಲ. ಮಾನವಜಾತಿಗೆ ಸಾಮಾನ್ಯವಾದ ವಿಷಯಗಳನ್ನು ಆಯ್ದುಕೊಳ್ಳುವುದು ಆತನ ಜನಪ್ರಿಯತೆಗೆ ಬಹುಮುಖ್ಯವಾದ ಕಾರಣ. ಸಂಪ್ರದಾಯದ ಅಂಧಶ್ರದ್ಧೆ

ಗಳನ್ನು ಧೈರ್ಯದಿಂದ ಆತನು ಇದಿರಿಸುವುದನ್ನು ಕಂಡಾಗ ಓದುಗರು ಅದನ್ನು ಮೆಚ್ಚಿ ಆತನಲ್ಲಿ ಆತ್ಮೀಯತೆಯನ್ನು ತಾಳುತ್ತಾರೆ.

ಇಂಗ್ಲಿಷ್ ಸಣ್ಣ ಕಥೆಗಳಲ್ಲಿ ಎಚ್. ಜಿ. ವೆಲ್ಸ್‌ನ ಕಥೆಗಳು ತಮ್ಮದೇ ಆದ ಒಂದು ವಿಶಿಷ್ಟ ಕಾಂತಿಯಿಂದ ಕಂಗೊಳಿಸುತ್ತಿವೆ. ಆತನು ವಿಶ್ವವಿಖ್ಯಾತ ನಾದ ವಿಜ್ಞಾನಿ; ಆಳವಾಗಿ ಆಲೋಚಿಸುವ ಸ್ವಭಾವದವನು. ಈ ಸ್ವಭಾವ ದೊಡನೆ ಊಹೆ-ಕಲ್ಪನೆಗಳು ಕಲೆತು ಆತನ ಕಥನಕಲೆಗೆ ಜೀವ ತುಂಬಿದೆ. ಆದಿಯಲ್ಲಿ ಆತ ಬರೆದ ಕಥೆಗಳೆಲ್ಲವೂ ಹೊತ್ತುಕಳೆಯುವ ವಿನೋದಕ್ಕಾಗಿ ಬರೆದವುಗಳು. ಇವುಗಳಲ್ಲಿ ಆತನ ಕಲ್ಪನೆಯ ಕುದುರೆ ಲಂಗುಲಗಾಮಿಲ್ಲದೆ ನಾಗಾಲೋಟದಿಂದ ಸಾಗಿದೆ. ಕಥನಕಲೆಯ ನೀತಿನಿಯಮಗಳನ್ನು ಪಾಲಿಸುವು ದಿರಲಿ, ಆತನು ಅದನ್ನು ಬಲವಾಗಿ ವಿರೋಧಿಸುತ್ತಾನೆ. ನೀತಿನಿಯಮಗಳ ಪಾಲನೆಯೆಂಬುದು ಕಲೆಯ ಅವನತಿಸೂಚಕವೆಂದು ತನ್ನ 'ದಿ ಕಂಟ್ರಿ ಆಫ್ ದಿ ಬ್ಲೈಂಡ್' ಎಂಬ ಕಥಾಸಂಗ್ರಹದ ಮುನ್ನುಡಿಯಲ್ಲಿ ಕಟುವಾಗಿ ಟೀಕಿಸಿ ದ್ದಾನೆ. ಆದರೂ ಆತನ ಕಥೆಗಳು ಸಾಮಾನ್ಯವಾಗಿ ಸ್ವೀಕೃತ ನಿಯಮಗಳಿಗೆ ವಿರುದ್ಧವಾಗಿಯೇನೂ ಇಲ್ಲ.

ಇಂಗ್ಲಿಷ್ ಸಾಹಿತ್ಯಾಭ್ಯಾಸಿಗಳಲ್ಲಿ ಕ್ವಿಲ್ಲರ್ ಕೌಚ್‌ನ ಹೆಸರನ್ನು ಕೇಳದವರೇ ಅಪೂರ್ವ. ಆತನ ವಿಮರ್ಶೆಗಳು ಎಂದರೆ ರಸದುಣಿಸು. ಆತನ ಸಣ್ಣ ಕಥೆಗಳೂ ಅಷ್ಟೇ; ಎಲ್ಲೆಲ್ಲಿಯೂ ಹೂಮಳೆ, ಹೂಬಿಸಿಲು. ಸಂತೋಷ ದಿಂದ ನಲಿಯುವ ಜನರನ್ನು ಕುರಿತು ಮನೋಹರವಾಗಿ ಬರೆಯುತ್ತಾನೆ. ಅಸಹ್ಯಕರವಾದ ಜನರನ್ನು ಕುರಿತು ಬರೆದಾಗಲೂ ಆತನ ಕಥೆಗಳು ಮಧುರ ವಾಗಿಯೇ ಇರುತ್ತವೆ. ಆತನ ಕಥೆಗಳಲ್ಲಿ ಬರುವ ದೆವ್ವಗಳು ಕೂಡ ಹಿತಕರ ವಾದ, ಸುಖದಾಯಕವಾದ ಸಾಧು ದೆವ್ವಗಳು. ಮನಸ್ಸನ್ನು ಹಗುರಮಾಡಿ ಕೊಂಡು ನಲಿಯಬೇಕೆಂದರೆ ಕ್ವಿಲ್ಲರ್ ಕೌಚ್‌ನ ಕಥೆಗಳನ್ನು ಓದಬೇಕು. ಜೀವನದ ಕಾರುಣ್ಯಮಯ ಸನ್ನಿವೇಶಗಳನ್ನು ಆತನು ಗಮನಿಸುವುದೇ ಇಲ್ಲ ವೆಂದೇನೂ ಅಲ್ಲ. ಆತನೇನೂ ಕೇವಲ ವಿದೂಷಕನಲ್ಲ. ಕೇವಲ ಗಹಗಹಿಸಿ ನಗುವಂತಹ ಆತನ ಕಥೆಗಳ ಗರ್ಭದಲ್ಲಿ ರುದ್ರತೆ ಅಡಗಿದೆ. 'ಸ್ಪೈಸ್ಸ್-ಇನ್ ಆರ್ಕೆಡಿ'ಗಿಂತ ತಮಾಷೆಯಾದ ಕಥೆಯುಂಟೆ? 'ಒನ್ಸ್ ಅಬ್ರಾಡ್ ದಿ ಲಗ್ಗರ್' ಎಂಬುದೊ? ಆದರೂ ಆಲೋಚನಾಪರನಾದವನು ಅವುಗಳನ್ನು

ಬರಿಯ ಹಾಸ್ಯ ಚಿತ್ರಗಳೆಂದು ಎಂದಿಗೂ ಗ್ರಹಿಸಲಾರ. ಕೌಚ್‌ನು ಕಣ್ಣೀರು ಕರೆಯುತ್ತಾ 'ಹೋ' ಎಂದು ಅಳುವುದನ್ನು ಒಪ್ಪುವುದಿಲ್ಲ. ನೋವಾದಷ್ಟೂ ನಗುವುದು, ಆ ನಗುವಿನ ಮಧ್ಯೆ ದುಃಖವನ್ನು ಮರೆಯುವುದು, ಆತನ ಸ್ವಭಾವ. ದೆವ್ವಗಳು, ಪುರಾಣಪುರುಷರು, ಅಲೌಕಿಕ ಪಾತ್ರಗಳು, ಮಾಟಮಂತ್ರದ ದೇವತೆಯರು—ಇವುಗಳನ್ನೆಲ್ಲಾ ತನ್ನ ಕಥೆಗಳಲ್ಲಿ ಆತ ಲೀಲಾಜಾಲವಾಗಿ ಪ್ರಯೋಗಿಸಿ ಸಫಲನಾಗಿದ್ದಾನೆ.

ಮಾಡಿದುದು ಮಹತ್ಕಾರ್ಯವಲ್ಲದಿದ್ದರೂ ಮಾಡಿದಷ್ಟನ್ನು ಅಚ್ಚುಕಟ್ಟಾಗಿ ಮಾಡುವ ಸ್ವಭಾವದವನು ಡಬ್ಲ್ಯು. ಡಬ್ಲ್ಯು. ಜೇಕಬ್ಸ್. ಆತನ ಹೆಸರು ಸಾಹಿತ್ಯ ಚರಿತ್ರೆಯಲ್ಲಿ ಅಮರವಾಗದಿರಬಹುದು; ಜೀವಿತಕಾಲದಲ್ಲಿಯಂತೂ ಆತನಿಗೆ 'ಅಭಿನವ ಅರಿಸ್ಟೋಫೇನ್ಸ್'ನೆಂಬ ಹೊಗಳಿಕೆ ಬಂದುಹೋಗಿದೆ. ಮಾನವ ಸಾಮಾನ್ಯವಾದ ಆಸೆ-ಆಕಾಂಕ್ಷೆಗಳ ಪ್ರಸಕ್ತಿ ಆತನ ಬರಹದಲ್ಲಿ ಕಾಣಬರುವುದಿಲ್ಲ. ತನಗೆ ಚಿರಪರಿಚಿತವಾದ ಸಮಾಜ ಎಂದರೆ ಥೇಮ್ಸ್ ನದಿಯ ಮೇಲೆ ದೋಣಿಯಲ್ಲಿ ತಿರುಗಾಡುವ ಕೀಳು ದರ್ಜೆಯ ಜನ; ತಾನು ಚಿತ್ರಿಸುತ್ತಿರುವುದು ಅವರಲ್ಲಿ ಕಾಣಬಹುದಾದ ಅಶ್ಲೀಲ ವಿಷಯಲಂಪಟತನ; ಘನತೆಯಿಂದ ಕೂಡಿದ ಸುಗುಣಾನ್ವಿತರನ್ನು ವರ್ಣಿಸುವ ಪ್ರಸಕ್ತಿಯು ಆತನ ಗುರಿಯಲ್ಲ; ಮಾನವಸ್ವಭಾವದದಿವ್ಯಭಾವಗಳನ್ನು ತೋರಿಸುವುದಕ್ಕೂ ಆತ ಹೊರಡುವುದಿಲ್ಲ. ಜನರಲ್ಲಿ ಲಘುಹಾಸ್ಯವನ್ನು ಕೆರಳಿಸುವಷ್ಟರಿಂದಲೇ ಆತನು ಕೃತಾರ್ಥ; ಬುದ್ಧಿಯನ್ನು ಕೆದಕಿ ಕುತೂಹಲವನ್ನು ಕೆರಳಿಸುವುದು ಆತನಿಗೆ ಅಗತ್ಯವಿಲ್ಲ. ಆತನ 'ಮೆನಿ ಕಾರ್ಗೋಸ್' ಕಥಾಸಂಗ್ರಹದಲ್ಲಿನ ಎಲ್ಲ ಕಥೆಗಳಲ್ಲಿಯೂ ಈ ಒಂದೇ ಏಕನಾದದ ಬೇರೆ ಬೇರೆ ಧ್ವನಿಗಳನ್ನು ಕೇಳುತ್ತೇವೆಯೇ ಹೊರತು, ಕಥಾವಸ್ತುವಿನ ವೈವಿಧ್ಯತೆಯೇನೂ ಇಲ್ಲ. ಆತನ ಕಥೆಗಳು ಅತ್ಯಂತ ರಮ್ಯವಾದುವೆಂದು ಪ್ರಸಿದ್ಧವಾಗಿವೆಯಾದರೂ, ಕಾಕ್ನಿ ಇಂಗ್ಲಿಷಿನ ಸ್ವರೂಪವನ್ನು ಅರಿಯದವರಿಗೆ ಅವುಗಳಲ್ಲಿನ ಹಾಸ್ಯ ಅರ್ಥವಾಗುವುದಿಲ್ಲ.

ಇಂಗ್ಲಿಷ್ ಸಣ್ಣ ಕಥೆಗಾರರ ಸಾಲಿನಲ್ಲಿ ಕಡೆಯದಾದರೂ (ಕಾಲದ ದೃಷ್ಟಿಯಿಂದಲೇ ಹೊರತು ಯೋಗ್ಯತೆಯ ದೃಷ್ಟಿಯಿಂದಲ್ಲ) ಬಹುಮುಖ್ಯವಾದುದೆಂದರೆ, ಕ್ಯಾಥರೀನ್ ಮ್ಯಾನ್ಸ್‌ಫೀಲ್ಡಳದು. ೧೯೨೦ರಲ್ಲಿ ಆಕೆಯ ಪ್ರಥಮ ಸಂಪುಟ, 'ಬ್ಲಿಸ್' ಪ್ರಕಟವಾಗಿ ಅತ್ಯಂತ ಜನಪ್ರಿಯವಾಯಿತು.

ಆಕೆಯ ಎರಡನೆಯ ಸಂಪುಟ 'ದಿ ಗಾರ್ಡನ್ ಪಾರ್ಟಿ', ಸುಮಾರು ಎರಡು ವರ್ಷಗಳ ಅನಂತರ ಪ್ರಕಟವಾಗುವುದರೊಳಗಾಗಿ 'ಬ್ಲಿಸ್' ಹಲವು ಸಲ ಪುನರ್ಮುದ್ರಣವಾಯಿತು. ಈಕೆಯ ಕಥೆಗಳಲ್ಲಿ—ಮುಖ್ಯವಾಗಿ 'ಬ್ಲಿಸ್' ಕಥಾಸಂಗ್ರಹದಲ್ಲಿ—ರಷ್ಯನ್ ಕಥೆಗಾರ ಚಕೋವ್‌ನ ಪ್ರಭಾವ ಸ್ಪಷ್ಟವಾಗಿ ಒಡಮೂಡಿದೆ. ಕ್ಯಾಥರೀನಳ ಬರಹ ಬಹಳ ಹಿತಮಿತವಾದುದು. ತನ್ನ ವ್ಯಕ್ತಿತ್ವದ ಸುಳಿವೇ ಇಲ್ಲದಂತೆ ಓದುಗರನ್ನು ಕಥೆಯ ಘಟನೆಗಳಲ್ಲಿ ಅಥವಾ ಪಾತ್ರಗಳಲ್ಲಿ ತಲ್ಲೀನಗೊಳಿಸಬಲ್ಲ ಅದ್ಭುತ ಕಲಾಕೌಶಲವಿದೆ ಆಕೆಯಲ್ಲಿ. ಆಕೆಯ ಎರಡನೆಯ ಸಂಗ್ರಹ ಪ್ರಕಟವಾದ ಕೆಲವೇ ದಿನಗಳಲ್ಲಿ ಆಕೆ ಅಕಾಲ ಮೃತ್ಯುವಿಗೆ ತುತ್ತಾಗಿ ಸಣ್ಣ ಕಥೆಗಳ ಜಗತ್ತಿಗೆ ಅಪಾರವಾದ ನಷ್ಟವಾದಂತಾಯಿತು. ಲೂಯಿ ಸ್ಟೀವನ್‌ಸನ್, ಅರ್ವಿಂಗ್ ಮೊದಲಾದವರು ಇಂಗ್ಲಿಷ್ ಸಣ್ಣ ಕಥೆಗಾರರಲ್ಲಿ ಬಹಳ ಹೆಸರಾಂತವರು.

ಜಗತ್ತಿನ ಅತ್ಯಾಧುನಿಕ ಸಣ್ಣ ಕಥೆಗಾರರ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿ, ನೂತನ ಪಂಥವೊಂದಕ್ಕೆ ಆದ್ಯನಾದವನು ಆಂಟನ್ ಚಕೋವ್. ಇದ್ದುದು ಇದ್ದಂತೆಯೇ ಜೀವನ ಚಿತ್ರವನ್ನು ಮೂಡಿಸುವ ನಿರಾಭರಣ ಭವ್ಯ ಸೌಂದರ್ಯ ಈತನ ಬರಹದ ಹಿರಿತನ. ಆತನ ವಾಸ್ತವತೆ ಹಿಂದಿನ ವಾಸ್ತವತೆಯಿಂದ ಭಿನ್ನವಾದುದು. ಆತನು ಸಂಪ್ರದಾಯವನ್ನು ಮುರಿಯುವವರೆಗೆ ವಾಸ್ತವತೆಯೂ ಒಂದು ಲಕ್ಷಣಬದ್ಧವಾಗಿತ್ತು; ಒಂದು ಆರಂಭ, ಒಂದು ಬೆಳವಣಿಗೆ, ಒಂದು ಕೊನೆ—ಇವು ಕಥೆಯಲ್ಲಿ ಅನಿವಾರ್ಯವಾಗಿದ್ದುವು. ಚಕೋವ್‌ನ ಕಥೆಗಳಲ್ಲಿ ಲಾಕ್ಷಣಿಕರು ನಿರೀಕ್ಷಿಸುವ ಆರಂಭ-ಕೊನೆಗಳೇ ಇಲ್ಲ.

೩

ಪಾಶ್ಚಾತ್ಯರಲ್ಲಿ ಹುಟ್ಟಿ ಹರಡಿದ ಸಣ್ಣ ಕಥೆ ಭರತಖಂಡವನ್ನು ಪ್ರವೇಶಿಸಿ, ಬಹುಬೇಗ ಎಲ್ಲೆಡೆಯಲ್ಲಿಯೂ ಹರಡಿತು. ಮೊಟ್ಟಮೊದಲು ಅದು ಇಣಿಕು ಹಾಕಿದುದು ಬಂಗಾಳದಲ್ಲಿ. ವಿಶ್ವಕವಿ ರವೀಂದ್ರನಾಥ ಠಾಕೂರರು ತಮ್ಮ ಕವಿಸಹಜವಾದ ಶೈಲಿಯಲ್ಲಿ ಸಣ್ಣ ಕಥೆಗಳ ಚಕ್ರವನ್ನು ಭಾರತದಲ್ಲಿ ಹರಿಯಬಿಟ್ಟರೆಂದು ಹೇಳಬಹುದು. ಶರತ್‌ಚಂದ್ರ ಚಟರ್ಜಿ ಬಂಗಾಳದ ಮತ್ತೊಬ್ಬ ಹಿರಿಯ ಸಾಹಿತಿಗಳು. ಅವರು ಬಹುದೊಡ್ಡ ಕಾದಂಬರಿಕಾರರೆಂದು ಪ್ರಸಿದ್ಧ

ರಾಗಿದ್ದಾರೆ. ಅವರೂ, ಸ್ವರ್ಣಕುಮಾರಿ, ಶಾಂತಾದೇವಿ, ಸೀತಾದೇವಿ ಮುಂತಾದವರೂ ಬಂಗಾಳದ ಸಣ್ಣ ಕಥೆಗಳನ್ನು ಹುಲುಸಾಗಿ ಬೆಳೆಸಿರುವರೆಂದು ಹೇಳುತ್ತಾರೆ.

ಬಂಗಾಳದಲ್ಲಿ ಹುಟ್ಟಿ ಹರಿಯಹೊರಟ ಸಣ್ಣ ಕಥೆಗಳ ಪ್ರವಾಹ ಭರತ ಖಂಡದ ಮೂಲೆಮೂಲೆಗೂ ಪ್ರವಹಿಸಿತು; ಕನ್ನಡನಾಡಿಗೂ ಹರಿದುಬಂದಿತು; ನಮ್ಮ ನಾಡನ್ನು ಪ್ರವೇಶಿಸಿದ ಅತ್ಯಲ್ಪಕಾಲದಲ್ಲಿಯೇ ಅಮರವಾದ ಪಾವನ ಗಂಗಾಜಲವಾಯಿತು. ಇಂದು ನಮ್ಮ ಸಣ್ಣ ಕಥೆಗಳು ಜಗತ್ತಿನ ಮತ್ತಾವ ಸಣ್ಣ ಕಥೆಗಳೊಡನೆ ಬೇಕಾದರೂ ಸ್ಪರ್ಧಿಸಬಲ್ಲ ಚೈತನ್ಯವನ್ನು ಪಡೆದಿವೆ.

ಕನ್ನಡದಲ್ಲಿ ಸಣ್ಣ ಕಥೆಗಳನ್ನು ಮೊಟ್ಟಮೊದಲು ನಾಟಿದವರಾರೆಂಬ ವಿಚಾರದಲ್ಲಿ ಬೇಕಾದಷ್ಟು ಚರ್ಚೆ ನಡೆದಿದೆ. ದಿವಂಗತ ಪಂಜೆ ಮಂಗೇಶ ರಾಯರಿಗೆ ಆ ಕೀರ್ತಿ ಸಲ್ಲಬೇಕೆಂಬುದು ನಿರ್ವಿವಾದವೆಂದು ತೋರುತ್ತದೆ. ಮಂಗಳೂರು ಪ್ರಾಂತ್ಯದಲ್ಲಿ ದಿವಂಗತ ಪಂಜೆಯವರೂ, ಅವರ ಅನಂತರ ಎಂ. ಎನ್. ಕಾಮತರೂ, ಉತ್ತರ ಕರ್ಣಾಟಕದಲ್ಲಿ ಕೆರೂರು ವಾಸುದೇವಾಚಾರ್ಯರೂ, ಮೈಸೂರು ಪ್ರಾಂತ್ಯದಲ್ಲಿ ಮಾಸ್ತಿ ವೆಂಕಟೇಶಯ್ಯಂಗಾರ್ಯರವರೂ (ಶ್ರೀನಿವಾಸ), ಸ್ವಲ್ಪ ಹಿಂಚು ಮುಂಚು, ಏಕಕಾಲದಲ್ಲಿಯೇ ಸಣ್ಣ ಕಥೆಗಳಿಗೆ ಕೈಹಾಕಿದರು. ಪಂಜೆ ಮಂಗೇಶರಾಯರ ಸಣ್ಣ ಕಥೆಗಳಾವುವೂ ನಮಗೆ ದೊರೆತಿಲ್ಲ. " ಅವರ 'ಭಾರತ ಶ್ರವಣ' ಒಂದು ವಿನೋದ ಚಿತ್ರ " ಎಂದು ಶ್ರೀಮಾನ್ ಕೆ. ನರಸಿಂಹಮೂರ್ತಿಗಳು ತಮ್ಮ ಲೇಖನ(ಪ್ರ.ಕ. ಸಂಪುಟ ೨೧, ಸಂಚಿಕೆ ೨ ಮತ್ತು ೩)ದಲ್ಲಿ ಬರೆದಿದ್ದಾರೆ. ಆದರೆ ಕಾಮತರ 'ಅಂದಿನ ಆ ಊರು' ಎಂಬ ಐದು ಕಥೆಗಳ ಸಂಕಲನವೊಂದು ಈಚೆಗೆ ಪ್ರಕಟವಾಗಿದೆ. ಅದರ ಉಪೋದ್ಘಾತದಲ್ಲಿ ಶ್ರೀ ಮಂ. ಗೋವಿಂದ ಪೈಗಳವರು, ೧೯೧೨ರ ಸರಿ ಸುಮಾರಿನಲ್ಲಿಯೇ ಕಾಮತರ ಕಥೆಗಳ ಪ್ರಕಟಣೆಯಾದಂತೆ ತಮಗೆ ಜ್ಞಾಪ್ತಿಯಿರುವುದಾಗಿ ತಿಳಿಸಿದ್ದಾರೆ. ಕಾಮತರ ಕಥೆಗಳು ಸಣ್ಣ ಕಥೆಗಳೆಂಬುದು ನಿಸ್ಸಂದೇಹ. ಅವರ ಕಥೆಗಳಲ್ಲಿ ಶ್ರೀಮಾನ್ ಗೋವಿಂದ ಪೈಗಳು ಹೇಳುವಂತೆ 'ಸುಖದ ಸಿಹಿಯೂ ಇದೆ, ದುಃಖದ ಕಹಿಯೂ ಇದೆ; ಸಾಮಾನ್ಯವನ್ನು ಅಸಾಮಾನ್ಯವೆನಿಸುವ, ಅಸಾಮಾನ್ಯವನ್ನು ನೈಜವೆನಿಸುವ ಆದೊಂದು ಕೌಶಲವೂ ಇದೆ.' ಕಥೆಗಳ ಉದ್ದಕ್ಕೂ ಮೃದುಮಧುರವಾದ ಹಾಸ್ಯ ಮಿನುಗಿ

ಮಿಂಚುತ್ತದೆ. ಆದರೆ ಸಾಹಿತ್ಯದಲ್ಲಿ ಅವುಗಳಿಗೆ ಒಂದು ಸ್ಥಾನ ದೊರೆಯುವಂತೆ ಪ್ರಭಾವಯುತವಾಗಿ ಸಣ್ಣ ಕಥೆಗಳನ್ನು ಬರೆದ ಕೀರ್ತಿ ಮಾತ್ರ ಶ್ರೀಮಾನ್ ಶ್ರೀನಿವಾಸರಿಗೆ ಸಲ್ಲತಕ್ಕುದು. ಉಳಿದ ಶ್ರೇಷ್ಠ ಕಥೆಗಾರರೆಲ್ಲರೂ ಅವರ ಮಾರ್ಗಾನುಯಾಯಿಗಳು, ಅಥವಾ ಅವರ ಕಥೆಗಳಿಂದ ಹುರಿಗೊಂಡು, ಸ್ಫೂರ್ತಿಗೊಂಡು, ಬರೆಯುಹೊರಟವರು. ಹೀಗೆ ಕನ್ನಡ ಸಣ್ಣ ಕಥೆಗಾರರಿಗೆ ಶ್ರೀನಿವಾಸರು ಮಾರ್ಗದರ್ಶಕರಾದರು. ಅವರ ಕಥನಕಲೆ ರಂಗಪ್ಪನ ಕಥಾಮಾಲೆಯಲ್ಲಿ ಅಂಕುರಿಸಿ, ಕ್ರಮಕ್ರಮವಾಗಿ ದಾಂಗುಡಿಯಿಟ್ಟು ಹಬ್ಬಿ ಹರಡಿ, ಹಲವು ಸಂಪುಟಗಳಷ್ಟು ಬೆಳೆದುಹೋಗಿದೆ. ಬೃಹತ್ತು–ಮಹತ್ತುಗಳೆರಡರಲ್ಲೂ ಅವರು ಅಗ್ರಗಣ್ಯರೇ. ಅವರ ಕಥೆಗಳಲ್ಲಿ ವಸ್ತು, ರೀತಿ—ಇವುಗಳ ವೈವಿಧ್ಯಕ್ಕೂ ಕೊರತೆಯಿಲ್ಲ. ಘಟನಾಪ್ರಮುಖವಾದ, ಸನ್ನಿವೇಶಪ್ರಮುಖವಾದ, ಪಾತ್ರಪ್ರಮುಖವಾದ ಕಥೆಗಳೆಂದು ವಿಭಾಗಿಸಲಿ, ಚಾರಿತ್ರಿಕ, ಧಾರ್ಮಿಕ ಅಥವಾ ಪೌರಾಣಿಕ, ಸಾಮಾಜಿಕ ಕಥೆಗಳೆಂದು ವಿಂಗಡಿಸಲಿ, ವಾಸ್ತವಿಕ, ಅದ್ಭುತ ಕಥೆಗಳೆಂದು ವ್ಯತ್ಯಾಸಗಳನ್ನು ಇಟ್ಟುಕೊಳ್ಳಲಿ, ಸುಖಾಂತ–ದುಃಖಾಂತಗಳೆಂದು ಭೇದವನ್ನು ಕಲ್ಪಿಸಲಿ—ಈ ಎಲ್ಲಾ ವಿಭಾಗಗಳಿಗೂ ಉದಾಹರಣೆಗಳನ್ನು ಎತ್ತಿಕೊಡಬಹುದು, ಶ್ರೀನಿವಾಸರ ಕಥಾಸಂಗ್ರಹಗಳಿಂದ. ತರುಣ ಬರಹಗಾರರಿಗೆ ಒಂದು ಹೊಸ ಬೆಳಕನ್ನು, ಶಕ್ತಿಯನ್ನು, ಸ್ಫೂರ್ತಿಯನ್ನು ನೀಡಿದ್ದಾರೆ ಅವರು. ಎಲ್ಲೆಲ್ಲಿಯೂ ಹೂಬಿಸಿಲಿನಂತಹ ಅವರ ಮನೋಭಾವ ತಾನೇತಾನಾಗಿ ಗೋಚರಿಸುತ್ತದೆ. ಜೇನ್ಸವಿಯಿಂದ ತುಂಬಿದ ಅವರ ಸರಳವಾದ ಮಾತುಗಳೋ, ಆ ಮಾತುಗಳನ್ನು ಒಳಗೊಂಡ ಅವರ ಸಣ್ಣ ಸಣ್ಣ ವಾಕ್ಯಗಳೋ, ಸತ್ಯ, ಸೌಂದರ್ಯ, ಶಾಂತಿಯ ಅವರ ಸಾತ್ವಿಕ ಭಾವನೆಗಳೋ, ಓದುಗರ ಸುಖದ ಬಟ್ಟಲು ತುಂಬುವಂತೆ ಅಲ್ಲಲ್ಲಿ ಬರುವ ಸಾರ್ಥಕವಾದ ಹಾಸ್ಯರಸವೋ—ಇವೆಲ್ಲವೂ ಸೇರಿ, ಶ್ರೀನಿವಾಸರಿಗೆ ಕನ್ನಡ ಸಣ್ಣ ಕಥೆಗಾರರಲ್ಲಿ ಅಗ್ರಸ್ಥಾನವನ್ನು ವಿಾಸಲಾಗಿರಿಸಿರುವುದಲ್ಲದೆ, ಕನ್ನಡ ಸಾಹಿತ್ಯಚರಿತ್ರೆಯಲ್ಲಿಯೇ ವಿಶಿಷ್ಟವಾದ ಒಂದು ಸ್ಥಾನವನ್ನು ಗಳಿಸಿಕೊಟ್ಟಿದೆ. ಇತರರು ಕೈಯಿಕ್ಕಲು ಹೆದರುವಂತಹ, ಕೈಯಿಕ್ಕಿದರೆ ರಸಾಭಾಸವಾಗುವಂತಹ ಸನ್ನಿವೇಶಗಳು ಸಹ ಶ್ರೀನಿವಾಸರ ದಿವ್ಯ ಕಲಾಶಕ್ತಿಯಲ್ಲಿ ಮಿಂದು ಪಾವನವಾಗುತ್ತವೆ. ಅವರ ಕಥೆಗಳಲ್ಲೆಲ್ಲಾ ಸಾಮಾನ್ಯವಾಗಿ ಹೆಣ್ಣುಜೀವನದ ಮೇಲಿನ ಒಂದು ಕನಿಕರ,

ಆದರ, ಗೌರವ, ವಿಶ್ವಾಸಗಳು ಪ್ರತ್ಯಕ್ಷವಾಗಿ ಅಥವಾ ಗುಪ್ತವಾಗಿ ಮನೆಮಾಡಿ ಕೊಂಡಿರುತ್ತವೆ. ಅನೇಕ ವೇಳೆ ಮನುಷ್ಯಸ್ವಭಾವದ ಸೂಕ್ಷ್ಮ ವ್ಯಾಪಾರಗಳನ್ನು ಶ್ರೀನಿವಾಸರು ಹೃದಯಂಗಮವಾಗಿ ವಿವರಿಸುತ್ತಾರೆ. ನಮ್ಮ ಸಮಾಜದ ಯಾವ ಮಟ್ಟದವರೂ ಅವರ ಕಥನನೈಪುಣ್ಯದಿಂದ ವಂಚಿತರಾಗಿಲ್ಲ. 'ಬೀದಿ ಯಲ್ಲಿ ಹೋಗುವ ನಾರಿ', 'ವೆಂಕಟಶಾಮಿಯ ಪ್ರಣಯ', 'ಜೋಗ್ಯೋರ ಅಂಜಪ್ಪ', 'ಮೊಸರಿನ ಮಂಗಮ್ಮ'—ಮೊದಲಾದ ಕಥೆಗಳಲ್ಲಿ ಅಜ್ಞಾತ ಜೀವಿಗಳಿಗೆ ಅಮರತೆ ದೊರೆತಿದೆ. ಸಮಾಜದ ಮಧ್ಯಮ ವರ್ಗದವರ ಮತ್ತು ಉತ್ತಮ ಮಟ್ಟದವರ ಜೀವನಗಳಿಗೆ ಉದಾಹರಣೆಗಳೇ ಅನಾವಶ್ಯಕ; ಅವರ ಕಥೆಗಳಲ್ಲಿ ಅರ್ಧಕ್ಕೂ ಹೆಚ್ಚಾಗಿ ಅವರ ಜೀವನ ನಿರೂಪಣೆಯಿದೆ. 'ಸಾರಿ ಪುತ್ರನ ಕೊನೆಯ ದಿನಗಳು' ಎಂಬ ಕಥೆಯಲ್ಲಿ ಕಥನಕಲೆಯ ಔನ್ನತ್ಯವನ್ನು ಮಾತ್ರವೇ ಅಲ್ಲ; ಧೀರಗಂಭೀರವಾದ ಪ್ರಶಾಂತ ವಾತಾವರಣದಲ್ಲಿ ಓದುಗರು ಶಾಂತಿರಸವನ್ನು ಸವಿದು ಪುಳಕಿತರಾಗುತ್ತಾರೆ. ಶ್ರೀನಿವಾಸರ ಸಣ್ಣ ಕಥೆ ಗಳಲ್ಲೆಲ್ಲಾ 'ಹೇಮಕೂಟದಿಂದ ಹಿಂದಿರುಗಿದಮೇಲೆ' ಎಂಬುದು ತನ್ನದೇ ಆದ ಒಂದು ಹೆಚ್ಚಳದಿಂದ ಬೆಳಗುತ್ತಿದೆ. ಕಥೆಗಾರರು ಪರಕಾಯ ಪ್ರವೇಶ ಮಾಡಿದವರಂತೆ ಕಾಳಿದಾಸನ ಚೇತನವನ್ನು ಓದುಗರಿಗೆ ದಿಗ್ದರ್ಶನಮಾಡಿಸಿ ದ್ದಾರೆ. ಇಲ್ಲಿನ ಪಾತ್ರಗಳೆಲ್ಲವೂ ಕಾಳಿದಾಸನ ನಾಟಕದಿಂದ ನೇರವಾಗಿ ಬಂದು ವ್ಯವಹರಿಸುತ್ತಿವೆ. ಅರಮನೆಯಿಂದ ಆಶ್ರಮಕ್ಕೆ ಬಂದ ಶಕುಂತಲೆ, ಜ್ವರ ಬಿಟ್ಟ ಮಗು ತಾಯ ಮಡಿಲಲ್ಲಿ ಮಲಗುವಂತೆ, ಮಲಗಿದಳಂತೆ—ಅವಳು! ಅರಮನೆಗಿಂತ ಋಷ್ಯಾಶ್ರಮ ಹೆಚ್ಚು ಸುಖಕರವೆಂದು ಆ ಹೆಣ್ಣಿನ ಹೃದಯದಲ್ಲಿ ಭಾವೋದಯವನ್ನು ಮೂಡಿಸುವ ಮುನ್ನ, ಶ್ರೀನಿವಾಸರ ಕೋಮಲ ಹೃದಯ ಆಕೆಯ ಪ್ರಣಯಜೀವನದ ಬೇಗೆಯನ್ನು ಕಂಡು ಎಷ್ಟು ನೊಂದಿದ್ದಿತೊ! ದಿವ್ಯವಾದ ತಮ್ಮ ಕಥೆಯ ಮೂಲಕ ಅವರು ನಿಷ್ಠುರವಾದ ಅದೃಷ್ಟಕ್ಕೆ ಆಹುತಿ ಯಾಗಿದ್ದ ಆ ಹೆಣ್ಣಿಗೆ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದಾರೆ. ಶ್ರೀನಿವಾಸರ ಕಥನಕಲೆ ಅರಳಿ ಹೂವಾಗಿದೆ 'ಹೇಮಕೂಟದಿಂದ ಹಿಂದಿರುಗಿದ ಮೇಲೆ' ಕಥೆಯಲ್ಲಿ. ಅವರ 'ಸುಬ್ಬಣ್ಣ' ಅವರ ಕಥನಕಲೆಯ ಅಮೃತಫಲ. ನಾದೋಪಾಸಕನಾದ ಸುಬ್ಬಣ್ಣನ ಜೀವನಚಿತ್ರ ಭಾವೋನ್ನತಿಯಿಂದ ಕೂಡಿ ರಸಮಯವಾಗಿದೆ. ಜೀವನದ ಕಟು ಅನುಭವಗಳ ಸುತ್ತಿಗೆಯ ಪೆಟ್ಟಿನಿಂದ

ದಿವ್ಯ ಮಂಗಳ ವಿಗ್ರಹವಾದ ಆತ್ಮವೊಂದರ ಪ್ರಗತಿ ಇಲ್ಲಿ ಹೆಜ್ಜೆಹೆಜ್ಜೆಗೂ ಪರಿಸ್ಫುಟವಾಗಿ ವ್ಯಕ್ತವಾಗಿದೆ. ಈ ಕಥೆಯಲ್ಲಿಯೂ, ಶ್ರೀನಿವಾಸರ ಇತರ ಕಥೆಗಳಲ್ಲಿ ಕಾಣುವಂತೆ, ಹೆಣ್ಣಿನ ಮೇಲಿನ ಗೌರವ ಹೆಪ್ಪುಗಟ್ಟಿ ಕುಳಿತಿದೆ. ಲಲಿತಮ್ಮನ ಚೇತನ ಸುಬ್ಬಣ್ಣನ ಚೇತನಕ್ಕಿಂತಲೂ ಹೆಚ್ಚು ಸುಸಂಸ್ಕೃತ ವಾದುದು. ಒಂದು ಮಾತಿನಲ್ಲಿ ಹೇಳುವುದಾದರೆ 'ಸುಬ್ಬಣ್ಣ' ಶ್ರೀನಿವಾಸರ ಕಥನಕಲಾಶೈಲದ ಅತ್ಯುನ್ನತ ಶಿಖರ; ಜಗತ್ತಿನ ಮತ್ತಾವ ಶ್ರೇಷ್ಠವಾದ ಸಣ್ಣ ಕಥೆಗೂ ಅದು ಕಡಿಮೆಯಲ್ಲ.

ಕನ್ನಡ ಸಣ್ಣ ಕಥೆಗಾರರಲ್ಲಿ ಶ್ರೀನಿವಾಸರನ್ನು ಬಿಟ್ಟರೆ ಎರಡನೆಯವರೇ ಶ್ರೀ 'ಆನಂದ'ರೆಂದು ನನ್ನ ಭಾವನೆ. ಇವರ ಮೊದಲ ಕೆಲವು ಕಥೆಗಳಲ್ಲಿ ಶ್ರೀನಿವಾಸರ ಪ್ರಭಾವ ಎದ್ದುಕಾಣುತ್ತದೆ. ಇದನ್ನು ಶ್ರೀ ಆನಂದರೇ ತಮ್ಮ 'ಕೆಲವು ಕಥೆಗಳು' ಕಥಾಸಂಕಲನದ ಮುನ್ನುಡಿಯಲ್ಲಿ ವಿವರಿಸಿದ್ದಾರೆ. ಅವರ ಎರಡನೆಯ ಸಂಕಲನಕ್ಕೆ ಮುನ್ನುಡಿಯನ್ನು ಬರೆಯುತ್ತಾ ಶ್ರೀನಿವಾಸರು, ಆನಂದರ 'ನಾನು ಕೊಂದ ಹುಡುಗಿ' ಎಂಬ ಕಥೆ ತಮ್ಮ ಕಥೆಗಿಂತಲೂ ಚೆನ್ನಾಗಿದೆಯೆಂದು (ಶಿಷ್ಯಾದಿಚ್ಛೇತ್ ಪರಾಜಯಂ) ತಮ್ಮ ಮಿತ್ರರೊಬ್ಬರು ಹೇಳಿದ ಮಾತನ್ನು ಎತ್ತಿಹೇಳಿ, ಆನಂದರ ಕಥನಕಲೆಯನ್ನು ಮುಕ್ತಕಂಠವಾಗಿ ಹೊಗಳಿದ್ದಾರೆ.

ಶ್ರೀನಿವಾಸರ ಮತ್ತೊಬ್ಬ ಪಟ್ಟಶಿಷ್ಯರು ಶ್ರೀ ಕೆ. ಗೋಪಾಲಕೃಷ್ಣ ರಾಯರು. ತಿಳಿಯಾದ ಸರಳವಾದ ಶೈಲಿಯಲ್ಲಿ, ಸುಲಭವಾದ ರೀತಿಯಲ್ಲಿ ಕಥೆಗಳನ್ನು ಬೆಳಸಿಕೊಂಡು ಹೋಗಬಲ್ಲರು, ಶ್ರೀ ರಾಯರು. ನಿರ್ದುಷ್ಟ ವಾದ ತಿಳಿಹಾಸ್ಯ ರಾಯರ ಕಥೆಗಳಲ್ಲಿ ಎಲ್ಲೆಲ್ಲಿಯೂ ಸುಳಿದು ಹೃದಯಂಗಮ ವಾಗಿರುತ್ತದೆ. ಅವರ 'ಕಂಡದ್ದು ನಾಲ್ಕು ಸರ್ತಿ', 'ರಾಮಾಶ್ವಮೇಧ', 'ಜಟಕಾ ಸಾಹೇಬು', 'ನಟ', 'ಪುಸ್ತಕಾವಲೋಕನ', 'ಕೊಂಪವರು ಯಾರು?'—ಇವು ಉತ್ತಮವಾದ ಕಥೆಗಳು.

ಕನ್ನಡ ಸಣ್ಣ ಕಥೆಗಾರರ ಮುಂದಿನ ಶ್ರೇಣಿಯಲ್ಲಿರುವವರಲ್ಲಿ ಶ್ರೀ 'ಭಾರತೀಪ್ರಿಯ'ರೂ ಒಬ್ಬರು. ಅವರ ಅದ್ಭುತ ಕಲಾಶಕ್ತಿ ಅವರ ಒಂದೊಂದು ಕಥೆಯಲ್ಲಿಯೂ ಒಡಮೂಡಿದೆ. ಭಾರತೀಪ್ರಿಯರ ವರ್ಣನಾವೈಖರಿಯೂ ಪದಪ್ರಯೋಗದ ಔಚಿತ್ಯವೂ ಉದ್ದಿಷ್ಟ ಸನ್ನಿವೇಶವನ್ನು ಕಣ್ಣಿಗೆ ಕಟ್ಟುತ್ತವೆ.

ನಿರ್ದುಷ್ಟವಾದ ಭಾಷೆ, ಸರಳವಾದರೂ ಶಿಥಿಲವಲ್ಲದ ಶೈಲಿ, ಗಂಭೀರವಾದ ಭಾವ— ಇವುಗಳಿಂದ ಕೂಡಿದ ಭಾರತೀಪ್ರಿಯರ ಕಥೆಗಳು ಕನ್ನಡ ಕಥಾಪ್ರೇಮಿಗಳಿಗೆ ಅತ್ಯಂತ ಪ್ರಿಯವಾದುವು.

ಸುಪ್ರಸಿದ್ಧ ಕನ್ನಡ ಕವಿಗಳಾದ ಶ್ರೀ ಕೆ. ವಿ. ಪುಟ್ಟಪ್ಪ ಮತ್ತು ಶ್ರೀ ಪು. ತಿ. ನರಸಿಂಹಾಚಾರ್ಯರು ಕನ್ನಡ ಸಣ್ಣ ಕಥೆಗಳ ಸೃಷ್ಟಿಗೂ ಕೈಹಾಕಿ ಕಥನಕಲೆಯ ಬೆಳವಣಿಗೆಗೆ ಸಹಾಯಮಾಡಿದ್ದಾರೆ. ಇಬ್ಬರೂ ಪ್ರಥಮತಃ ಕವಿಗಳು; ಉಳಿದ ಸಾಹಿತ್ಯವೇನಿದ್ದರೂ ಅದಕ್ಕೆ ದ್ವಿತೀಯ ಸ್ಥಾನವೇ. ಇಬ್ಬರ ಕಥೆಗಳಲ್ಲಿಯೂ ಕಲ್ಪನಾವಿಲಾಸವಿದೆ, ಸನ್ನಿವೇಶರಚನಾಸಾಮರ್ಥ್ಯವಿದೆ, ಕಥಾಸ್ವಾರಸ್ಯದಿಂದ ಓದುಗರನ್ನು ತೇಲಿಸಿಕೊಂಡು ಹೋಗಬಲ್ಲ ಕಥನಕಲೆಯಿದೆ. ಆದರೆ ಶೈಲಿಯಲ್ಲಿ ಇಬ್ಬರಿಗೂ ಬೇಕಾದಷ್ಟು ಭಿನ್ನತೆಯಿದೆ. ಕುವೆಂಪುರವರದು ಕಾವ್ಯಮಯವಾದ ಶೈಲಿ; ಇಂಗ್ಲಿಷಿನಲ್ಲಿ ಕ್ವಿಲ್ಲರ್ ಕೌಚ್‌ನ ಕಥೆಗಳಿದ್ದಹಾಗೆ, ಅವರ ಕಥೆಗಳು. ಸೂಕ್ಷ್ಮಭಾವದ ಲೀಲಾವಿಲಾಸ ಹೆಚ್ಚಿದಾಗ ಅವರ ಕಥೆಗಳು ಭಾವಗೀತದ ಒಪ್ಪವನ್ನು ಪಡೆದಾವು. ಅಲ್ಲಿನ ಕಲೆಯ ಬಲೆಯೇ ಅನೇಕ ವೇಳೆ ಓದುಗರ ಮನಸ್ಸನ್ನು ಸೆರೆಹಿಡಿದು ಹಾಕಲು ಸಮರ್ಥವಾಗುತ್ತದೆ. ಅವರ 'ಸಾಲದ ಮಗು', 'ಮೀನಾಕ್ಷಿಯ ಮನೇ ಮೇಷ್ಟರು' ಮೊದಲಾದ ಕಥೆಗಳು ಶ್ರೇಷ್ಠ ಕಥೆಗಳ ಸಾಲಿನಲ್ಲಿ ಸೇರಲು ಅರ್ಹವಾದುವು. ಪು. ತಿ. ನರಸಿಂಹಾಚಾರ್ಯರ ಕಥೆಗಳಲ್ಲಿ ನಾವು ಕಾವ್ಯಶೈಲಿಯನ್ನೇನೂ ಅಷ್ಟಾಗಿ ಕಾಣುವುದಿಲ್ಲ. ಸಣ್ಣ ಕಥೆಗಳಿಗೆ ಅಗತ್ಯವಾದ ಸರಳ ಶೈಲಿಯಲ್ಲಿಯೇ ಅವರ ಕಥೆಗಳು ಮುಂದುವರಿಯುತ್ತವೆ. ಇವರ 'ಲಿಂಗಿಯೋ ಲವಂಗಿಯೋ' ಎಂಬ ಕಥೆಯಲ್ಲಿ ಕಥಾತಂತು ಏರಿ, ಇಳಿದು, ಸುಳಿಸುತ್ತಿ, ಶಿಖರವೇರುತ್ತದೆ. ಅದೊಂದು ಕಲಾಮಯವಾದ ಉತ್ತಮ ಕಥೆ. ಅವರ 'ವೆಂಕೋಬರಾಯರು ಒಂದು ಪದ್ಯವನ್ನು ವಿಮರ್ಶಿಸಿದುದು' ಸಣ್ಣ ಕಥೆಯಲ್ಲಿನ ಒಂದು ಹೊಸ ಪ್ರಯೋಗವೆಂದು ಹೇಳಬಹುದು. ಕವಿಸಹಜವಾದ ಉದಾತ್ತತೆ, ರುಚಿ, ಶುದ್ಧಿಗಳು ಇಬ್ಬರು ಕವಿಗಳ ಕಥೆಗಳಲ್ಲಿಯೂ ಮನೆಮಾಡಿಕೊಂಡಿವೆ.

ಮೇಲಿನ ಈ ಇಬ್ಬರು ಕವಿಗಳಂತೆ ಶ್ರೀ ಜಿ. ಪಿ. ರಾಜರತ್ನಂರವರಾದರೂ ಪ್ರಥಮತಃ ಸಣ್ಣ ಕಥೆಗಾರರಲ್ಲದಿದ್ದರೂ (ಶ್ರೀ ರತ್ನರೇ 'ಸಣ್ಣ ಕಥೆಯೆಂದೊಡನೆ ಮನಸ್ಸನ್ನು ಮುತ್ತುವ ಹೆಸರುಗಳಲ್ಲಿ ರತ್ನನದು ಒಂದಲ್ಲ' ಎಂದು ತಮ್ಮ

'ಹತ್ತು ವರುಷ'ದಲ್ಲಿ ಹೇಳಿಕೊಂಡಿದ್ದಾರೆ.) ಅವರ 'ಬೆಳುದಿಂಗಳು' ಒಂದು ಒಳ್ಳೆಯ ಕಥಾಸಂಕಲನ. ಬೇರೆ ಎಡೆಗೆ ಹರಿದ ಅವರ ಒಲವು ಸಣ್ಣ ಕಥೆಗಳ ಕಡೆಗೆ ತಿರುಗಿದ್ದರೆ ಅವರು ಅದ್ವಿತೀಯರಾದ ಕಥೆಗಾರರಾಗುತ್ತಿದ್ದರು.

'ನಮ್ಮ ಊರಿನ ರಸಿಕರು', 'ಹಳ್ಳಿಯ ಚಿತ್ರಗಳು'—ಮೊದಲಾದ ಕಥನಚಿತ್ರಗಳಿಂದ ಕನ್ನಡಿಗರಿಗೆ ಚಿರಪರಿಚಿತರಾದ ಶ್ರೀ ಗೊರೂರು ರಾಮಸ್ವಾಮಯ್ಯಂಗಾರ್ಯರು 'ಶಿವರಾತ್ರಿ', 'ವೈಯಾರಿ' ಎಂಬ ಕಥಾಸಂಗ್ರಹಗಳಲ್ಲಿ ತಮಗೆ ಸ್ವಾಭಾವಿಕವಾದ ಮೃದುಮಧುರ ಹಾಸ್ಯವನ್ನು ಹೊರಹೊಮ್ಮಿಸಿದ್ದಾರೆ. ಕಥನತಂತ್ರದಲ್ಲಿ ನೈಪುಣ್ಯವಿರುವುದಕ್ಕಿಂತಲೂ ಹೆಚ್ಚಾಗಿ ಸರಸದಿಂದ ಓದುಗರ ಮನಸ್ಸನ್ನು ರಮಿಸಿ, ಅವರನ್ನು ತಿದ್ದುವ ಒಂದು ಕಲೆ ಅವರ ಕಥೆಗಳಲ್ಲಿ ಮನೆ ಮಾಡಿಕೊಂಡಿದೆಯೆಂದು ಹೇಳಬಹುದು. ಸರಳವಾದ, ಸುಲಭವಾದ, ಲಲಿತವಾದ ಭಾಷೆ ಕಥೆಯ ಸ್ವಾರಸ್ಯಕ್ಕೆ ಸಹಾಯಕವಾಗಿ, ರಸದುಣಿಸನ್ನು ಒದಗಿಸುತ್ತದೆ.

ಸಣ್ಣ ಕಥೆಗಳ ಬೆಳವಣಿಗೆಯಲ್ಲಿ ವಿಶೇಷ ಆಸಕ್ತಿವಹಿಸಿ ದುಡಿದಿರುವವರಲ್ಲಿ ಶ್ರೀ ಅ. ನ. ಕೃಷ್ಣರಾಯರೂ ಒಬ್ಬರು. ಅವರು ಕನ್ನಡ ಕಥೆಗಾರರಲ್ಲಿ ಹೊಸದೊಂದು ಪಂಥವನ್ನೇ ಆರಂಭಿಸಿರುವೆನೆಂದು ಹೇಳಿಕೊಂಡಿದ್ದಾರೆ. ಅದ ಕಾರಣವೇ ಏನೋ ಅವರ ಕಥೆಗಳು ಅನೇಕ ವೇಳೆ ಕಟು ಟೀಕೆಗೆ ಗುರಿಯಾಗಿವೆ. ಸ್ವಾಚ್ಛಂದ್ಯವೋ ಎಂಬಂತೆ ಕಾಣುವ ಸ್ವತಂತ್ರ ಮನೋವೃತ್ತಿಯ ರಾಯರು ಸ್ವಾಭಾವಿಕತೆಯ ಸಾಧನೆಗೆಂದು ಸಮಾಜಕ್ಕೆ ಕನ್ನಡಿ ಹಿಡಿದು, ನಗ್ನಸತ್ಯದ ದಿಗ್ದರ್ಶನ ಮಾಡಿಸಲು ಟೊಂಕ ಕಟ್ಟಿ ನಿಂತವರು.

ಶ್ರೀ ಎಸ್. ಜಿ. ಶಾಸ್ತ್ರಿಗಳು ಎಂಟು ಕಥೆಗಳ ಒಂದೇ ಒಂದು ಪುಟ್ಟ ಸಂಪುಟದಷ್ಟು ಮಾತ್ರ ಕಥೆಗಳನ್ನು ಬರೆದಿದ್ದರೂ ಅವರ ಕಥೆಗಳಿಗೆ ತಮ್ಮದೇ ಆದ ಒಂದು ವೈಶಿಷ್ಟ್ಯವಿದೆ. 'ಇದ್ದರೂ ಇರಬಹುದು' ಎಂಬ ಅವರ ಸಂಗ್ರಹದ ಒಂದೊಂದು ಕಥೆಯೂ ಒಂದು ಧರ್ಮವನ್ನು—ಪತ್ನೀಧರ್ಮ, ಮಾತೃಧರ್ಮ ಇತ್ಯಾದಿ—ಪ್ರತಿಪಾದಿಸಲು ವಿನ್ಯಾಸಲಾಗಿದೆ. ಇಲ್ಲಿನ ಪಾತ್ರಗಳೆಲ್ಲಾ ಜೀವಪೂರ್ಣವಾಗಿವೆ. ಇದಕ್ಕೆ ಕಾರಣವೆಂದರೆ, ಇಲ್ಲಿ ಕಾಣುವ ಕಥೆಗಳಿಗೆಲ್ಲ ಜೀವನದಲ್ಲಿ ನಡೆದು ಕಥೆಗಾರರ ಅನುಭವಕೋಶವನ್ನು ತುಂಬಿರುವ ಪ್ರಸಂಗಗಳೇ ಆಧಾರವಾಗಿವೆ. ಶ್ರೀ ಶಾಸ್ತ್ರಿಗಳಲ್ಲಿ ತಿಳಿಯಾದ, ನಯವಾದ ಹಾಸ್ಯ

ವಿದೆ. ಕಥೆಗಳ ಉದ್ರೇಕ್ಕೊ ಭಾವದಲ್ಲಿ, ಭಾಷೆಯಲ್ಲಿ ಸಹಜತೆಯಿದೆ.

ಸಣ್ಣ ಕಥೆಗಳನ್ನು ರಚಿಸಿ ಸುಪ್ರಸಿದ್ಧವಾಗಿರುವ ಇತರ ಹಿರಿಯ ಹೆಸರುಗಳೆಂದರೆ ಶ್ರೀ ಸ್ವಾಮಿ, ಶ್ರೀ ಎಸ್. ವೆಂಕಟರಾವ್ ಮತ್ತು ಶ್ರೀ ಸಿ. ಕೆ. ವೆಂಕಟರಾಮಯ್ಯ. ಶ್ರೀ ಸ್ವಾಮಿಯವರ 'ಆಲಂಗಿರಿ' ಉತ್ತಮವಾದ ಕಥೆ. ಅವರ 'ಮೋಡಗಳು' ಮತ್ತು 'ಪುಷ್ಪಮಾಲೆ' ಎಂಬ ಸಂಗ್ರಹಗಳಲ್ಲಿ ಕೆಲವು ಒಳ್ಳೆಯ ಕಥೆಗಳಿವೆ. ಹೆಣ್ಣಿನ ದೈವಿಕತೆ, ಸುಸಂಸ್ಕೃತಿಗಳನ್ನು ಅವರು ವೈವಿಧ್ಯಪೂರ್ಣವಾಗಿ ಚಿತ್ರಿಸಿದ್ದಾರೆ. ಅವರ ಸಾಮಾಜಿಕ ಜೀವನಚಿತ್ರಗಳಲ್ಲಿ ನಯನಾಜೋಕುಗಳಿವೆ.

ಉತ್ತರ ಕರ್ಣಾಟಕದ ಕಥೆಗಾರರಲ್ಲಿ ಶ್ರಿ ಕೃಷ್ಣಕುಮಾರ ಕಲ್ಲೂರ ಮತ್ತು ಶ್ರೀ 'ಆನಂದಕಂದ' ಇವರು ಅತ್ಯಂತ ಮುಖ್ಯರಾದವರು. ಕಲ್ಲೂರರ ಕಥೆಗಳೆಲ್ಲವೂ ಭಾವನಾಪ್ರಧಾನವಾದುವು. ಅವರ 'ಜೀವನ' ಸಾಮಾನ್ಯವಾಗಿ ಬಾಳಿ ಬದುಕಿದ ಜೀವಿಗಳ ಸನ್ನಿವೇಶದಿಂದ ಆಯ್ದುಕೊಂಡ ಎಂಟು ಕಥೆಗಳನ್ನು ಒಳಗೊಂಡಿದೆ; 'ಬಿಸಿಲುಕುದುರೆ' ಐದು ಕಥೆಗಳ ಸಂಗ್ರಹ. ಈ ಎರಡು ಕಥಾಸಂಗ್ರಹಗಳಲ್ಲಿಯೂ ಸೂಕ್ಷ್ಮ ಅಂತಃಕರಣದ ಕಿರಿದಾದ ಅಲೆಗಳು ಸುಳುಸುಳು ನಾದದೊಡನೆ ಅಲೆದಾಡುವ ಸುಂದರ ಚಿತ್ರವನ್ನು ನಾವು ಕಾಣುತ್ತೇವೆ. ಸುಳಿಗಾಳಿಯ ಮೇಲೆ ವೈಹಾಳಿ ನಡೆಸಿದಂತೆ ಅವರ ಭಾಷಾಶೈಲಿ. ಕಣ್ಣಿಗೆ ಕಟ್ಟಿ ನಿಲ್ಲುವಂತಹ ಚಿತ್ರಪರಂಪರೆ ಚಲನಚಿತ್ರದಂತೆ ಗೋಚರಿಸುತ್ತಾ ಹೋಗುತ್ತವೆ, ಅವರ ಕಥೆಗಳನ್ನು ಓದುವಾಗ. ವಾಲ್ಟರ್ ಡಿ. ಲಾ. ಮೇರನ ಬರಹದಂತೆ ಕಲ್ಲೂರರ ಬರಹವೂ ಗದ್ಯರೂಪದ ಭಾವಗೀತ. ಆದರೆ 'ಆನಂದಕಂದ'ರ ಕಥನ ರೀತಿ ಇದರಿಂದ ತೀರಾ ಭಿನ್ನವಾದುದು. ಅವರು ಅನೇಕ ವೇಳೆ ಉತ್ತರ ಕರ್ಣಾಟಕದ ಒಕ್ಕಲಿಗರ ಮನೆಮಾತನ್ನು ತಮ್ಮ ಬರವಣಿಗೆಯಲ್ಲಿ ಬಳಸುತ್ತಾರೆ. ಕಲ್ಲೂರರಂತೆ ಅವರು ಮುಗಿಲಿನ ಪ್ರಪಂಚಕ್ಕೆ ಏರುವುದಿಲ್ಲ; ಇಂದಿನ ಇಲ್ಲಿನ ಸಮಸ್ಯೆಗಳೇ ಅವರ ಕಥಾವಸ್ತುಗಳು.

ಉತ್ತರ ಕರ್ಣಾಟಕದ ಉಳಿದ ಕಥೆಗಾರರಲ್ಲಿ ಶ್ರೀ ರಂ. ಶ್ರೀ. ಮುಗಳಿ, ಶ್ರೀ ಹ. ಪಿ. ಜೋಶಿ, ಶ್ರೀ ಟೇಂಗ್ಸೆ ಗೋವಿಂದರಾಯರು— ಇವರ ಹೆಸರುಗಳು ಎದ್ದು ಕಾಣುತ್ತವೆ.

ಮಂಗಳೂರು ಪ್ರಾಂತ್ಯ ಅತ್ಯುತ್ತಮರಾದ ಕೆಲವು ಸಣ್ಣ ಕಥೆಗಾರರನ್ನು

ಇತ್ತಿದೆ. ಆ ಕಥೆಗಾರರಲ್ಲಿ, ಕಡೆಂಗೊಡ್ಲು ಶಂಕರಭಟ್ಟ, ಶ್ರೀ ಪಡುಕೋಣೆ ರಮಾನಂದರಾಯರು ಹೆಸರಾದವರು. ಶ್ರೀ ಪಡುಕೋಣೆ ರಮಾನಂದರಾಯರ ಕಥೆಗಳಲ್ಲಿ ಹಗುರವಾದ ಹಾಸ್ಯ ಬುಗ್ಗೆಯಾಗಿ ಚಿಮ್ಮಿ ಹರಿಯುತ್ತದೆ. ಅವರ 'ಹುಚ್ಚು ಮನಸ್ಸಿನ ಹೂಬಾಣಗಳು' ಕಥಾಸಂಕಲನ ತನ್ನದೇ ಆದ ಒಂದು ವಿಶಿಷ್ಟಗುಣದಿಂದ ಕನ್ನಡ ಸಣ್ಣ ಕಥೆಗಳ ಬೆಳವಣಿಗೆಯನ್ನು ಸಾಧಿಸಿದೆ. 'ನನ್ನ ಭಾವ' ಎಂಬ ಕಥೆಯಲ್ಲಿ ರಾಯರು ಹಾಸ್ಯರಸದಲ್ಲಿ ಸಿದ್ಧಿಯನ್ನು ಪಡೆದಿರುವುದು ನಮಗೆ ಕಾಣಬರುತ್ತದೆ. ಅವರ ಈ ಕಥೆಯನ್ನು ಓದುತ್ತಿರುವಾಗ ಡಬ್ಲು. ಡಬ್ಲು. ಜೇಕಬ್ಸ್‌ನ ಜ್ಞಾಪಕ ಬರುತ್ತದೆ.

ಮೊದಮೊದಲು ಸಣ್ಣ ಕಥೆಗಳನ್ನು ಬರೆದವರು ಶೃಂಗಾರ, ಹಾಸ್ಯರಸಗಳನ್ನು ಹೆಚ್ಚಾಗಿ ಬಳಸಿದರು. ಅವರ ಜಾಡನ್ನು ಹಿಡಿದು ಬರೆಯಹೊರಟವರೂ ಆ ರಸಗಳಿಗೇ ಶರಣಾಗಿ 'ಸ್ತ್ರೀರೂಪಮೇ ರೂಪಂ, ಶೃಂಗಾರಮೇ ರಸಂ' ಎಂಬ ಪ್ರಾಚೀನ ಕನ್ನಡ ಕವಿ ಮಧುರನ ಸೂಕ್ತಿಯನ್ನು ಸತ್ಯವನ್ನಾಗಿ ಸ್ಥಾಪಿಸುತ್ತಿರುವವರಂತೆ ಕಾಣಬರುತ್ತಿದ್ದರು. ಕಲಿಕೆಯ ಕೈಗೆ ಬಿದ್ದ ಶೃಂಗಾರ ಅನೇಕ ವೇಳೆ ಹಸಿಬಿಸಿಯಾಗಿ ರಸಾಭಾಸಕ್ಕೆ ಎಡೆಗೊಟ್ಟಿದೆ. ಆದರೆ ಇತ್ತೀಚೆಗೆ ಪರಿಸ್ಥಿತಿ ಬದಲಾಯಿಸಿ, ನಮ್ಮ ಬಾಳಿನ ಹಲವಾರು ಸಮಸ್ಯೆಗಳನ್ನು ಕಥೆಗೆ ವಸ್ತುವಾಗಿ ಸ್ವೀಕರಿಸುವ ಒಂದು ಹೊಸ ಪಂಥ ಹುಟ್ಟಿಕೊಂಡಿದೆ. ಕಥನಕಲೆ ಅಳಿಯದಂತೆ ಅದನ್ನು ಜೀವಂತವಾಗಿ ಬೆಳಸಿಕೊಂಡು ಹೋಗಬಲ್ಲ ದಕ್ಷರಾದ ತರುಣ ಬರಹಗಾರರು ಹುಟ್ಟಿಕೊಂಡಿದ್ದಾರೆ. ಅಂತಹವರಲ್ಲಿ ಶ್ರೀ ಬಸವರಾಜ ಕಟ್ಟೀಮನಿ ಅಗ್ರಗಣ್ಯರು. ಅವರ ವಿಚಾರಧಾರೆ ತೀಕ್ಷ್ಣವಾದುದು. ಕಠೋರ ನಿಷ್ಠುರವಾದ ಸತ್ಯವನ್ನು ನಿರ್ಭೀತಿಯಿಂದ ಮಾತನಾಡಬಲ್ಲ ಕೆಚ್ಚೆದೆಯೊಡನೆ ಸರಳತೆಯೂ ಅವರಲ್ಲಿ ನೆಲಸಿದೆ. ಸಿಡಿತಧಾರೆಯ ಹೊಳಪನ್ನು ಚೆಲ್ಲುತ್ತಾ ಸಾಗುವ ಅವರ ಶೈಲಿ ಅವರ ವಿಚಾರಸರಣಿಗೆ ತಕ್ಕಂತೆ ಉಜ್ವಲವಾಗಿದೆ.

ಸಮಕಾಲೀನ ಸಮಸ್ಯೆಗಳನ್ನು ತೆಗೆದುಕೊಂಡು ಅನೇಕ ಕಥೆಗಾರರು ಸಣ್ಣ ಕಥೆಗಳನ್ನು ಬರೆದಿದ್ದಾರೆ. ಇವರಲ್ಲಿ ಶ್ರೀಗಳಾದ ಪಾಟೀಲ ಪುಟ್ಟಪ್ಪನವರೂ, ಮಿರ್ಜಿ ಅಣ್ಣಾರಾಯರೂ, ವೈ. ಷಣ್ಮುಖಯ್ಯನವರೂ, ಕುಳಕುಂದ ಶಿವರಾಯರೂ, 'ಚದುರಂಗ'ರೂ ಮತ್ತು ತ. ರಾ. ಸು.ರವರೂ ಹೆಸರಾದವರು.

ಶ್ರೀ ಎಚ್. ಕೆ. ಅನಂತಭಟ್ಟ, ಶ್ರೀ ಎಂ. ಎನ್. ಬಾಬು, ಶ್ರೀ ಎಲ್.

ಎಸ್. ಶೇಷಗಿರಿರಾವ್, ಶ್ರೀ ಎಚ್. ಕೆ. ಕುಲಕರ್ಣಿ, ಶ್ರೀ ಎಸ್. ಅನಂತ ನಾರಾಯಣ, ಶ್ರೀ ಬೇಂದ್ರೆ ಲಕ್ಷ್ಮಣರಾವ್, ಶ್ರೀ ಕ. ವೆಂ. ರಾಜಗೋಪಾಲ್, ಶ್ರೀ ಆರ್. ವಿ. ಶ್ರೀನಿವಾಸಮೂರ್ತಿ ಮೊದಲಾದ ಅನೇಕ ಕಥೆಗಾರರು ಸಣ್ಣ ಕಥೆಗಳಲ್ಲಿ ಅನೇಕ ಪ್ರಯೋಗಗಳನ್ನು ನಡೆಸಲು ಪ್ರಯತ್ನಿಸುತ್ತಿದ್ದಾರೆ. ಈಗಾಗಲೇ ಇವರ ಸಂಗ್ರಹಗಳು ಪ್ರಕಟವಾಗಿ ಒಂದು ವ್ಯಕ್ತಿತ್ವವನ್ನೇ ಪಡೆಯಲು ಪ್ರಯತ್ನಿಸುತ್ತಿವೆ.

ಸಣ್ಣ ಕಥೆಗಳ ಬೆಳವಣಿಗೆಯಲ್ಲಿ ಸೌ. ಶ್ಯಾಮಲೆ, ಮಿಸೆಸ್ ಬಿ. ಟಿ. ಜಿ. ಕೃಷ್ಣ, ಶ್ರೀಮತಿಗಳಾದ ವಾಣಿ, ಲೀಲಾ ಕಾರಂತ್, ಎಚ್. ವಿ. ಸಾವಿತ್ರಮ್ಮ, ಜಯಲಕ್ಷ್ಮೀ ಶ್ರೀನಿವಾಸನ್, ಪದ್ಮಾವತಿ ರಸ್ತೋಗಿ, ಅಚಲಾ ಮೊದಲಾದ ಅನೇಕ ಮಹಿಳೆಯರು ಗಮನಾರ್ಹವಾದ ಪಾತ್ರವನ್ನು ವಹಿಸಿದ್ದಾರೆ.

ಕನ್ನಡ ಸಣ್ಣ ಕಥೆಗಾರರೆಲ್ಲರ ಹೆಸರುಗಳನ್ನಾಗಲಿ, ಕಥೆಗಳನ್ನಾಗಲಿ ಇಲ್ಲಿ ಪ್ರಸ್ತಾಪಿಸುವುದು ಅಸಾಧ್ಯ, ಅನಗತ್ಯ. ಅದಾವ ಶುಭಮುಹೂರ್ತದಲ್ಲಿ ಶ್ರೀನಿವಾಸರು 'ಈ ಹತ್ತು ಕತೆಗಳ ಹತ್ತರಷ್ಟು ಕತೆಗಳು—ಇವೆಲ್ಲಕ್ಕಿಂತ ನೂರುಪಾಲು ಹೆಚ್ಚಾದವುಗಳನ್ನು, ನಮ್ಮ ನಾಡಿನ ನನ್ನ ಅಣ್ಣಂದಿರಾ, ನನ್ನ ತಮ್ಮಂದಿರಾ, ನೀವು ಬರೆಯಬೇಕೆಂದೇ ನನ್ನ ಮನಸ್ಸಿನ ಅಂತರಾಳದಲ್ಲಿರುವ ಅಧಿಕವಾದ ಆಸೆ. ದೇವರು ಈ ಆಸೆಯನ್ನು ಈಡೇರಿಸಲಿ' ಎಂದು ಹಾರೈಸಿ ಹರಸಿದರೋ! ಅವರ ಹಾರೈಕೆ ಸಿದ್ಧಿಗೊಳ್ಳುತ್ತಿದೆ.

ಸಣ್ಣ ಕಥೆಗಳ ಬೆಳವಣಿಗೆಯನ್ನು ಗುರುತಿಸುವಾಗ ಅವುಗಳ ಸಂಕಲನಗಳನ್ನು ಕುರಿತು ಒಂದೆರಡು ಮಾತು ಹೇಳುವುದು ಅಪ್ರಕೃತವಾಗಲಾರದು. ಎಂತಹ ದೊಡ್ಡ ಕಥೆಗಾರರಾದರೂ ಸಾಮಾನ್ಯವಾಗಿ ಅವರ ಕಥೆಗಳೆಲ್ಲವೂ ಒಂದೇ ಉನ್ನತಮಟ್ಟವನ್ನು ಸಾಧಿಸುತ್ತವೆಯೆಂದು ಹೇಳುವುದು ಸಾಧ್ಯವಿಲ್ಲ. ಹಾಗೆಯೇ, ಸಾಮಾನ್ಯ ಕಥೆಗಾರರೆಂಬುವರ ಕಥಾಸಂಗ್ರಹದಲ್ಲಿಯೂ ಅತ್ಯುತ್ತಮವಾದ ಒಂದೆರಡು ಸಣ್ಣ ಕಥೆಗಳು ಕಾಣಬರುವುದು ಸಾಧ್ಯ. ಹಲವಾರು ಸಣ್ಣ ಪುಟ್ಟ ಕಥೆಗಾರರ ಶ್ರೇಷ್ಠ ಕಥೆಗಳು ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿ ಅನೇಕ ಜನರ ಗಮನಕ್ಕೆ ಬಾರದೆಯೇ ಹೋಗಿರಬಹುದು. ಪ್ರಬುದ್ಧ ಕರ್ಣಾಟಕವೊಂದರಲ್ಲಿಯೇ ಈ ವರೆಗೆ ಸುಮಾರು ಅರವತ್ತೈದು ಉತ್ತಮ ದರ್ಜೆಯ ಕಥೆಗಳು ಪ್ರಕಟವಾಗಿವೆ. ಅವುಗಳಲ್ಲಿ ಅನೇಕ ಕಥೆಗಳು

ಯಾವ ಸಂಗ್ರಹ ಅಥವಾ ಸಂಕಲನದ ಭಾಗ್ಯವನ್ನೂ ಪಡೆಯದೆ ಅಜ್ಞಾತವಾಸ ಮಾಡುತ್ತಿವೆ. ಹೀಗೆಯೇ ಇನ್ನೆಷ್ಟು ಮಾಸಪತ್ರಿಕೆಗಳಲ್ಲಿನ ಉತ್ತಮ ಕಥೆಗಳು ಕಣ್ಮರೆಯಾಗಿ ಕುಳಿತಿವೆಯೋ! ಆದ್ದರಿಂದ ಅತ್ಯುತ್ತಮವಾದ ಕಥೆಗಳನ್ನು ಆಯ್ದು ಪ್ರಕಟಿಸುವುದು ಅಗತ್ಯವಾದ ಕಾರ್ಯ. ಕನ್ನಡದಲ್ಲಿ ಸಂಕಲನ ಗ್ರಂಥಗಳು ಇಲ್ಲವೇ ಇಲ್ಲವೆಂದಲ್ಲ. 'ಕಾಮನ ಬಿಲ್ಲು', 'ಸವಿಲುಗರಿ', 'ಮಧುವನ', 'ಅಂತರಗಂಗೆ', 'ಮಂಗನ ಮೆರವಣಿಗೆ' ಮೊದಲಾದ ಕೆಲವು ಸಂಕಲನ ಗ್ರಂಥಗಳಿವೆ. ಇವು ಸಾಲವು. ಅಂತರಂಗ ಬಹಿರಂಗಗಳೆರಡರಲ್ಲೂ ನಮ್ಮ ಮನಸ್ಸನ್ನು ರಮಿಸಿ ಮೆಚ್ಚಿಸಬಲ್ಲ ಸಂಕಲನ ಗ್ರಂಥಗಳು ಹೆಚ್ಚಬೇಕಾಗಿದೆ. ಈ ಕಾರ್ಯವನ್ನು ಯಾವ ಒಬ್ಬ ವ್ಯಕ್ತಿ ಮಾತ್ರ ಮಾಡುವುದಕ್ಕಿಂತ, ಸಣ್ಣ ಕಥೆಗಳನ್ನು ತುಲನ ಮಾಡುವುದರಲ್ಲಿ ಶಕ್ತರಾದ ಒಂದು ಸಂಪಾದಕ ಮಂಡಲಿ ಕೈಗೊಂಡರೆ ಸಂಗ್ರಹಿತ ಸಂಪುಟ ಸರ್ವೋತ್ತಮವಾಗುವುದರಲ್ಲಿ ಸಂಶಯವಿಲ್ಲ.

೪

ಹಲವು ತಲೆಮಾರುಗಳವರೆಗೆ ಬೆಂಗಾಡಾಗಿದ್ದ ಕನ್ನಡ ಸಾಹಿತ್ಯಕ್ಷೇತ್ರ ಈಗ ಒಂದು ತಲೆಮಾರಿನಿಂದ ಹಸುರು ಹೊತ್ತು ಕಳಕಳಿಸುತ್ತಿದೆ. ಆದರೆ ಅಲ್ಲಿರುವುದೆಲ್ಲವೂ ಜೀವದಾಯಕವಾದ ಬೆಳೆಯಲ್ಲ. ಊಷರಕ್ಷೇತ್ರದಲ್ಲಿ ಹುಲ್ಲು ಹುಟ್ಟಿದರೂ ಸಂತೋಷಪಡಬೇಕಾದುದೇ. ಆದರೂ ಕ್ರಮಕ್ರಮವಾಗಿ ಅದನ್ನು ಉತ್ತಿ ಬಿತ್ತಿ ಬೆಳೆಯನ್ನು ತೆಗೆಯುವುದು ನಮ್ಮ ಗುರಿಯಷ್ಟೆ. ಭೂಮಿ ಹದವಾದಮೇಲೆ ಬೆಳೆಯನ್ನೂ ಕಳೆಯನ್ನೂ ಬೇರ್ಪಡಿಸಿ, ಬೆಳೆಯನ್ನು ಪೋಷಿಸುವಷ್ಟೇ ಎಚ್ಚರಿಕೆಯಿಂದ ಕಳೆಯನ್ನು ಕಿತ್ತುಹಾಕುವ ಕೆಲಸವನ್ನೂ ಕೈಕೊಳ್ಳಬೇಕಾದುದು ಅತ್ಯಗತ್ಯ.

ಸಣ್ಣ ಕಥೆಯು ವಾಮನಾಕಾರವನ್ನು ಕಂಡು, ಅದರೊಳಗೆ ಅಡಗಿರುವ ತ್ರಿವಿಕ್ರಮಶಕ್ತಿಯನ್ನು ಅರಿಯದೆಯೇ ಅನೇಕ ತರುಣರು ಕಥಾಸೃಷ್ಟಿಗೆ ಕೈಹಾಕುವುದು ಸ್ವಾಭಾವಿಕವಾಗಿಹೋಗಿದೆ. ಹೀಗೆ ದೇವರಮೇಲೆ ಭಾರಹಾಕಿ ಆರಂಭಿಸುವುದಕ್ಕಿಂತಲೂ ಕಥನಕಲೆಯ ಪರಿಚಯವನ್ನು ಮಾಡಿಕೊಂಡು ಕಲಾಸೃಷ್ಟಿಗೆ ತೊಡಗುವುದು ಹೆಚ್ಚು ಶ್ರೇಯಸ್ಕರ. ತನ್ನ ಹೆಸರು ಮಾಸಪತ್ರಿಕೆ

ಯಲ್ಲಿ ಬಂದುದನ್ನು ಕಾಣುವ ತಹತಹದಲ್ಲಿ 'ಸಣ್ಣ ಕಥೆ ಎಂದರೇನು? ಅದನ್ನು ಬರೆಯಲು ತನಗಿರುವ ಅಧಿಕಾರವೇನು?' ಎಂಬ ಸಣ್ಣ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರವನ್ನು ಪಡೆಯುವುದು ಅತ್ಯಗತ್ಯ. ಹೀಗೆ ಮಾಡದಿರುವುದರಿಂದಲೇ ಮಳೆಗಾಲದಲ್ಲಿ ಮೂಡುವ ನಾಯಿಕೊಡೆಗಳಂತೆ ಅಸಂಖ್ಯಾತವಾಗಿ ಬೆಳೆಯುತ್ತಿರುವ ಸಣ್ಣ ಕಥೆಗಳಲ್ಲಿ ಉತ್ತಮವಾದುವನ್ನು ಆಯಲು ಹಗಲುಹೊತ್ತಿನಲ್ಲಿಯೇ ಪಂಜು ಹೊತ್ತಿಸಬೇಕಾಗಿದೆ! ಹೊರಗೆ ನೋಡಲು ಕಿರಿದೆಂದು, ಸುಲಭವೆಂದು ಭ್ರಾಂತಿ ಹುಟ್ಟಿಸುವ 'ಸಣ್ಣ ಕಥೆ'ಯ ರಚನೆ ವಿಶಾಲ ಪ್ರಪಂಚವನ್ನು ಚಿತ್ರಿಸುವ ಬೃಹತ್ ಕಾದಂಬರಿಗಿಂತಲೂ ಕಷ್ಟತರವಾದ ಕಲೆ. 'ಸಣ್ಣ ಕಥೆ'ಯೆಂಬುದು ಒಂದು ರಸಘಟ್ಟಿ. ಅದರ ಸ್ವರೂಪವನ್ನು ಅರಿತುಕೊಳ್ಳದೆ ಕೈಹಾಕಿದರೆ 'ಐವಾರು ಚೇಸಿನದಿ ಕೋತಿಪಿಲ್ಲಾಯ' ಎಂಬ ತೆಲುಗು ಗಾದೆಯಂತಾಗುತ್ತದೆ.

'ಹುಟ್ಟಿನಿಂದ ಸಾಹಿತಿಗಳಾಗಬೇಕೇ ಹೊರತು ಕಲಿಕೆಯ ಕಟ್ಟಿನಿಂದಲ್ಲ' ಎಂದು ಅರ್ಥ ಬರುವ ಒಂದು ಇಂಗ್ಲಿಷ್ ಸೂಕ್ತಿಯಿದೆ. ಆ ಜಾಣ್ನುಡಿಯಲ್ಲಿ ತಥ್ಯಾಂಶ ಬಹಳ ಇದೆಯಾದರೂ ಅದು ಸಮಗ್ರ ಸತ್ಯವಲ್ಲವೆಂಬುದನ್ನು ನಾವು ಮರೆಯಬಾರದು. ಸಣ್ಣ ಕಥೆಯ ಮಟ್ಟಿಗಂತೂ ಅದು ಖಂಡಿತ ಸಂಪೂರ್ಣ ಸತ್ಯವಲ್ಲ. ಕಥೆಯನ್ನು ಬರೆಯುವುದೆಂಬುದು ಕೇವಲ ಭಾವಪರವಶತೆಯ ಗಗನಕುಸುಮ ಮಾತ್ರವಲ್ಲ; ದೀರ್ಘವ್ಯವಸಾಯದ ದಿವ್ಯಫಲವೂ ಅಹುದು. ಕಥೆಯನ್ನು ಬರೆಯಲು ಸ್ಫೂರ್ತಿಬಂದು, ಆ ಸ್ಫೂರ್ತಿಯಿಂದ ಕಥೆಯ ಕವರು ಕವರಾದ ಚಿತ್ರವೊಂದು ನಮ್ಮ ಮನಸ್ಸಿನಲ್ಲಿ ಮೂಡಿದರೆ, ಅದು ಸಣ್ಣ ಕಥೆಯ ಮೂಲ ಸಾಮಗ್ರಿಯಾದಂತಾಯಿತು. ಅದನ್ನು ಬೇಕಾದಂತೆ ಹದಗೊಳಿಸಿ, ನಮ್ಮ ಉದ್ದೇಶಕ್ಕೆ ತಕ್ಕಂತೆ ತಿದ್ದಿ ಸರಿಪಡಿಸಿಕೊಳ್ಳಬೇಕಾಗುತ್ತದೆ. ಹೀಗೆ ಸಿದ್ಧಪಡಿಸಿಕೊಂಡ ಕಥಾವಸ್ತುವಿಗೂ ಮೂಲ ಸಾಮಗ್ರಿಗೂ ಸೇತುವೆಗಟ್ಟುವುದು ಓದುಗರಿಗೆ ಅನೇಕ ವೇಳೆ ಅಸಾಧ್ಯವಾಗುತ್ತದೆ. ಆದ್ದರಿಂದ ಎಂತಹ ಪ್ರತಿಭಾಸಂಪನ್ನನೂ ಸಣ್ಣ ಕಥೆಯ ಲಕ್ಷಣಗಳನ್ನು ಅರಿತುಕೊಂಡು ಆದರ ಸೃಷ್ಟಿ ಕಾರ್ಯಕ್ಕೆ ಕೈಹಾಕುವುದು ಬಹಳ ಒಳ್ಳೆಯದು.

ಕನ್ನಡದ ಸಣ್ಣ ಕಥೆಗಾರರಿಗೆಲ್ಲಾ ಹಿರಿಯ ಮಾರ್ಗದರ್ಶಕರಾದ ಶ್ರೀನಿವಾಸರು ಸಣ್ಣ ಕಥೆಗಳ ಉದ್ದೇಶವೇನೆಂಬುದನ್ನು ಕುರಿತು ತಮ್ಮ 'ಸಣ್ಣ

ಕಥೆ'ಗಳ ಮುನ್ನುಡಿಯಲ್ಲಿ ಹೀಗೆ ಸೂಚಿಸಿದ್ದಾರೆ—'ಇಲ್ಲಿ ಬರೆದಿರುವುದು ನಮ್ಮ ಅಭಿಪ್ರಾಯಗಳನ್ನು ಸೂಚಿಸುವ ಉಪನ್ಯಾಸಗಳನ್ನಲ್ಲ; ನಮ್ಮ ಜೀವನದ ಚರಿತ್ರೆಯನ್ನಲ್ಲ; ಇತರರು ಅವರಿವರಿಗೆ ಆದ ಕೆಲವು ಸಂಗತಿಗಳನ್ನು. ಇದನ್ನು ಪಾಠಕರು ಸ್ವಲ್ಪ ಅವಧರಿಸಬೇಕು. ತಾವು ಓದಿ ಸಂತೋಷಪಡಬೇಕೆಂದು ಕಥೆಗಳನ್ನು ಬರೆದಿದೆ!' ತಮ್ಮ ಕಥೆಗಳನ್ನು ಕುರಿತು ಶ್ರೀನಿವಾಸರು ಹೇಳಿರುವ ಈ ಮಾತುಗಳು ಎಲ್ಲ ಸಣ್ಣ ಕಥೆಗಳಿಗೂ ಅನ್ವಯಿಸುತ್ತವೆ. 'ಸಣ್ಣ ಕಥೆ' ಎಂಬುದು ಮೊಟ್ಟಮೊದಲನೆಯದಾಗಿ ಒಂದು ಕಥೆ; ಒಂದು ಸಣ್ಣ—ದೀರ್ಘ ವಲ್ಲದ—ಕಥೆ. ಅದರ ಗುರಿ ಜನಮನೋರಂಜನೆ. ಕಥೆಯನ್ನು ಬರೆಯು ವುದಕ್ಕೆ ಮುಂಚೆ ಅದರಿಂದ ಸಮಾಜಸುಧಾರಣೆಯಾಗಬೇಕೆಂದಾಗಲಿ, ವ್ಯಕ್ತಿಯ ಉದ್ಧಾರವಾಗಬೇಕೆಂದಾಗಲಿ ಕಥೆಗಾರ ಉದ್ದೇಶವಿಟ್ಟುಕೊಂಡಿರುವುದಿಲ್ಲ. ಹಾಗೆ ಯಾವುದಾದರೂ ಉದ್ದೇಶ ಸಾಧನೆಯಾದರೆ ಅದು ಆನುಷಂಗಿಕವೆಂದು ಹೇಳಬಹುದು. ಶ್ರೀಯವರ 'ದುಃಖಸೇತು' ಕವನವನ್ನು ಓದಿ, ಕೊಡಗಿನ ಹುಡುಗನೊಬ್ಬ ಬಿಟ್ಟ ಹೆಂಡತಿಯನ್ನು ಕಟ್ಟಿಕೊಂಡನಂತೆ. ಆದಮಾತ್ರಕ್ಕೆ ಆ ಕವನಕರ್ತೃ ಅಂತಹ ಪರಿಣಾಮವನ್ನು ಬಯಸಿದ್ದರೆಂದು ಹೇಳುವುದು ಸಾಹಸದ ಮಾತಾದೀತು. ಯಾವುದಾದರೊಂದು ಕಾಮಿತಾರ್ಥ ಕಥೆಗೆ ಪ್ರಚೋದಕವಾಗುವುದಾದರೂ ಅದಕ್ಕೆ ಮನ್ನಣೆ ದೊರಕಿಸತಕ್ಕುದು ಮಾತ್ರ ಅದರ ಮನೋರಂಜಕ ಗುಣವೇ ಎಂಬುದರಲ್ಲಿ ಸಂದೇಹವಿಲ್ಲ.

ಕಥೆಯ ಗುರಿ, ಸಾರ್ಥಕತೆ ಮನೋರಂಜನೆಯೇ ಆದರೂ ಮನೋ ರಂಜಕವಾದ ಕಥೆಗಳೆಲ್ಲವೂ 'ಸಣ್ಣ ಕಥೆ' ಎಂಬ ಬಿರುದಿಗೆ ಅರ್ಹವಾಗಲಾರವು. ಸಣ್ಣ ಕಥೆಗೆ ಸೂತ್ರವನ್ನು ಅಳವಡಿಸುವುದು ಬಹು ಕಷ್ಟ. ಕೆಲವರು ಅದರ ಗಾತ್ರದ ಮೇಲೆ ಸೂತ್ರವನ್ನು ನಿರ್ಧರಿಸುತ್ತಾರೆ. ಸುಪ್ರಸಿದ್ಧ ಇಂಗ್ಲಿಷ್ ಕಥೆ ಗಾರನಾದ ಎಚ್. ಜಿ. ವೆಲ್ಸ್ ಸಣ್ಣ ಕಥೆಯೆಂಬುದು 'ಹದಿನೈದು ನಿಮಿಷ ಗಳಿಂದ ಹಿಡಿದು ಐವತ್ತು ನಿಮಿಷಗಳೊಳಗಾಗಿ ಓದಿ ಮುಗಿಸುವಂತಹ ಕಥೆ' ಎಂದು ಹೇಳುತ್ತಾನೆ. ಒಂದು ಸಲ ಕುಳಿತು ಓದಿ ಮುಗಿಸಬಹುದಾದಂತಹ ಕಥೆಯೇ ಸಣ್ಣ ಕಥೆಯೆಂದು 'ಪೋ'ನ ಅಭಿಪ್ರಾಯ. ಸುಮಾರು ಎರಡು ಘಂಟೆಗಳ ಕಾಲದಲ್ಲಿ, ಎಂದರೆ ಸುಮಾರು ನಾಲ್ವತ್ತು ಅಥವಾ ಐವತ್ತು ಪುಟ ಗಳಷ್ಟು ಗಾತ್ರವುಳ್ಳುದು ಸಣ್ಣ ಕಥೆಯೆಂದು ಮತ್ತೊಬ್ಬ ಮೀಮಾಂಸಕರ ಮತ.

ಆದರೆ ಈ ಬಹಿರಂಗದ ರೂಪರೇಖೆಗಳನ್ನು ಸಣ್ಣ ಕಥೆಗಳ ಬಣ್ಣವನ್ನು ಪರೀಕ್ಷಿಸುವ ಒರೆಗಲ್ಲಾಗಿ ಉಪಯೋಗಿಸುವುದು ಸಾಧ್ಯವಿಲ್ಲವೆಂದೇ ಹೇಳಬೇಕು. 'ಇಂದಿರೆ', 'ಸೀರದೆ' ಮೊದಲಾದ ಕಿರುಗತೆಗಳು ಮೇಲಿನ ಸೂತ್ರಕ್ಕೆ ಹೊಂದಿಕೊಳ್ಳುವಂತಿದ್ದರೂ ಅವು 'ಸಣ್ಣ ಕಥೆ'ಗಳಲ್ಲ. ಮಾಪಸಾಂತನ 'ನೆಕ್‌ಲೇಸ್' ಅಥವಾ ಶ್ರೀನಿವಾಸರ 'ಸುಬ್ಬಣ್ಣ'—ಇವು ಮೇಲಿನ ಸೂತ್ರವನ್ನು ಧಿಕ್ಕರಿಸುತ್ತಿದ್ದರೂ ಅವು ಅತ್ಯುತ್ತಮ ಸಣ್ಣ ಕಥೆಗಳು. ಆದ್ದರಿಂದ ಮೇಲಿನ ನಿಯಮಗಳು ಕಥೆಗಾರರಾಗಲು ಹೊರಡುವವರಿಗೆ ಒಂದು ಸ್ಥೂಲವಾದ ಸಲಹೆಯೆ ಹೊರತು ಸರ್ವಸತ್ಯವಾದ ಸೂತ್ರವೇನೂ ಅಲ್ಲ.

ಇನ್ನು ಸಣ್ಣ ಕಥೆಯ ಲಕ್ಷಣವನ್ನು ಅರಿಯಲು ಅದರ ಅಂತರಂಗವನ್ನು ವಿಮರ್ಶೆಗೆ ಒಳಪಡಿಸಬೇಕು. ಸಣ್ಣ ಕಥೆಯಲ್ಲಿ ಕಥಾವಸ್ತುವಿಗೆ ಪ್ರಾಮುಖ್ಯತೆಯಿಲ್ಲ, ಹೇಳುವ ರೀತಿಗೇ ಪ್ರಾಮುಖ್ಯತೆ. ಪೋ ಹೇಳುವಂತೆ, 'ಕಥೆಯನ್ನು ಓದುತ್ತಿರುವವನ ಹೃದಯದಲ್ಲಿ ಒಂದೇ ಸಲಕ್ಕೆ ಒಂದೇ ಒಂದು ಪರಿಣಾಮ ಗಾಢವಾಗಿ ಮೂಡಬೇಕು. ಈ ಪರಿಣಾಮವನ್ನು ಪಡೆಯಲು ಸಾಧನವಾದ ಕಥೆಯ ಬೆಳವಣಿಗೆ ಆದಷ್ಟು ಸಂಕ್ಷೇಪವಾಗಿರಬೇಕು.' ಈ ಅಭಿಪ್ರಾಯವನ್ನು ಸಾಮಾನ್ಯವಾಗಿ ಎಲ್ಲರೂ ಸ್ವೀಕರಿಸುತ್ತಾರೆ. ಹ್ಯಾಮಿಲ್ಟನ್ ಎಂಬುವನು ಇದೇ ಅಭಿಪ್ರಾಯವನ್ನೇ ಸೂತ್ರರೂಪಕ್ಕೆ ತಿರುಗಿಸಿ 'ಹೇಳಲೇಬೇಕಾದುದಕ್ಕೆ ಲೋಪ ಬರದಂತೆ, ಆದಷ್ಟು ಸಂಕ್ಷೇಪ ಸಾಧನದಿಂದ, ಏಕೈಕ ಕಲಾಪರಿಣಾಮವನ್ನು ಸಾಧಿಸುವುದೇ ಸಣ್ಣ ಕಥೆಯ ಹೆಗ್ಗುರಿ' ಎಂದು ಹೇಳುತ್ತಾನೆ. ಶ್ರೀನಿವಾಸರ 'ಕೃಷ್ಣಮೂರ್ತಿಯ ಹೆಂಡತಿ' ಎಂಬ ಕಥೆಯನ್ನು ಉದಾಹರಣೆಯಾಗಿ ತೆಗೆದುಕೊಂಡು ಮೇಲಿನ ಸೂತ್ರದ ಅರ್ಥವನ್ನು ಸ್ಪಷ್ಟಪಡಿಸಬಹುದು. ಆ ಕಥೆಯಲ್ಲಿ ಲಕ್ಷ್ಮಿ ಎಂಬ ಹುಡುಗಿ ತನ್ನ ಗಂಡ ಸತ್ತನೆಂಬ ಸುದ್ದಿಯನ್ನು ಕೇಳಿ ಸಂಕಟವನ್ನು ತಾಳಲಾರದೆ ಬಾವಿಯಲ್ಲಿ ಬಿದ್ದು ಸಾಯುತ್ತಾಳೆ. ಇಷ್ಟು ಸ್ವಲ್ಪ ವಿಷಯವನ್ನು ಮೂವತ್ತು ಪುಟಗಳಷ್ಟು ವಿಸ್ತಾರವಾಗಿ ಬೆಳೆಸಿದ್ದರೂ ಕಥೆಯ ಸ್ವಾರಸ್ಯ ಸ್ವಲ್ಪವೂ ಕುಗ್ಗುವುದಿಲ್ಲ; ಓದುಗರಿಗೆ ಬೇಸರವಾಗುವುದಿಲ್ಲ. ಇಲ್ಲಿ ಕಥಾವಸ್ತುವಿಗಿಂತಲೂ ಹೇಳಿರುವ ರೀತಿ ಮುಖ್ಯ; ಮೂಲೋದ್ದೇಶವನ್ನು ಹೃದಯಂಗಮವಾಗಿ ವಿವರಿಸಬಲ್ಲ ಜಾಣ್ಮೆಗೆ ಪುರಸ್ಕಾರ. ಲಕ್ಷ್ಮಿಯ ಜೀವನ, ಪ್ರಪಂಚದ ಹತ್ತು ಮಾರ್ಗಗಳಲ್ಲಿ ಹರಿದುಹೋಗಿರಬಹುದು; ಅವಳು ತಾಯಿ

ತಂದೆಗಳಿಗೆ ಅಚ್ಚುಮೆಚ್ಚಿನವಳಾಗಿರಬಹುದು; ಅಕ್ಕಪಕ್ಕದವರೊಡನೆ ಕಲಹ ಮಾಡುವವಳಾಗಿರಬಹುದು; ಇನ್ನೂ ಹಲವು ವಿಧದ ವ್ಯಾಪ್ತಿ ಅವಳ ಜೀವನಕ್ಕಿರಬಹುದು. ಇವುಗಳಲ್ಲಿ ಯಾವುದಾದರೂ ಒಂದನ್ನು ಆಯ್ದುಕೊಂಡು, ಆ ಏಕಮುಖವಾದ ಅಂಶವನ್ನು ಹೃದಯಂಗಮವಾಗಿ, ಅನುಭವವೇದ್ಯವಾಗುವಂತೆ ಮಾಡುವುದೇ ಕಥೆಗಾರನ ಕೆಲಸ. ಕಥೆಯಲ್ಲಿ ಬರುವ ವರ್ಣನೆ, ಸಂಭಾಷಣೆ, ನಿರೂಪಣೆ ಇತ್ಯಾದಿಗಳೆಲ್ಲವೂ ಆಯ್ದುಕೊಂಡ ಆ ಅಂಶಕ್ಕೆ ಪೋಷಕವಾಗುತ್ತವೆ. ಒಟ್ಟಿನಲ್ಲಿ ಕಥೆಯ ಕ್ರಿಯೆ, ಆಶಯ, ಪರಿಣಾಮ— ಇವುಗಳೆಲ್ಲವೂ ಒಂದೇ ಆಗಿರುತ್ತವೆ.

ಜೀವನದಲ್ಲಿ ಕಲೆಯಿದೆ; ಕಲಾವಿಭಾಗವಿದೆ. ಆದರೆ ಅಲ್ಲಿರುವುದೆಲ್ಲವೂ ಕಲೆಯಲ್ಲ. ಕಲಾವಿದನಾದ ಕಥೆಗಾರನು ಅಲ್ಲಿರುವ ಕಲಾವಿಭಾಗವನ್ನು ಗುರುತಿಸಿ ಸ್ವೀಕರಿಸುತ್ತಾನೆ. ಜೀವನದಲ್ಲಿ ಕಾರ್ಯಕಾರಣ ಸಂಬಂಧ ಸ್ಪಷ್ಟವಾಗಿರುವುದಿಲ್ಲ; ಅನೇಕ ವೇಳೆ ಆ ಸಂಬಂಧದ ಭಾವನೆಯೇ ನಮಗೆ ಸ್ಫುರಿಸುವುದಿಲ್ಲ. ಕಥೆಗಾರನು ಅಲ್ಲಿ ಕಾಣಬರದ ಕಾರ್ಯಕಾರಣ ಸಂಬಂಧವನ್ನು ತಾನು ಕಲ್ಪಿಸುತ್ತಾನೆ. ಹೀಗೆ ಸಣ್ಣ ಕಥೆಯೆಂಬುದು ಜೀವನದಿಂದಲೇ ಆಯ್ದುಕೊಂಡ ವಿಷಯ. ಆದರೆ ಅದರ ಪಡಿಯಚ್ಚಲ್ಲ. ಪಡಿಯಚ್ಚನ್ನು ಎತ್ತಿ ಓದುಗರ ಮುಂದಿಡುವುದಾದರೆ ಅದು ಕಲೆಯ ಆತ್ಮಹತ್ಯವಾಗುತ್ತದೆ. ಜೀವನದಿಂದ ಎತ್ತಿಕೊಂಡ ಸಂದರ್ಭ–ಸನ್ನಿವೇಶಗಳಿಗೂ ವ್ಯಕ್ತಿಗಳಿಗೂ ಕಥೆಗಾರನು ಆದರ್ಶದ ಮೆರುಗು ಹಾಕುತ್ತಾನೆ. ಜೀವನವೆಂಬುದು ಬಹುಜನರ ಬಹುಮುಖವಾದ ಮಹಾಕಾವ್ಯ. ಸಣ್ಣ ಕಥೆಯೆಂಬುದು ಅದರಲ್ಲಿನ ಒಂದು ವ್ಯಕ್ತಿಯ ಏಕಮುಖದ ವಿವರಣೆ. ಆದರಲ್ಲಿಯೂ ಸಾಮಾನ್ಯವಾಗಿ ಒಂದೆರಡು ಘಟನೆಗಳನ್ನು ಮಾತ್ರ ಅದು ಸ್ವೀಕರಿಸುತ್ತದೆ. ಈ ಘಟನೆ, ಉಚಿತವಾದ ಹಿನ್ನೆಲೆಯನ್ನು ಕಲ್ಪಿಸಿಕೊಂಡು ನೇರವಾಗಿ ತನ್ನ ಗುರಿಯನ್ನು ಮುಟ್ಟಲು ಧಾವಿಸಬೇಕು. ಸಣ್ಣ ಕಥೆಯೆಂಬುದು ಶ್ರೀ ದ. ರಾ. ಬೇಂದ್ರೆಯವರು ಹೇಳಿರುವಂತೆ ‘ ಅಲ್ಪಜೀವಿಗಳ ಮಹಾಕಾವ್ಯ ’. ಸಾಮಾನ್ಯ ಮಾನವರ ಜೀವನ, ಮಹಾಪುರುಷರ ಜೀವನದಂತೆ ಅದ್ಭುತ ಘಟನೆಗಳಿಂದ ತುಂಬಿರುವುದಿಲ್ಲ. ‘ ಈ ಸಾರಹೀನವಾದ ಅಲ್ಪಜೀವನಕ್ಕೆ ವಿಸ್ತಾರವೇ ವಿನಾಶವಾದೀತು; ಅವರ ಜೀವನದಲ್ಲಿ ಕ್ವಚಿತ್ತಾಗಿ ಕಾಣಬಹುದಾದ ರಸನಿಮಿಷಗಳನ್ನು ಮಾತ್ರ ಹಿಡಿದು

ಸಣ್ಣ ಕಥೆಗಳನ್ನು ರಚಿಸಬೇಕಾಗುತ್ತದೆ. ಆದ್ದರಿಂದ ಅದು ಸ್ವಾಭಾವಿಕ ವಾಗಿಯೇ ಬಹು ಸ್ವಲ್ಪ ಕಾಲದ ವರೆಗೆ ನಡೆದಂತೆ ಮಾತ್ರ ಚಿತ್ರಿತವಾಗಿರ ಬೇಕಾಗುತ್ತದೆ. ಇದೂ ಅಲ್ಲದೆ, ಬಹುಕಾಲದವರೆಗೆ ಹಬ್ಬಿದ ಕಥೆಯ ಘಟನೆ ಗಳಲ್ಲಿ ಪರಸ್ಪರ ಸಂಬಂಧವನ್ನು ತರುವುದು ಕಷ್ಟ; ರಸಾಸ್ವಾದವನ್ನೂ ಭಾವ ಪೋಷಣೆಯನ್ನೂ ಅಳಿಯದಂತೆ ಉಳಿಸಿಕೊಂಡುಬರುವುದೂ ಕಷ್ಟ. ಶ್ರೀನಿ ವಾಸರ ಕಲಾನೈಪುಣ್ಯದ ದಿವ್ಯಫಲದಂತಿರುವ 'ಸುಬ್ಬಣ್ಣ'ದಲ್ಲಿ ಈ ಅಸಾಧ್ಯ ಕಾರ್ಯ ಸಾಧಿತವಾಗಿರಬಹುದಾದರೂ ಅದು ಸಾಮಾನ್ಯರಿಗೆ ಸಾಧ್ಯವಾದುದಲ್ಲ. ಇಷ್ಟೇ ಕಾಲ ನಡೆದ ಘಟನೆಯನ್ನು ಮಾತ್ರ ತೆಗೆದುಕೊಳ್ಳಬೇಕೆಂದು ಹೇಳು ವುದು ಪೆದ್ದತನವಾದರೂ ಆದಷ್ಟು ಕಡಿಮೆಯ ಕಾಲದ ಘಟನೆಯನ್ನು ಆಯ್ದು ಕೊಳ್ಳುವುದು ಕ್ಷೇಮಕರ. ಕಥಾವಸ್ತುವಿಗೆ ತಕ್ಕಂತೆ ಅದನ್ನು ಅಳವಡಿಸಿಕೊಳ್ಳ ಬೇಕು. ಹೀಗೆ ಕ್ರಿಯೆ ಮತ್ತು ಕಾಲಗಳಿಗೆ ಪರಿಮಿತಿಯನ್ನು ಕಲ್ಪಿಸಿ, ಅವು ಗಳನ್ನು ಕ್ರಿಯೈಕ್ಯ, ಕಾಲೈಕ್ಯ ಎಂಬ ಪಾರಿಭಾಷಿಕ ಶಬ್ದಗಳಿಂದ ನಿರ್ದೇಶಿಸು ವುದು ವಾಡಿಕೆ. ಈ ಎರಡು ಐಕ್ಯಗಳ ಜೊತೆಗೆ ಸ್ಥಳೈಕ್ಯವನ್ನೂ ಸೇರಿಸಿ ಕಥಾ ಘಟನೆಯು ಯಾವುದೋ ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ನಡೆದಂತೆ ನಿರ್ವಹಿಸಬೇಕೆಂದು ಹೇಳುವುದುಂಟು. ಈ ಐಕ್ಯತ್ರಯಗಳಲ್ಲಿ ಕ್ರಿಯೈಕ್ಯವು ಎಲ್ಲ ಕಥೆಗಳಲ್ಲಿಯೂ ಕಂಡುಬರುತ್ತದೆ. ಉಳಿದೆರಡು ಐಕ್ಯಗಳನ್ನು ಪಾಲಿಸು ವುದಕ್ಕಿಂತಲೂ ಮೀರಿರುವ ಕಥೆಗಳೇ ಹೆಚ್ಚು. ಸಣ್ಣ ಕಥೆಯ ವ್ಯಾಪ್ತಿಗೆ ತಕ್ಕಂತೆ ಅದರಲ್ಲಿ ಬರುವ ಪಾತ್ರಗಳೂ ಆದಷ್ಟು ಕಡಿಮೆಯಾಗಿರಬೇಕು. ಎರಡು ಅಥವಾ ಮೂರು ಪಾತ್ರಗಳು ಕಥೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದು ಅವುಗಳ ಗಮ್ಯಸ್ಥಾನವೇ ಕಥೆಯ ಗುರಿಯಾಗಿರಬೇಕು.

ಶ್ರೀನಿವಾಸರ 'ವೆಂಕಟಶಾಮಿಯ ಪ್ರಣಯ'ವನ್ನು ಉದಾಹರಣೆ ಯಾಗಿಟ್ಟುಕೊಂಡು ಮೇಲಿನ ನಿಯಮವನ್ನು ಈಗ ಸ್ವಲ್ಪ ವಿವೇಚಿಸೋಣ. ಹಳ್ಳಿಯ ನಾಯಿಂದನೊಬ್ಬನ ಮಗ ವೆಂಕಟಶಾಮಿ; ಅವನು ಡೊಂಬರ ಹುಡುಗಿಯೊಬ್ಬಳನ್ನು ಮೋಹಿಸಿ, ನಿಷ್ಠುರ ಸಮಾಜದ ಕಟ್ಟುಪಾಡಿಗೆ ಬಲಿ ಯಾದುದೇ ಇದರ ಕಥಾವಸ್ತು. ವೆಂಕಟಶಾಮಿಯಲ್ಲಿ ಪ್ರೇಮ ಮೊಳೆತು ಬಲಿಯುವುದಕ್ಕಾಗಿ ಕೆಲವು ದಿನಗಳ ಪ್ರಣಯಜೀವನ ಕಥೆಯ ಪ್ರಸ್ತಾವನೆ ಯಂತೆ ಬಂದಿರುವುದಾದರೂ, ಮುಖ್ಯ ಭಾಗ ಒಂದೇ ದಿನ ನಡೆದುದು. ಕಥೆ

ಯಲ್ಲಿ ಪ್ರಮುಖ ಪಾತ್ರ ವಹಿಸಿರುವವನು ವೆಂಕಟಶಾಮಿಯೊಬ್ಬನೇ. ಉಳಿದ ಪಾತ್ರಗಳು ಅವನ ದುರಂತಕ್ಕೆ ಪರಿಪೋಷಕವಾದುವು. ಡೊಂಬರ ಹುಡುಗಿ ಅವನ ಮನಸ್ಸನ್ನು ಸೆಳೆದುದಾಗಲಿ, ಆ ಪ್ರೇಮಿಗಳಿಬ್ಬರ 'ಕೋರ್ಟ್‌ಷಿಪ್' ಆಗಲಿ ಇಲ್ಲಿ ಅಗತ್ಯವಿಲ್ಲ. ಕಥೆಯ ಕ್ರಿಯೆಯೆಲ್ಲವೂ ವೆಂಕಟಶಾಮಿಯ ದುರಂತವನ್ನು ಚಿತ್ರಿಸಲು ಮೀಸಲಾಗಿದೆ. ಡೊಂಬರ ಹುಡುಗಿಯನ್ನು ಮೋಹಿಸಿದನೆಂದು ತಾಯಿಗೆ ಅಸಮಾಧಾನ; ತಂದೆಗೆ ಉದಾಸೀನ, ಎಲ್ಲ ಸ್ವಲ್ಪದರಲ್ಲೇ ಸರಿಹೋಗಬಹುದೆಂಬ ಭರವಸೆ. ಊರ ಪಟೇಲನಿಗೆ ವೆಂಕಟ ಶಾಮಿಯ ದೆಸೆಯಿಂದ ಊರಿಗೆ ಕೆಟ್ಟ ಹೆಸರು ಬಂದಿತಲ್ಲ ಎಂಬ ಯೋಚನೆ. ಊರಿಗೆ ಊರೇ ಅವನ ವಿಚಾರವನ್ನು ಕುರಿತು ಮಾತನಾಡುತ್ತದೆ. ಹೀಗೆ ಎಲ್ಲರೂ ವೆಂಕಟಶಾಮಿಯ ಜೀವನದಲ್ಲಿ ಭಾಗಿಗಳಾದರೂ ಅವರಿಗೆ ಕಥೆಯಲ್ಲಿನ ಪ್ರಾಮುಖ್ಯತೆ ಅತ್ಯಲ್ಪ; ರಾಜನ ಪಾತ್ರ 'ಯಾರಲ್ಲಿ?' ಎಂದಾಗ 'ಮಹಾ ಸ್ವಾಮಿ, ಏನಪ್ಪಣೆ?' ಎಂಬ ಚಾರನ ಪಾತ್ರವಿದ್ದಂತೆ. ನಮ್ಮ ಮನಸ್ಸೆಲ್ಲವೂ ವೆಂಕಟಶಾಮಿ ಬಿಲ್ಲು ಹಿಡಿದು ಪಕ್ಕದಲ್ಲಿದ್ದ ಡೊಂಬರ ಹುಡುಗಿಗಾಗಿ ಕಾಗೆ ಗಳನ್ನು ಹೊಡೆಯುತ್ತಿದ್ದ ದೃಶ್ಯ; ಗೌಡರ ಮನೆ ಮರಿಯನಿಗೆ 'ಪಡ್ಡೆ' ಯೊಂದಿಗಿದ್ದ 'ಗೂಳಿ'ಯಂತೆ, ಹುಲ್ಲಿನ ಬಯಲಿನಲ್ಲೆಲ್ಲಾ ತಾನೇತಾನಾಗಿ ಡೊಂಬರ ಹುಡುಗಿಯೊಡನೆ ಅಲೆಯುತ್ತಿದ್ದಂತೆ ಕಾಣಿಸಿದ ದೃಶ್ಯ—ಇವುಗಳಲ್ಲಿ ಬೆರೆತು, ವೆಂಕಟಶಾಮಿಯ ಪ್ರಣಯದಲ್ಲಿ ಸಹಾನುಭೂತಿಯುಳ್ಳವರಾಗುತ್ತೇವೆ; ಆತನ ಅಧಃಪತನವನ್ನು ಕಂಡು ಬಿಸಿಯುಸಿರು ಬಿಡುತ್ತೇವೆ. ಅಷ್ಟರಿಂದ ಕಥೆಗಾರರ ಉದ್ದೇಶ ಸಫಲವಾಗುತ್ತದೆ.

ಮೇಲಿನ ವಿವರಣೆಯಿಂದ ಸಣ್ಣ ಕಥೆಯಲ್ಲಿ ಮೂರು ಪ್ರಮುಖವಾದ ಅಂಗಗಳಿರಬೇಕೆಂದು ನಾವು ಗುರುತಿಸಬಹುದು. ಆ ಮೂರು ಅಂಗಗಳೆಂದರೆ ಘಟನೆ, ಪಾತ್ರ, ಆವರಣ. ಈ ಮೂರು ಅಂಗಗಳ ಪ್ರಾಮುಖ್ಯತೆಯನ್ನು ಅನುಸರಿಸಿ ಸಣ್ಣ ಕಥೆಗಳನ್ನು ವಿಭಾಗಿಸುವುದು ವಾಡಿಕೆಯಾಗಿದೆ. ಲೇಖಕನ ಪ್ರವೃತ್ತಿಗೆ ತಕ್ಕಂತೆ ಘಟನೆಯೇ ಪ್ರಮುಖವಾದ ಕಥೆಗಳೋ, ಪಾತ್ರವೇ ಪ್ರಮುಖವಾದ ಕಥೆಗಳೋ, ಆವರಣವೇ ಪ್ರಮುಖವಾದ ಕಥೆಗಳೋ ಹುಟ್ಟ ಬಹುದು. ಘಟನೆ ಪ್ರಮುಖವಾದಾಗ (ಶ್ರೀ ಎಸ್. ವಿ. ರಂಗಣ್ಣನವರು ತಮ್ಮ 'ಸಣ್ಣ ಕಥೆಯ ಸ್ವರೂಪ' ಎಂಬ ಲೇಖನದಲ್ಲಿ ಹೇಳಿರುವಂತೆ) 'ಏಕ

ಮುಖವಾದ ಕಥೆ ಬಿಕ್ಕಟ್ಟಿನ ಸನ್ನಿವೇಶಗಳನ್ನು ಒಂದಾದ ಮೇಲೊಂದನ್ನು ಪ್ರದರ್ಶಿಸುತ್ತಾ ಯಥಾವತ್ತಾಗಿ ಮುಂದುವರಿದು, ನಮ್ಮ ಸಂಶಯ–ವ್ಯಾಕುಲಗಳನ್ನು ಶಿಖರದಿಂದ ಶಿಖರಕ್ಕೇರಿಸುತ್ತಾ, ಸ್ವಾಭಾವಿಕವಾದರೂ ಅನಿರೀಕ್ಷಿತವೂ, ಅತ್ಯಾಶ್ಚರ್ಯಕರವೂ, ಅತಿಹಿತಕರವೂ ಆದ ಅಂಶವೊಂದರಲ್ಲಿ ಮುಕ್ತಾಯ' ಗೊಳ್ಳುತ್ತದೆ. ಉದಾ: ಶ್ರೀನಿವಾಸರ 'ಬೀದಿಯಲ್ಲಿ ಹೋಗುವ ನಾರಿ.' ಪಾತ್ರ ಪ್ರಧಾನವಾದಾಗ ಪಾತ್ರದ ಏಳುಬೀಳುಗಳು ಪ್ರಮುಖವಾಗುತ್ತವೆ; ಆ ಪಾತ್ರದ ಮನೋಧರ್ಮ ಕಾರ್ಯರಂಗದಲ್ಲಿ ಕಾಣಿಸಿಕೊಳ್ಳುವುದು ಕಥೆಯಲ್ಲಿ ಚಿತ್ರಿತವಾಗುತ್ತದೆ. ಉದಾ: ಆನಂದರ 'ನಾನು ಕೊಂದ ಹುಡುಗಿ'. ಆದರ್ಶಪ್ರಧಾನವಾದ ಕಥೆಯಾದರೆ ಕಾಲ, ದೇಶ, ರಸ—ಇವುಗಳ ಆವರಣವು ಕಥೆಯನ್ನು ತುಂಬಿಕೊಳ್ಳುತ್ತದೆ. ಉದಾ: ಶ್ರೀನಿವಾಸರ 'ಇಂದಿರೆಯೊ ಅಲ್ಲವೊ'. ಹೀಗೆ ಕಥೆಗಳನ್ನು ಮೂರು ಪಂಗಡಗಳಾಗಿ ವಿಂಗಡಿಸಿದರೂ ಒಂದು ಪ್ರಮುಖವಾಗಿದ್ದ ಕಡೆ ಉಳಿದುವೆರಡೂ ಹೇಳ ಹೆಸರಿಲ್ಲದಂತಾಗ ಬೇಕೆಂಬ ನಿಯಮವೇನೂ ಅಲ್ಲ. ಉತ್ತಮವಾದ ಸಣ್ಣ ಕಥೆಯಲ್ಲಿ ಈ ಮೂರು ಗುಣಗಳೂ ಸೇರಿಕೊಂಡು ಕಥೆಯ ಶ್ರೇಷ್ಠತೆಗೆ ಮೂರೂ ಸಮಾನವಾಗಿಯೇ ಕಾರಣವಾಗಬಹುದು.

ಕಥಾವಸ್ತುವನ್ನು ದೃಷ್ಟಿಯಲ್ಲಿಟ್ಟುಕೊಂಡು ಕಥೆಗಳನ್ನು ಐತಿಹಾಸಿಕ, ಸಾಮಾಜಿಕ, ನೀತಿಬೋಧಕ, ಮಾನಸಿಕ, ರಸೋತ್ಪಾದಕ ಎಂದು ಬೇರೆ ಬೇರೆ ಭಾಗಗಳಾಗಿ ವಿಂಗಡಿಸಬಹುದು. ಐತಿಹಾಸಿಕ ಸಣ್ಣ ಕಥೆಗಳನ್ನು ಯಶಸ್ವಿಯಾಗಿ ನಿರ್ವಹಿಸುವುದು ಕಷ್ಟಸಾಧ್ಯವಾದ ಕೆಲಸ. ಹಿಂದೆ ಎಂದೋ ನಡೆದ ಘಟನೆಯನ್ನು, ಅದಕ್ಕೆ ತಕ್ಕ ವಾತಾವರಣದೊಡನೆ ಹೃದಯಪಟಲದಲ್ಲಿ ಚಿತ್ರಿಸಿಕೊಳ್ಳಬೇಕು; ಆ ಘಟನೆಯ ರಸಸ್ಥಾನಗಳನ್ನು ಅರಿತು ತನ್ನ ಕಲೆಗೆ ಅಗತ್ಯವಿರುವಂತೆ ಅದನ್ನು ಸಿದ್ಧಪಡಿಸಿಕೊಳ್ಳಬೇಕು; ಗತಕಾಲದ ಪಾತ್ರಗಳಿಗೆಲ್ಲಾ ಹೊಸ ಜೀವಕಳೆಯನ್ನು ತುಂಬಬೇಕು; ಒಟ್ಟಿನಲ್ಲಿ ಚಾರಿತ್ರಕ ಸಂಗತಿ ಮತ್ತೊಮ್ಮೆ ಕಲಾವಿದನ ಕಲ್ಪನಾರಾಜ್ಯದಲ್ಲಿ ಸಚೇತನವಾಗಿ ನಡೆಯಬೇಕು. 'ನಿಜಗಲ್ಲಿನ ರಾಣಿ', 'ಆಲಂಗಿರಿ', 'ವೈಣಿಕ', 'ಪ್ರಾಯಶ್ಚಿತ್ತ' ಮೊದಲಾದುವು ಉತ್ತಮವಾದ ಐತಿಹಾಸಿಕ ಸಣ್ಣ ಕಥೆಗಳು. ಸಾಮಾಜಿಕ ಸಣ್ಣ ಕಥೆಗಳು ನಮ್ಮ ಸಮಾಜದ ಲೋಪದೋಷಗಳಿಗೆ ಕನ್ನಡಿ ಹಿಡಿಯುತ್ತವೆ.

ನಮ್ಮ ಸಮಾಜದಲ್ಲಿ ಕಾಣಬರುವ ಬಾಲ್ಯವಿವಾಹ, ವೈಧವ್ಯ, ವೇಶ್ಯಾಜೀವನ, ಮಲತಾಯಿ–ಮಲಮಕ್ಕಳು, ಅತ್ತೆ–ಸೊಸೆಯರು, ಹಳ್ಳಿಗರ ಮೌಢ್ಯ, ನಿರಕ್ಷರತೆ, ಅಕ್ಷರವಿದ್ಯೆಯ ಅವಿವೇಕ, ಪಾಶ್ಚಾತ್ಯರ ಅನುಕರಣ—ಇತ್ಯಾದಿ ನೂರಾರು ಕುಂದುಕೊರತೆಗಳನ್ನು ಕುರಿತು ಸಾವಿರಾರು ಕಥೆಗಳು ಹುಟ್ಟಿ ಕೊಂಡಿವೆ. ' ಬದುಕು ', ' ಬೀದಿಯಲ್ಲಿ ಹೋಗುವ ನಾರಿ ', ' ಮನುವಿನ ರಾಣಿ ', ' ಜಟಕಾ ಸಾಹೇಬು ', ' ವೊಸರಿನ ಮಂಗಮ್ಮ ', ' ಜೀವನ ' —ಇತ್ಯಾದಿ ಅನೇಕ ಕಥೆಗಳನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ನೀತಿಬೋಧಕ ಕಥೆಗಳಲ್ಲಿ ಸಣ್ಣ ಕಥೆಯು ಕಲಾಪರಿಣಾಮವಿದ್ದರೂ ನೀತಿ ಬೋಧೆ ಕಥೆಗಾರನ ಹೆಗ್ಗುರಿಯಾಗಿರುತ್ತದೆ. ಶ್ರೀ ರಾಜರತ್ನಂರವರ ' ಹನಿ ಗಳು ' ಎಂಬ ಪುಟ್ಟ ಸಣ್ಣ ಕಥೆಗಳ ಸಂಗ್ರಹ ಇದಕ್ಕೆ ಉತ್ತಮ ಉದಾಹರಣೆ. ಇನ್ನು ರಸೋತ್ಪಾದಕ ಕಥೆಗಳಲ್ಲಿ ನಮಗೆ ಪ್ರಮುಖವಾಗಿ ಕಾಣಬರುವ ರಸ ಗಳೆಂದರೆ ಶೃಂಗಾರ, ಕರುಣೆ ಮತ್ತು ಹಾಸ್ಯ. ನಮ್ಮ ಕಥೆಗಳಲ್ಲಿ ಬಂದಿರುವ ಶೃಂಗಾರ ಬಹುಮಟ್ಟಿಗೆ ತಿಳಿಯಾದುದು, ಅನಶ್ಲೀಲವಾದುದು. ಇಂತಹ ಶೃಂಗಾರನಿರೂಪಣೆ ಪಾಶ್ಚಾತ್ಯರಲ್ಲಿ ಅಪರೂಪವೆಂದು ಹೇಳಬಹುದು. ಈ ದೃಷ್ಟಿಯಿಂದ ಕನ್ನಡ ಕಥೆಗಳಲ್ಲಿನ ಶೃಂಗಾರನಿರೂಪಣೆಗೆ ತನ್ನದೇ ಆದ ಒಂದು ವೈಶಿಷ್ಟ್ಯವಿದೆ. ಸಾಮಾಜಿಕ ಸಣ್ಣ ಕಥೆಗಳಂತೆ ಶೃಂಗಾರಪೂರಿತ ಸಣ್ಣ ಕಥೆಗಳೂ ನಮ್ಮಲ್ಲಿ ಅಸಂಖ್ಯಾತವಾಗಿವೆ. ಹಾಸ್ಯಪೂರ್ಣವಾದ ಕಥೆಗಳು ನಮ್ಮಲ್ಲಿ ಅಸಂಖ್ಯಾತವಾಗಿ ಇಲ್ಲದಿದ್ದರೂ ಅವುಗಳಿಗೆ ಕೇವಲ ಅಭಾವವೇನೂ ಇಲ್ಲ. ಕರುಣರಸದ ಕಥೆಗಳೂ ತಕ್ಕಮಟ್ಟಿಗೆ ಬೆಳೆದುಬಂದಿವೆ. ಶೃಂಗಾರಕ್ಕೆ ' ಹೆಂಡತಿಯ ಕಾಗದ ', ಹಾಸ್ಯಕ್ಕೆ ' ನನ್ನ ಭಾವ ', ಕರುಣೆಗೆ ' ನಾನು ಕೊಂದ ಹುಡುಗಿ ' ಇವುಗಳನ್ನು ಒಂದೊಂದು ಉದಾಹರಣೆಯಾಗಿ ಕೊಡಬಹುದು. ಉಳಿದ ರಸಗಳು ಸಣ್ಣ ಕಥೆಗಳ ಸ್ವಭಾವಕ್ಕೆ ಅಷ್ಟಾಗಿ ಹೊಂದಿಕೊಳ್ಳುವು ದಿಲ್ಲವೋ ಏನೋ ! ಅವು ಹೆಚ್ಚಾಗಿಲ್ಲ. ಇಲ್ಲವೆಂದೇ ಹೇಳಬೇಕೆಂದು ತೋರುತ್ತದೆ.

ಮಾನವಜೀವನವನ್ನು ಮೃಗಪಕ್ಷಿಗಳ ಜೀವನದಲ್ಲಿ ಆರೋಪಿಸಿ ಬರೆದಿ ರುವ ಕೆಲವು ಸುಂದರವಾದ ಸಣ್ಣ ಕಥೆಗಳಿವೆ. ಇಂತಹವುಗಳಲ್ಲಿ ' ಗುಬ್ಬಿಯ ಸಂಸಾರ ', ' ಕಾಳಿ ', ' ರಾಜ–ರಾಣಿ ' ಮೊದಲಾದುವು ಉತ್ತಮ

ಉದಾಹರಣೆಗಳು. ಕಡೆಯ ಕಥೆಯಂತೂ ಅತ್ಯಂತ ಮನೋಹರವಾಗಿದೆ. ಕಥೆಯ ಬಹುಭಾಗ ಬೆಳೆಯುವವರೆಗೆ ಕಥೆಗಾರರು ಹೇಳುತ್ತಿರುವುದು ಎರಡು ಜೂಜಿನ ಕುದುರೆಗಳ ವಿಚಾರವೆಂಬುದು ಗೊತ್ತಾಗುವುದೇ ಇಲ್ಲ. ಅವುಗಳ ಪ್ರೇಮಜೀವನ ಮಾನವನ ಜೀವನಕ್ಕೆ ಸ್ವಲ್ಪವೂ ಕಡಮೆಯಾಗಿಲ್ಲ. ಆದರೂ ಅಸ್ವಾಭಾವಿಕವೆಂಬ ಭಾವನೆಯಿಲ್ಲ. ಗಂಡು–ಹೆಣ್ಣುಗಳ ಜೀವನ ಜೂಜಿನ ಕುದುರೆಗಳ ಜೀವನದಂತೆ. ಹೊಟ್ಟೆಯ ಪಾಡಿಗಾಗಿ ದುಡಿಯುವಾಗ ಒಬ್ಬರಿಗೊಬ್ಬರು ಒತ್ತಾಸೆ ನೀಡುತ್ತಾರೆ. ಹೆಣ್ಣಿನ ಮಾನಸಂರಕ್ಷಣೆಗಾಗಿ ಗಂಡು ತ್ಯಾಗಜೀವನವನ್ನು ಕೈಕೊಂಡು ಮೃತ್ಯುವಿಗೆ ತುತ್ತಾಗುವುದಕ್ಕೂ ಹಿಂಜರಿಯುವುದಿಲ್ಲ. 'ಗುಬ್ಬಿಯ ಸಂಸಾರ'ವೂ ಇಂತಹುದೇ ಒಂದು ತತ್ತ್ವವನ್ನು ನಿರೂಪಿಸುತ್ತದೆ. ಎಷ್ಟೋ ನಮ್ಮ ಹಗಲುಗನಸುಗಳು ಸಾವಿನಿಂದ ಒಡೆದು ಹೋಗುತ್ತವೆ.

ಇತ್ತೀಚೆಗೆ ಸಮಸ್ಯಾತ್ಮಕವಾದ, ವಿಚಾರವಿಮರ್ಶಾತ್ಮಕವಾದ ಅನೇಕ ಕಥೆಗಳು ಹುಟ್ಟುತ್ತಿವೆ. ಇಲ್ಲಿ ಮನೋರಂಜನೆಗಿಂತಲೂ ವಿಷಯವಿವೇಚನಾ ದೃಷ್ಟಿಯೇ ಹೆಚ್ಚಾಗಿರುತ್ತದೆ. ಸಮಾಜದಲ್ಲಿನ ದೀನದಲಿತರ ವಿಚಾರದಲ್ಲಿ ಅಗಾಧವಾದ ಅನುಕಂಪವೂ, ಸಂಪ್ರದಾಯಬದ್ಧವಾದ ಅನೇಕ ಅಂಧಶ್ರದ್ಧೆಗಳಲ್ಲಿ ಅಸಹನೆಯೂ ಈ ಕಥೆಗಳ ವೈಶಿಷ್ಟ್ಯ. ಸಮತಾವಾದ ಇವುಗಳ ತಿರುಳೆಂದು ಹೇಳಿದರೂ ತಪ್ಪಾಗಲಾಗದು. 'ಕಾರವಾನ್', 'ಶವದ ಮನೆ' ಇತ್ಯಾದಿ ಕಥೆಗಳು ಈ ಗುಂಪಿಗೆ ಸೇರಿದವು.

ಹೀಗೆಯೇ ಇನ್ನೂ ಅನೇಕ ಭೇದ–ಪ್ರಭೇದಗಳನ್ನು ಕಲ್ಪಿಸುತ್ತಾ ಹೋಗಬಹುದಾದರೂ ಅದು ಅನಾವಶ್ಯಕ. ಕನ್ನಡ ಸಣ್ಣ ಕಥೆಗಳಲ್ಲಿ ಕಾಣಬರುವ ಹಾಸ್ಯರಸವನ್ನು ಕುರಿತು ಮಾತ್ರ ಎರಡು ಮಾತುಗಳನ್ನು ಹೇಳುವುದು ಇಲ್ಲಿ ಆವಶ್ಯಕ. ತಿಳಿಹಾಸ್ಯವೆಂಬುದು ಕನ್ನಡ ಸಾಹಿತ್ಯದಲ್ಲಿ ಮೊಲದ ಕೋಡಾಗಿದ್ದುದು ಸಣ್ಣ ಕಥೆಗಳ ಉದಯದಿಂದ ಸ್ವಲ್ಪಮಟ್ಟಿಗೆ ಅಸ್ತಿತ್ವವನ್ನು ಪಡೆಯಲು ಸಾಧ್ಯವಾಗಿದೆ. ತಿಳಿಹಾಸ್ಯಕ್ಕೇ ಮೀಸಲಾದ ಕೆಲವು ಕಥೆಗಳನ್ನು ಕೂಡ ನಾವು ಕಾಣಬಲ್ಲೆವು. ಶ್ರೀನಿವಾಸರ 'ಸಣ್ಣ ಕಥೆಗಳು' ಸಂಗ್ರಹದ ಕಾಂಡಕಾಂಡದಲ್ಲಿಯೂ ತಿಳಿಹಾಸ್ಯ ತಾಂಡವವಾಡುತ್ತಿದೆ. ದುಃಖದ ಲವಲೇಶವೂ ಇಲ್ಲದ ಎಳೆತನದ ಸರಳಹೃದಯದಿಂದ ಹೊರಹೊಮ್ಮುವ ಹಾಸ್ಯ

ವನ್ನು ನಾವು ಕಾಣಬಹುದು—'ರಂಗಪ್ಪನ ಮದುವೆ', 'ರಂಗಪ್ಪನ ದೀಪಾವಳಿ', 'ರಂಗಪ್ಪನ ಕೋರ್ಟ್‌ಷಿಪ್' ಮೊದಲಾದ ಕಥೆಗಳಲ್ಲಿ. 'ರಂಗಪ್ಪನ ಕೋರ್ಟ್‌ಷಿಪ್'ನಲ್ಲಿ ಬರುವ ಪತ್ರಗಳ ಮಾಲೆಯನ್ನು ನೆನೆದೊಡನೆಯೇ ತರಂಗತರಂಗವಾಗಿ ನಗು ಉಕ್ಕುತ್ತದೆ. ರತ್ನಮ್ಮನ ಕಾಗದ ರಂಗಪ್ಪನನ್ನು ಸೇರಿತು. ಅದರಲ್ಲಿ 'ಬರವಣಿಗೆಯೋ ಹೆಂಗಸರ ಮನಸ್ಸಿನಂತೆ ಡೊಂಕು ಡೊಂಕು. ಅಕ್ಷರಗಳಿಗೆ ಹೊಟ್ಟೆಯೇನೊ ದಪ್ಪ, ಆದರೆ ಶಕ್ತಿ ಸಾಲದು; ಸಾಹುಕಾರರ ಹಾಗೆ.' ಇದು ಒಂದು ಕಾಗದದ ವರ್ಣನೆಯಾದರೆ ಮತ್ತೊಂದರ ಒಕ್ಕಣೆ 'ಪ್ರಿಯರೆ, ಗೂಳಿ ಗುಟುರುಹಾಕುತ್ತದೆ. ನಾಯಿ ಬೊಗಳುತ್ತದೆ, ಬೆಕ್ಕು ಮಿಯಾವ್ ಎನ್ನುತ್ತದೆ; ಕತ್ತೆ ಕಿರುಚುತ್ತದೆ, ನವಿಲು ಕೇಕೆ ಹಾಕುತ್ತದೆ; ಮಿರುಮಿರುಗುವೆ ಹಾ ಕಿರು ತಾರಗೆಯೆ........ ಕುರಿ ಬ್ಯಾ ಎನ್ನುತ್ತದೆ. ಇನ್ನೇನೂ ವಿಶೇಷವಿಲ್ಲ, ರತ್ನಮ್ಮ' ಇಂತಹ ನಿರ್ದುಷ್ಟವಾದ ಮಧುರ ಹಾಸ್ಯ ಶ್ರೀನಿವಾಸರ ಸಣ್ಣ ಕಥೆಗಳಲ್ಲಿ ಯಥೇಚ್ಛವಾಗಿ ದೊರೆಯುತ್ತದೆ.

ಶ್ರೀನಿವಾಸರು ಮನಸ್ಸನ್ನು ರಮಿಸಬಲ್ಲ ತಿಳಿಹಾಸ್ಯಕ್ಕೆ ಮಾರ್ಗದರ್ಶಕರಾದರೆ 'ಪರಶುರಾಮ'ರು ಜ್ಞಾನದಾಯಕವಾದ ವ್ಯಂಗ್ಯ ಹಾಸ್ಯವನ್ನು ಬಳಕೆಗೆ ತಂದರು. ಅವರ 'ಕುರಿಯ ಹಿಂಡು' ಸಂಗ್ರಹದಲ್ಲಿನ ಕಥೆಗಳೆಲ್ಲವೂ ಕಾಮಸೂತ್ರದಲ್ಲಿ ಹೆಣೆದುಕೊಂಡಿವೆ. ಸಮಾಜದಲ್ಲಿನ ಕುಂದುಕೊರತೆಗಳೂ ಅಂಧಶ್ರದ್ಧೆಗಳೂ ತಮ್ಮ ಕತ್ತಲು–ಬೆಳಕಾಟದಲ್ಲಿ ವಿನೋದದೊಡನೆ ವಿಚಾರಕ್ಕೂ ಅವಕಾಶವಿತ್ತಿವೆ. 'ದೆವ್ವಗಳ ಸಂಸಾರ'ದಲ್ಲಿ ಭಾರತೀಯರು ಜಗದ್ವಿಖ್ಯಾತರಾಗಿ ರಾಜ್ಯವಾಳುವರೆಂದು ತಿರುಗುಮುರುಗಾಗಿ ಹೆಣೆದಿರುವುದೂ 'ಯಜ್ಞಕುಂಡ'ದಲ್ಲಿ ಅಂಧಶ್ರದ್ಧೆಯ ಜನರು ಈಶ್ವರನ ಸಾಕ್ಷಾತ್ಕಾರವಾದಂತೆ ನೆನೆದು ವಂಚಕರ ಬಲೆಯಲ್ಲಿ ಸುಲಭವಾದ ಬೇಟೆಯಾಗಿ ಸಿಕ್ಕಿಬೀಳುವುದೂ ನಮ್ಮಲ್ಲಿ ನಗೆಯನ್ನು ಹುಟ್ಟಿಸುವುದರ ಜೊತೆಗೆ, ನಮ್ಮ ಹೇಡಿತನಕ್ಕಾಗಿ, ಅಂಧಶ್ರದ್ಧೆಗಾಗಿ, ಕುಂದುಕೊರತೆಗಾಗಿ, ಹಳಹಳಿಸಿ ನಿಟ್ಟುಸಿರು ಬಿಡುವಂತೆಯೂ ಮಾಡುತ್ತವೆ. ಶ್ರೀ ಬೇಂದ್ರೆಯವರು ಈ ಸಂಗ್ರಹದ ಮುನ್ನುಡಿಯಲ್ಲಿ ಹೇಳಿರುವಂತೆ 'ನಾಲ್ಕು ಜನರು ನಕ್ಕಾರು ಎಂಬ ಭೀತಿಗಿಂತ ಸೂಕ್ಷ್ಮವಾದ ಭೀತಿ ಬೇರೊಂದಿಲ್ಲ. ಹೂವಿಗಿಂತಲೂ ಹಗುರವಾದರೂ ನಗೆ ವಜ್ರಾಯುಧಕ್ಕಿಂತಲೂ

ಬಿರುಸು.' ಆದ್ದರಿಂದ ಈ ಪೂಜ್ಯ ನಗು ನಮ್ಮನ್ನು ಗೇಲಿಮಾಡಿ ಎಚ್ಚರಗೊಳಿಸಲು ಅತ್ಯುತ್ತಮ ಸಾಧನವಾಗಿದೆ. ಈ ಆಯುಧವನ್ನು ಮೈಯೆಲ್ಲಾ ಕಣ್ಣಾಗಿ ಬಳಸಬೇಕೆಂಬುದನ್ನು ಮಾತ್ರ ಮರೆಯಬಾರದು.

ಸಣ್ಣ ಕಥೆಗಳ ವಸ್ತುವಿನಲ್ಲಿ ಕಾಣಬರುವ ವೈವಿಧ್ಯವನ್ನು ನೋಡಿದುದಾಯಿತು. ಈಗ ಕಥಾವಸ್ತು ದೊರೆಯುವುದು ಎಲ್ಲಿ? ಎಂಬುದನ್ನು ನೋಡೋಣ. 'ಎಲ್ಲಿ?' ಎಂಬ ಪ್ರಶ್ನೆಗೆ 'ಎಲ್ಲೆಲ್ಲಿಯೂ' ಎಂಬುದು ಉತ್ತರ. ಯಾವ ಒಂದು ಸಣ್ಣ ಘಟನೆಯನ್ನು ಬೇಕಾದರೂ ತೆಗೆದುಕೊಂಡು ಅದಕ್ಕೆ ಮೆರುಗು ಹಾಕಿ ಕಥಾವಸ್ತುವನ್ನಾಗಿ ಮಾಡಿಕೊಳ್ಳಬಹುದು. ಈಗ ಕೆಲವು ವರ್ಷಗಳ ಕೆಳಗೆ 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟವಾದ 'ಹುಚ್ಚೋ ಅಲ್ಲವೋ' ಎಂಬ ಕಥೆಯಲ್ಲಿ ಕಥಾವಸ್ತುವನ್ನು ಹುಡುಕುವವನಿಗೆ ಒಂದು ಸೂಚನೆಯಿದೆ. ಮೂರನೆ ತರಗತಿ ರೈಲುಗಾಡಿಯಲ್ಲಿ 'ಸ್ವಲ್ಪ ಕಣ್ಣು ಕಿವಿಗಳನ್ನು ಬಿಟ್ಟುಕೊಂಡು ಮೌನವಾಗಿ ಕೇಳುತ್ತಿದ್ದರೆ ಎಷ್ಟು ವಿಧವಾದ ಮಾತುಕಥೆಗಳು ಕಿವಿಗೆ ಬೀಳುತ್ತವೆ! ಹೀಗೆ ರೈಲಿನಲ್ಲಿ ಪ್ರಯಾಣಮಾಡತಕ್ಕವನು ಆ ಹೊತ್ತಿನ ವೃತ್ತಪತ್ರಿಕೆಯನ್ನು ಓದಬೇಕಾಗಿಲ್ಲ. ಚಕ್ರವರ್ತಿಯಿಂದ ಚಾಕರಿವಾನನವರೆಗೆ ಎಲ್ಲರ ಮನೆಯ ವೃತ್ತಾಂತಗಳೂ ಪ್ರತ್ಯಕ್ಷವಾಗಿಬಿಡುತ್ತವೆ.' ಹೀಗೆ ರೈಲಿನಲ್ಲೊ ರಸ್ತೆಯಲ್ಲೊ ಕಂಡ ವ್ಯಕ್ತಿಗಳ ಮಾತುಕಥೆಗಳು, ವೃತ್ತಾಂತ ಪತ್ರಿಕೆಯಲ್ಲಿ ದೊರೆತ ಒಂದು ಸಣ್ಣ ಘಟನೆ—ಇವುಗಳನ್ನು ಕಥೆಗಾರ ತನ್ನ ಪ್ರತಿಭೆಯಿಂದ ಉಜ್ಜಿ ಉಜ್ವಲಗೊಳಿಸುತ್ತಾನೆ; ಕಲಾಶಕ್ತಿಯಿಂದ ಅವುಗಳಿಗೆ ಬಣ್ಣ ತುಂಬುತ್ತಾನೆ; ಕಲ್ಪನಾಶಕ್ತಿಯಿಂದ ಕಥೆಯನ್ನು ಪುಷ್ಟಿಗೊಳಿಸುತ್ತಾನೆ. ಘಟನೆಯಿಂದ ಕಥಾವಸ್ತು, ಕಥಾವಸ್ತುವಿನಿಂದ ಕಥಾಸಾರಾಂಶ —ಇವುಗಳನ್ನು ವಿಸ್ತರಿಸಬೇಕಾಗುತ್ತದೆ; ಅಥವಾ ಅನುಭವಶಾಲಿ ನೇರವಾಗಿ ಕಥೆಯನ್ನು ಬರೆಯುವುದಕ್ಕೇ ಆರಂಭಿಸಬಹುದು. ಘಟನೆಗಳಿಂದ ಕಥಾವಸ್ತು ತಯಾರಿಸುವುದು ಹೇಗೆಂದು ಹೇಳಿಕೊಡುವುದು ಸಾಧ್ಯವಿಲ್ಲ. 'ಅತ್ಯುತ್ತಮ ಮಾರ್ಗ' ಎಂಬುದೊಂದು ಪ್ರತ್ಯೇಕವಾಗಿಯೇನೂ ಇಲ್ಲ. ಇದನ್ನು ತಕ್ಕಷ್ಟು ಸಾಧನೆಯಿಂದ ಸಂಪಾದಿಸಬೇಕು. ಅನೇಕ ವೇಳೆ ಕಥಾವಸ್ತು ಭಾವಾವೇಶದ ಫಲವಾಗಿರುವುದಕ್ಕಿಂತಲೂ ಬುದ್ಧಿಶ್ರಮದ ಫಲವಾಗಿರುತ್ತದೆ. ಅನೇಕ ವೇಳೆ ಅಕಸ್ಮಾತ್ತಾಗಿ ಸ್ಮೃತಿಗೆ ಬರುವ ಒಂದು ಪದವೋ ಪದಪುಂಜವೋ ಕಥೆಯ

ಹುಟ್ಟಿಗೆ ಕಾರಣವಾಗಬಹುದು. ‘ಓ ss’ ಎಂದು ರಂಗಮ್ಮ ರಾಗ ತೆಗೆದುದು ಮುಗ್ಗುಲ ಮನೆಯ ಅಚ್ಚಮ್ಮನವರ ಆದ್ಯಂತವನ್ನೂ ಕೇಳುವವರ ಕಣ್ಣಿಗೆ ಕಟ್ಟ ಬಹುದು. ‘Let us not insult truth for fear of offending men’ ಎಂಬ ರವೀಂದ್ರರ ಸೂಕ್ತಿ ಆನಂದರ ‘ನಾವೂ ಹಾಗೆಯೆ’ ಎಂಬ ಸಣ್ಣ ಕಥೆಗೆ ಪ್ರೇರಕವಾಗಿರಬಹುದು; ‘A young boy is a young boy, a young girl is a young woman’ ಎಂಬ ವಾಕ್ಯ ‘ಸರಸಿಯ ಗೊಂಬೆ’ಯನ್ನು ಸೃಷ್ಟಿಸಲು ಕಾರಣವಾಗಿರಬಹುದು. ‘ಶಾಕುಂತಲ’ವನ್ನು ಓದಿ ಪುಳಕಿತರಾದ ಶ್ರೀನಿವಾಸರು ಆ ಹೆಣ್ಣಿಗೆ ಸುಖಜೀವನವನ್ನು ಒದಗಿಸ ಬೇಕೆಂದು ಮನಸ್ಸಿನಲ್ಲಿ ಕಲ್ಪಿಸಿಕೊಂಡ ದಿವ್ಯಚಿತ್ರವೇ ‘ಹೇಮಕೂಟದಿಂದ ಹಿಂದಿರುಗಿದಮೇಲೆ’ ಎಂಬ ಅದ್ವಿತೀಯ ಸುಂದರ ಕಥೆಯಾಗಿರಬಹುದು. ಎಲ್ಲೋ ಒಮ್ಮೆ ‘ಅಹವಾಲು’ ಹೇಳಿಕೊಂಡ ರೈತನ ಗೋಳು ‘ಸುಬೇದಾರ ರಿಗೆ ಪ್ಯಾದೆ ಮಾತು’ ಆಗಿರಬಹುದು. ಹೀಗೆ ಇತರರಿಗೆ ಆದ ಸಂಗತಿಗಳನ್ನು ನೋಡಿ ಅಥವಾ ಕೇಳಿ, ಅಥವಾ ತನಗೇ ಆದ ಒಂದು ಅನುಭವವನ್ನು ದೃಷ್ಟಿ ಯಲ್ಲಿ ಇಟ್ಟುಕೊಂಡು ಸಣ್ಣ ಕಥೆಯನ್ನು ಸೃಷ್ಟಿಸಬಹುದು.

ಪ್ರತಿಯೊಂದು ಕಥೆಯನ್ನೂ ಸಾಮಾನ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಬಹುದು—ಆರಂಭ, ಬೆಳವಣಿಗೆ, ಶಿಖರ ಎಂದು. ಈ ಮೂರು ಭಾಗಗಳೂ ಅತ್ಯಂತ ಮುಖ್ಯವಾದುವು. ಕಥೆಯನ್ನೋದಿ ಮನಸ್ಸು ಅಲ್ಲೋಲ ಕಲ್ಲೋಲವಾಗುವಂತಿದ್ದರೆ ಆ ಮನಸ್ಸನ್ನು ಸಮಾಧಾನಗೊಳಿಸಿ, ಸಾಮಾನ್ಯ ಮಟ್ಟಕ್ಕೆ ಇಳಿಸುವುದಕ್ಕಾಗಿ ‘ಅವರೋಹಣ’ವನ್ನು ಒಂದು ಮಹಾವಾಕ್ಯ (ಪ್ಯಾರ)ದಷ್ಟು ಬರೆಯಬಹುದು. ಇದು ಅಷ್ಟು ಮುಖ್ಯವಾದುದೂ ಅಲ್ಲ, ಎಲ್ಲ ಕಥೆಗಳಿಗೂ ಅತ್ಯಗತ್ಯವೂ ಅಲ್ಲ.

ಕಥೆಯನ್ನು ಆರಂಭಿಸುವ ಮೊದಲು ಕಥೆಯ ಹೆಸರಿನ ವಿಚಾರದಲ್ಲಿ ಸ್ವಲ್ಪ ಗಮನ ಕೊಡುವುದು ಅತ್ಯಗತ್ಯ. ಶ್ರೀಮಾನ್ ‘ಶ್ರೀನಿವಾಸ’ರು ‘ರಂಗನ ಮದುವೆ’ಯನ್ನು ಪ್ರಾರಂಭಿಸುವುದಕ್ಕೆ ಮೊದಲು ಹೀಗೆ ಹೇಳು ತ್ತಾರೆ—“ಇದೇನು ‘ರಂಗನ ಮದುವೆ’ ಎನ್ನದೆ ‘ರಂಗನಾಥನ ವಿವಾಹ’, ‘ರಂಗನಾಥವಿಜಯ’ ಎನ್ನಬಾರದೆ—ಎಂದು ನೀವಾರಾದರೂ (ಓದುಗರು) ಕೇಳಬಹುದಲ್ಲವೆ? ಅಹುದು. ‘ಜಗನ್ನಾಥವಿಜಯ’, ‘ಗಿರಿಜಾಕಲ್ಯಾಣ’

ಎಂದ ಹಾಗೆ, ಬಾಯಿತುಂಬ ಬರುವ ಒಂದು ಹೆಸರನ್ನು ನಾನೂ ಇಡಬಹುದಾಗಿತ್ತು. ಅದು ನನಗೆ ತಿಳಿಯದೆ ಇಲ್ಲ. ಆದರೆ ನೋಡಿ, ಇದು ಜಗನ್ನಾಥ ವಿಜಯವೂ ಅಲ್ಲ, ಗಿರಿಜೆಯ ಕಲ್ಯಾಣವೂ ಅಲ್ಲ; ನಮ್ಮೂರಿನ ನಮ್ಮ ರಂಗನ ಮದುವೆಯ ವಿಷಯ. ಆದ್ದರಿಂದ ಆ ರೀತಿಯ ಹೆಸರನ್ನಿಡಲಿಲ್ಲ." ಶ್ರೀನಿವಾಸರ ಈ ವಿವರಣೆ ಅಮೂಲ್ಯವಾದ ಒಂದು ಸಲಹೆಯನ್ನು ಕೊಟ್ಟಿದೆ. ಕಥೆಗೆ ಹೆಸರನ್ನಿಡುವಾಗ ಅದರ ಔಚಿತ್ಯವನ್ನು ಕುರಿತು ಯೋಚಿಸಬೇಕು. ಶಬ್ದಗಳ ಮೋಹಜಾಲಕ್ಕೆ ಸಿಲುಕಿ, ಔಚಿತ್ಯದ ಕೊಲೆಗೆಲಸಕ್ಕೆ ಕೈಹಾಕಬಾರದು. 'ರಂಗಪ್ಪನ ಮದುವೆ' ಎಂಬುದಕ್ಕೆ ಬದಲಾಗಿ 'ರಂಗನಾಥವಿಜಯ' ಎಂದಿದ್ದರೆ 'ಜಗನ್ನಾಥವಿಜಯ'ದಂತೆ ಇದೊಂದು ಮಹಾಕಾವ್ಯವೇನೊ ಎಂಬ ಭಾವನೆ ಬರಬಹುದು. ತತ್ಫಲವಾಗಿ ಅನೇಕರು ಅದನ್ನು ಕಣ್ಣೆತ್ತಿ ನೋಡದೆಯೇ ಹೋಗಬಹುದು. ಪ್ರತಿಯೊಂದು ಹೆಸರಿಗೂ ಅದರ ಹಿಂದೆ ಒಂದು ಅರ್ಥ ಸಮುದಾಯವಿದೆ. ಅದು ಜ್ಞಾತವಾಗಿಯೋ ಅಜ್ಞಾತವಾಗಿಯೋ ನಮ್ಮ ಅನುರಕ್ತಿಗೆ ಪೋಷಕವಾಗುತ್ತದೆ. ಕಥೆಗೆ ಕೊಡುವ ಹೆಸರು ಕಥಾಂಶದ ಸೂಚನೆಯನ್ನು ಬಿಟ್ಟುಕೊಡುವಂತಿರಬಾರದು; ಆದರೂ ಕಥೆಯ ತಿರುಳನ್ನು ಹೊರದೋರುವಂತಿರಬೇಕು. ಆನಂದರ 'ನಾನು ಕೊಂದ ಹುಡುಗಿ', ಶ್ರೀನಿವಾಸರ 'ಇಂದಿರೆಯೋ ಅಲ್ಲವೊ?'—ಇವು ಕಥೆಯ ಹೆಸರಿಗೆ ಅತ್ಯುತ್ತಮ ಉದಾಹರಣೆಗಳು.

ಕಥೆಯ ಪ್ರಾರಂಭ ಅದರಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸುತ್ತದೆ. 'ಮೊದಲು ತುತ್ತಿಗೇ ನೊಣ ತಿಂದಂತೆ' ಕಥೆಯ ಆರಂಭವೇ ಮನೋಹರವಾಗಿಲ್ಲದಿದ್ದರೆ ಮುಂದಿನ ಕಥೆಯನ್ನು ಓದುವವರಾರು? ಆದ್ದರಿಂದ ಕಥೆಯ ಪ್ರಾರಂಭವೆನ್ನುವುದು ಓದುಗರ ಹೃದಯವನ್ನು ಹಿಡಿದಿಡಬಲ್ಲ ರಮ್ಯತೆಯನ್ನು ಪಡೆದಿರಬೇಕು. ಇದಕ್ಕೂ ಶಿಖರಕ್ಕೂ ಪ್ರತ್ಯಕ್ಷವಾದ ಅಥವಾ ಪರೋಕ್ಷವಾದ ಒಂದು ಸಂಬಂಧವಿರಬೇಕು. ಸಣ್ಣ ಕಥೆಯಲ್ಲಿ ಅಸಂಬದ್ಧವಾದ ಅಥವಾ ಅನಾವಶ್ಯಕವಾದ ವಿಷಯಗಳಿಗೆ ಎಡೆಯಿಲ್ಲವಾದುದರಿಂದ ಪ್ರತಿ ವಾಕ್ಯವೂ ಶಿಖರಕ್ಕೆ ಪೋಷಕವಾಗಿರಬೇಕು. ಆದ್ದರಿಂದ ಕಥೆಯ ಆರಂಭವು ಶಿಖರದ ಸೃಷ್ಟಿಗೆ ಪೋಷಕವಾಗಿರಬೇಕು.

ಕಥೆಯನ್ನು ಪ್ರಾರಂಭಿಸುವುದು ಈಜನ್ನು ಪ್ರಾರಂಭಿಸಿದಂತೆ. ಈಜನ್ನು

ಪ್ರಾರಂಭಿಸಬೇಕೆಂದರೆ ನೇರವಾಗಿ ನೀರಿಗಿಳಿಯಬೇಕು. ಹೊರಗಡೆ ಕೈಕಾಲು ಆಡಿಸುವುದನ್ನು ಕಲಿತು ಆಮೇಲೆ ನೀರಿನಲ್ಲಿ ಇಳಿಯುವೆನೆಂದು ಹೇಳುವುದು ಹೆಡ್ಡತನ. ಅದರಂತೆಯೇ, ಕಥೆಯನ್ನು ಪ್ರಾರಂಭಿಸುವುದೆಂದರೆ ಕಥೆಯೊಳಗೇ ಧುಮ್ಮಿಕ್ಕುವುದು. ಕಥೆಗೆ ಅನಾವಶ್ಯಕವಾದ ವರ್ಣನೆಯೊಂದನ್ನು ಬರೆದು ಆಮೇಲೆ ಕಥೆಯನ್ನು ಪ್ರಾರಂಭಿಸಹೊರಟರೆ ಓದುಗರು ಕರಡಿಯನ್ನು ಕಂಡ ಹುಡುಗನಂತೆ ಹೆದರಿ ಓಡಿಹೋದಾರು!

ಕಥೆಯನ್ನು ಪ್ರಾರಂಭಿಸಲು ಅನೇಕ ಮಾರ್ಗಗಳಿವೆ. ' ಮಂಗಮ್ಮ ನಮಗೆ ಬಹು ವರ್ಷದಿಂದ ವರ್ತನೆಯಾಗಿ ಮೊಸರು ತಂದುಕೊಡುತ್ತಾಳೆ. ಈ ವರ್ತನೆ ಬೆಂಗಳೂರಿನ ತರಹ ' ಇತ್ಯಾದಿಯಾಗಿ ಶ್ರೀನಿವಾಸರು ' ಮೊಸರಿನ ಮಂಗಮ್ಮ 'ನನ್ನು ಆರಂಭಿಸಿರುವಂತೆ ನೇರವಾಗಿ, ಸರಾಗವಾಗಿ, ಕಥೆ ಹೇಳುವ ಧಾಟಿಯಲ್ಲಿ ಪ್ರಾರಂಭಿಸಬಹುದು. ಅಥವಾ ಶ್ರೀ ನರಸಿಂಹಮೂರ್ತಿ ಅವರು ತಮ್ಮ ' ಪ್ರೇಮಯಾತ್ರೆ 'ಯನ್ನು ಆರಂಭಿಸಿರುವಂತೆ,

' ಚಿನ್ನ—'

' ನನ್ನ ಹೆಸರು ಚಿನ್ನವಲ್ಲ.'

' ಸುಳ್ಳು, ನಿನ್ನ ಹೆಸರು ಚಿನ್ನ, ನಿನ್ನ ಹೆಸರೂ ಚಿನ್ನ; ಅಲ್ಲವೆಂದರೆ ಯಾರೊಪ್ಪುವರು ? '

ಹೀಗೆ ಸಂಭಾಷಣೆಯೊಡನೆ ಪ್ರಾರಂಭಿಸಬಹುದು. ಅಥವಾ ಶ್ರೀ ಕುಲಕರ್ಣಿ ಶ್ರೀನಿವಾಸರಾಯರು ತಮ್ಮ ' ಹೊಸ ಬಾಯಿ 'ಯಲ್ಲಿ ಹೇಳಿರುವಂತೆ,

' ಹೇಣ್ಣು ಜೀವನ, ಅದಕ್ಕೆ ಸಲಿಗೆ ಕೊಡಬಾರದು—ಎಂದು ಹೆಂಡತಿಯ ಸಂಗಡ ಸ್ವಲ್ಪ ಬಿಗುವಿನಲ್ಲಿರುವ ಗಂಡಂದಿರೇ ಬಹಳ; ಮತ್ತೆ ಕೆಲವರು ಸಿಟ್ಟು ಮಾಡುತ್ತಾರೆ, ಮಾತು ಬಿಡುತ್ತಾರೆ, ಜಗಳ ಮಾಡುತ್ತಾರೆ.'

ಇತ್ಯಾದಿಯಾದ ಒಂದು ಸಣ್ಣ ವರ್ಣನೆಯೊಡನೆ ಪ್ರಾರಂಭಿಸಬಹುದು. ಹೇಗೆಯೇ ಪ್ರಾರಂಭಿಸಲಿ, ಅದರ ಮೊದಲ ಮಹಾವಾಕ್ಯ(ಪ್ಯಾರ)ವನ್ನು ಓದಿದೊಡನೆಯೇ ಕಥೆಯ ಸ್ವರೂಪ–ಸನ್ನಿವೇಶಗಳು ಮನಸ್ಸಿನಲ್ಲಿ ಸ್ಪಷ್ಟವಾಗಿ ಮೂಡಬೇಕು. ' ಚಿಕ್ಕದೇವರಾಜ ಒಡೆಯರು ರಾಜಪದವಿಗೆ ಬಂದೊಡನೆ ವಿಶಾಲಾಕ್ಷಪಂಡಿತನು ಅವರ ಮುಖ್ಯ ಪ್ರಧಾನನಾದನು. ಒಡೆಯರಿಗೆ ಚಿಕ್ಕಂದು ಹಾನಗಲ್ಲಿನಲ್ಲಿ ತಂದೆಯ ಮನೆಯಲ್ಲಿ ಬೆಳೆಯುತ್ತಿರುವಾಗಣಿಂದ ಪಂಡಿತನ

ಪರಿಚಯ.'—ಈ ಆರಂಭದಲ್ಲಿ ಚರಿತ್ರೆಯ ಇಬ್ಬರು ವ್ಯಕ್ತಿಗಳು ಇದ್ದಾರೆ. ಜೈನನಾದ ವಿಶಾಲಾಕ್ಷಪಂಡಿತನನ್ನು ಮಂತ್ರಿಯಾಗಿ ಮಾಡಿಕೊಂಡಿರುವುದು ಸನ್ನಿವೇಶ. ಪರಮತದವನ ಪ್ರಾಶಸ್ತ್ಯವನ್ನು ಕಂಡು ರಾಜನ ಸುತ್ತ ನೆರೆದಿದ್ದ ವರಿಗೆ ಸ್ವಭಾವವಾಗಿಯೇ ಅಸೂಯೆ ಹುಟ್ಟುತ್ತದೆ. ಈ ಕಥೆಯ ಪ್ರಥಮ ಮಹಾವಾಕ್ಯವನ್ನು ಓದಿದೊಡನೆಯೇ ಇದು ಐತಿಹಾಸಿಕ ಕಥೆಯೆಂದೂ ಸ್ಪರ್ಧೆಯ ವಾತಾವರಣ ಉಳ್ಳುದೆಂದೂ ನಮ್ಮ ಮನಸ್ಸಿನಲ್ಲಿ ಮಿಂಚುತ್ತದೆ.

ಈಗ ಮತ್ತೊಂದು ಉದಾಹರಣೆಯನ್ನು ತೆಗೆದುಕೊಂಡು ನೋಡೋಣ. ಶ್ರೀ ದೇವುಡುರವರು ತಮ್ಮ 'ವೈಣಿಕ' ಎಂಬ ಕಥೆಯನ್ನು ಹೀಗೆ ಪ್ರಾರಂಭಿಸಿದ್ದಾರೆ: 'ಮಧ್ಯಾಹ್ನ ನಾಲ್ಕು ಘಂಟೆಯ ಸಮಯ. ಮಹಾರಾಜರು ತಾಂಬೂಲವನ್ನು ಒಪ್ಪಿಸಿಕೊಳ್ಳುತ್ತಾ ಅಂಬಾವಿಲಾಸದಲ್ಲಿ ಕುಳಿತಿದ್ದಾರೆ. ವಿದ್ವದ್ಗೋಷ್ಠಿ ಸುತ್ತಲೂ ಕುಳಿತು, ಕಾವ್ಯಾಲಾಪ-ವಿನೋದಗಳಿಂದ ಪ್ರಭುವನ್ನು ಆರಾಧಿಸುತ್ತಿದೆ. ಮಾತು ಮಾತಿಗೆಡೆಕೊಟ್ಟು, ವಿಷಯವು ವಿಷಯಾಂತರಕ್ಕೆ ಅವಕಾಶಕೊಟ್ಟು ಪ್ರಸ್ತಾಪ ಸಂಗೀತದ ಕಡೆ ಹೊರಳಿತು. ಸಂಗೀತಗಾರರು ಆ ಮಾತು ಈ ಮಾತು ಆಡುತ್ತಾ ಪ್ರಭುವಿಗೆ ಅರಿಕೆಮಾಡಿದರು: 'ಮಹಾಸ್ವಾಮಿ, ತಂತಿಗಳನ್ನು ಕಟ್ಟಿಕೊಂಡು ವೀಣೆಯನ್ನು ಬಾರಿಸುವುದು ಎಲ್ಲೆಲ್ಲೂ ಉಂಟು. ಅದರ ಬದಲು ಇನ್ನೇನನ್ನಾದರೂ ಕಟ್ಟಿ ವೀಣೆಯನ್ನು ಬಾರಿಸಬೇಕು.'

ಮೇಲಿನ ಮಹಾವಾಕ್ಯದಲ್ಲಿ ಎಷ್ಟು ವಿಷಯಗಳು ಅಡಕವಾಗಿವೆ! ವೈಣಿಕ ಶಿಖಾಮಣಿಯೊಬ್ಬನು ತಂತಿಗೆ ಬದಲಾಗಿ ತಲಚೇರಿ ಹುರಿ ಕಟ್ಟಿ ಅದ್ಭುತ ಸಂಗೀತವನ್ನು ನುಡಿಸುವುದರ ಮೂಲಕ ಈ ಕಥೆಗೆ ಶಿಖರವಿಡುತ್ತಾನೆ. ಈ ಶಿಖರಕ್ಕೂ ಆ ಪ್ರಾರಂಭಕ್ಕೂ ನೇರವಾದ ಸಂಬಂಧವಿದೆ. ಕಥೆ ಐತಿಹಾಸಿಕವಾದುದು, ರಾಜಾಸ್ಥಾನವೊಂದರಲ್ಲಿ ಅಸಾಧ್ಯ ಕಾರ್ಯವೊಂದನ್ನು ನೆರವೇರಿಸಬೇಕಾಗಿ ಬರತಕ್ಕ ಸಂದರ್ಭ ಸನ್ನಿವೇಶ.

ಸಂಭಾಷಣೆಯಿಂದ ಮೊದಲಾಗುವ ಇನ್ನೊಂದು ಒಳ್ಳೆಯ ಉದಾಹರಣೆಗೆ ಪಾಠಕರು ಭಾರತೀಪ್ರಿಯರ 'ಮೋಚಿ'ಯನ್ನು ನೋಡಬಹುದು.

ಸಾಮಾನ್ಯವಾಗಿ ಕಥೆಗಳು ವರ್ಣನಾತ್ಮಕವಾದ ವಿಷಯದಿಂದ ಆರಂಭವಾಗುತ್ತವೆ. ಆದ್ದರಿಂದ ಕಥೆಯನ್ನು ಆರಂಭಿಸಲು ಅದೇ ಅತ್ಯುತ್ತಮವಾದ ಮಾರ್ಗವೆಂಬ ಭಾವನೆ ಬರಬಹುದು. ಆದರೆ ಹಾಗಲ್ಲ. ಉತ್ತಮ ವರ್ಣನೆ

ಯೆಂಬುದು ರಂಗನಿರ್ಮಾಣ, ವಾತಾವರಣ ಯೋಜನೆ, ಓದುಗರ ಮನಸ್ಸನ್ನು ಭವಿಷ್ಯದ್ಘಟನೆಗೆ ಹದಗೊಳಿಸುವುದು, ಪಾತ್ರಗಳ ಪರಿಚಯ—ಇತ್ಯಾದಿಗಳನ್ನೆಲ್ಲಾ ಸಾಧಿಸುವಂತಿರಬೇಕು. ಇದಿಷ್ಟೂ ಸಾಧ್ಯವಾಗಲು ಕಥೆಗಾರನು ಕೈ ಪಳಗಿದ ಕಲೆಗಾರನಾಗಿರಬೇಕು. ಬರಿಯ ಒಂದು ಸ್ಥಳದ ಅಥವಾ ವ್ಯಕ್ತಿಯ ವಿಸ್ತೃತ ವರ್ಣನೆಗೆ ಸಣ್ಣ ಕಥೆಯಲ್ಲಿ ಸ್ಥಾನವಿಲ್ಲ. ಅದು ಎಷ್ಟು ಚಿಕ್ಕದಾಗಿದ್ದು, ಮೊನಚಾಗಿದ್ದು, ನಯವಾಗಿದ್ದರೆ ಅಷ್ಟು ಒಳ್ಳೆಯದು; ನುಂಗಲು ಗುಳಿಗೆಯನ್ನು ತಯಾರು ಮಾಡಿ ಕೊಡುವಂತೆ; ಹೀಗೆಯೇ ಬರೆಯಬೇಕೆಂದು ನಿಯಮ ಮಾಡಿ ಹೇಳುವುದು ಕಷ್ಟ. ಓದುಗರು ತಮ್ಮ ಬುದ್ಧಿಯನ್ನು ಉಪಯೋಗಿಸುವುದಕ್ಕೂ ಸ್ವಲ್ಪ ಅವಕಾಶವನ್ನು ಕಲ್ಪಿಸಿ, ಆಳವಾದ ಆಲೋಚನೆಯಿಂದ ವರ್ಣನೆಯನ್ನು ಹೊರದೆಗೆಯಬೇಕು. ಶ್ರೀನಿವಾಸರ 'ಬೀದಿಯಲ್ಲಿ ಹೋಗುವ ನಾರಿ' ವರ್ಣನಾಪ್ರಾರಂಭಕ್ಕೆ ಅತ್ಯುತ್ತಮ ಉದಾಹರಣೆ. ಮೊದಲ ವಾಕ್ಯವೇ ಒಂದು ಸುಂದರ ಸನ್ನಿವೇಶವನ್ನು ಸೃಷ್ಟಿಸುತ್ತದೆ. ನಿರಾಡಂಬರವಾದ ಸರಳ ನುಡಿಗಳು ವರ್ಣನೆಯ ಕಳೆಯನ್ನು ಮತ್ತಷ್ಟು ಹೆಚ್ಚಿಸುತ್ತವೆ. 'ಆ ನಾರಿ ಬಹು ಸುಂದರಿಯಾಗಿದ್ದಳು'—ಇಷ್ಟು ಮಾತಿನಿಂದ ಅವಳ ಕಣ್ಣು ತಾವರೆಯಂತಿತ್ತು; ಮೂಗು ಸಂಪಿಗೆಯಂತಿತ್ತು—ಇತ್ಯಾದಿ ಹೆಣ್ಣಿನ ಅಂಗಾಂಗ ವರ್ಣನೆಗಿಂತಲೂ ಹೆಚ್ಚಾಗಿ ಓದುಗರ ಮನಸ್ಸನ್ನು ಸೆಳೆಯಬಲ್ಲ ಸೌಂದರ್ಯ ಕಣ್ಣಿಗೆ ಕಟ್ಟುತ್ತದೆ. 'ರೈಲ್ವೆ ಸ್ಟೇಷನ್ನಿನಲ್ಲಿದ್ದವರು ಮುಕ್ಕಾಲುಪಾಲು ಜನ ಅವಳ ಕಡೆ ನೋಡುತ್ತಿದ್ದರು. ಅದರಿಂದ ಹೆಂಗಸು ಒಂದು ಕಡೆಗೆ ನಿಂತು ಯಾರನ್ನೋ ಹುಡುಕುವಂತೆ ಅಲ್ಲಿ ಇಲ್ಲಿ ನೋಡುತ್ತಿದ್ದಳು.... ಈ ಕೋಲಾಹಲದಲ್ಲಿ ಸಿಕ್ಕಿ ಹೆದರಿದವಳಂತೆ ತೋರುತ್ತಿದ್ದಳು. ಹೆದರಿದಂತೆ ತೋರುತ್ತಿದ್ದುದರಿಂದ ಮತ್ತಷ್ಟು ಸುಂದರಿಯಾಗಿ ಕಾಣುತ್ತಿದ್ದಳು....' ವರ್ಣನೆಯ ಕೈ ಹಿಡಿದು ಕಥೆಯ ಕ್ರಿಯೆಯೂ ಮಂದಗಮನದಿಂದ ಮುಂದುವರಿಯುತ್ತಿದೆ. ಸಣ್ಣ ಕಥೆಯಲ್ಲಿ ವರ್ಣನೆಗೆ ಇರುವ ಸ್ಥಾನದ ಗುಟ್ಟು ಇಷ್ಟೆ.

ಪ್ರಾರಂಭವಾದ ಕಥೆ ಬೆಳೆದು ಶಿಖರವನ್ನು ಮುಟ್ಟಿ ಮುಕ್ತಾಯವಾಗಬೇಕಷ್ಟೆ. ಆ ಬೆಳವಣಿಗೆಯ ಹೊರರೂಪವನ್ನು ಅಥವಾ ಕಟ್ಟಡವನ್ನು ಹಲವು ವಿಧದಲ್ಲಿ ಸಾಧಿಸಬಹುದು. ಕಥೆಗಾರನು ತನಗೂ ಕಥೆಗೂ ಸಂಬಂಧವಿಲ್ಲವೆಂಬಂತೆ ಗ್ರಂಥಕರ್ತನಾಗಿ ಕಥೆಯನ್ನೆಲ್ಲಾ ಹೇಳಿ ಪೂರಯಿಸಬಹುದು; ಅಥವಾ ಕಥೆಯ

ಪಾತ್ರಗಳಲ್ಲಿ ತಾನೊಬ್ಬನಾಗಿ ಪ್ರಥಮಪುರುಷ ಏಕವಚನದಲ್ಲಿಯೇ ಕಥೆಯನ್ನು ಬೆಳಸಬಹುದು. ಪಾತ್ರಗಳು ಒಬ್ಬರೊಬ್ಬರಿಗೆ ಪತ್ರ ಬರೆದಂತೆ ಕಲ್ಪಿಸಿ ಅಥವಾ ಕಥೆಗಾರನ ದಿನಚರಿಯಿಂದ ಉದ್ಧರಿಸಿ ಬರೆದಂತೆ ಕಲ್ಪಿಸಿ ಕಥೆಯ ಕಟ್ಟಡವನ್ನು ಹೊರದೋರಬಹುದು. ಹಿಂದಿನ ನೆನಪುಗಳನ್ನು ಮನಸ್ಸಿನಲ್ಲಿ ತಂದುಕೊಂಡು, ಹಗಲುಗನಸನ್ನು ಚಿತ್ರಿಸಿಕೊಳ್ಳುವುದೇ ಒಂದು ಕಥೆಯಾಗಬಹುದು. ಹೀಗೆ ಹೊಸ ರೀತಿಗಳು ಹಲವು ವಿಧವಾಗಿ ಇರಬಹುದಾದರೂ ಸಣ್ಣ ಕಥೆಯ ಜೀವಾಳವಾದ ವಸ್ತುವಿನ ಚತುರ ಸಂವಿಧಾನಕ್ಕೆ ಮಾತ್ರ ಗಮನ ಕೊಡಬೇಕಾದುದು ಅತ್ಯಗತ್ಯ. ಈ ಚತುರ ಸಂವಿಧಾನವೆಂಬುದೇ ಸಣ್ಣ ಕಥೆಯ ಹೆಗ್ಗುರುತು.

ಕಥೆ ಪ್ರಾರಂಭವಾಗುತ್ತಲೇ ಶಿಖರಮುಖವಾಗಿ ಸಾಗುತ್ತದೆಯಷ್ಟೆ. ಹಾಗೆ ಸಾಗುವ ದಾರಿಯಲ್ಲಿ ಹಲವು ಅಡ್ಡಿ–ಆತಂಕಗಳು ಇದಿರಾಗಬೇಕಾದುದು ಅತ್ಯಗತ್ಯ. ಈ ಅಡ್ಡಿ–ಆತಂಕಗಳು—ಪ್ರಾರಂಭದಿಂದ ಹೊರಟು ರಾಜಮಾರ್ಗದ ಕೊನೆಯನ್ನು ಮುಟ್ಟುವುದಕ್ಕೆ—ಮೊದಲು ಬಳಸಿಕೊಂಡು ಹೋಗಬೇಕಾಗಿರುವ ಡೊಂಕುಗಳಿದ್ದ ಹಾಗೆ. ಮೊದಲು—ಕೊನೆಗಳು ಒಂದರ ಕೊನೆಯಿಂದ ಮತ್ತೊಂದು ಕಾಣಬರುತ್ತದೆ. ಆದರೆ ಡೊಂಕುಗಳಲ್ಲಿ ತಿರುಗುವಾಗ ಬೇರೆ ಬೇರೆ ಅನಿರೀಕ್ಷಿತ ದೃಶ್ಯಗಳೂ ನೋಟಗಳೂ ಕಂಡುಬರುತ್ತವೆ. ಇಲ್ಲಿ ಕೆಲವು ತೊಡಕುಗಳಿವೆ. ಕಥೆಯು ಸುಳ್ಳಿನ ಕಂತೆಯೆಂಬ ಭಾವನೆ ಬಂದರೆ—ಕಥೆ ಅಸ್ವಾಭಾವಿಕವಾದರೆ—ಕಥೆಗಾರನ ಉದ್ದೇಶವೇ ಭಂಗವಾದಂತಾಗುತ್ತದೆ. ಕಥೆಯನ್ನು ಓದಿದಮೇಲೆ ‘ ಇದು ನಡೆದಿದ್ದರೂ ಆಶ್ಚರ್ಯವೇನಿಲ್ಲ ’ ಎಂಬಂತೆ ಇರಬೇಕು. ಕಥೆಯು ಓದುಗರನ್ನು ಕಣ್ಣುಕಟ್ಟಿ ಎಳೆದೊಯ್ಯಬೇಕು. ಯಾವ ಅಸಂಬದ್ಧ ಘಟನೆಗಳೂ ಅದರಲ್ಲಿ ತೂರಿಕೊಳ್ಳಬಾರದು. ಸ್ವಾಭಾವಿಕವಾದ ಒಂದು ಜೋಡಣೆಯಿಂದ, ಹೊಂದಿಕೆಯಿಂದ ಕೂಡಿ, ಕಥೆ ಮುಂದುವರಿಯಬೇಕು. ಬರಹವು ಕೇವಲ ವಾಚ್ಯವಾಗಿರದೆ ಅದರಲ್ಲಿ ಮಿತಿಯಾದ ಸೂಚನೆ ಅಥವಾ ಧ್ವನಿ ಇದ್ದರೆ ಕಥೆಯ ಕಳೆ ಹೆಚ್ಚುತ್ತದೆ. ಚಳಿಯಲ್ಲಿ ನಡುಗುತ್ತಿದ್ದ ಬಡವ ಎಂದರೆ ಅವನ ಮೈಮೇಲೆ ಸರಿಯಾದ ಬಟ್ಟೆಗಳಿರಲಿಲ್ಲವೆಂದು ಸೂಚಿತವಾಗುತ್ತದೆ. ಅವನು ಮುಂದೆ ನ್ಯೂಮೊನಿಯಾದಿಂದ ಸತ್ತ ಎಂದು ಕಥೆ ಕೊನೆಯಾದರೆ ಅದರ ಸೂಚನೆ ಹಿಂದೆ ನಡುಗುತ್ತಿದ್ದುದರಲ್ಲಿತ್ತು ಎಂದು ಭಾವಿಸ

ಬೇಕು. ಈ ಸೂಚನೆ ಸೂಕ್ಷ್ಮವಾಗಿರಬೇಕು. 'ನನಗೆ ಗೊತ್ತು, ಇವನು ಸಾಯುತಾನೆ' ಎಂದು ಓದುಗರು ಮೊದಲೇ ಸ್ಪಷ್ಟವಾಗಿ ಹೇಳುವಂತಿರ ಬಾರದು. ಸೂಚಿತ ಸಂಗತಿ ಅತ್ತಿತ್ತ ಒಲೆಯುತ್ತಾ, ಯಾವ ಕಡೆಗೆ ಬಾಗುವು ದೆಂಬುದನ್ನು ಮೊದಲೇ ನಿರ್ಧರಿಸಲು ಶಕ್ಯವಿಲ್ಲದಂತಿರಬೇಕು. ಕಥೆಯು ಕೊನೆಗೊಂಡಾಗ ಯಾವುದೋ ಒಂದು ಹೊಸತನ್ನು ಸಂದರ್ಶಿಸಿದ ಸಂತೋಷ ವಾಗಬೇಕು. ಇದನ್ನೇ ಪರಿಣಾಮರಮಣೀಯವೆಂದು ನಾವು ಕರೆಯುವುದು.

ಶ್ರೀಮಾನ್ ಆನಂದರ 'ಮಾಟಗಾತಿ'ಯನ್ನು ನೋಡಿ. ಕಲಾಜೀವಿ ಯಾದ ತರುಣನೊಬ್ಬ ಚಿತ್ರಪಟದ ಸುಂದರಿಯೊಬ್ಬಳನ್ನು ಕಂಡು ಭಾವನಾ ಪ್ರಪಂಚದಲ್ಲಿ ವಿಹರಿಸುತ್ತಾನೆ. ಇಷ್ಟೇ ಕಥಾವಸ್ತು. ಇಷ್ಟು ಸ್ವಲ್ಪ ವಸ್ತುವನ್ನು ಹದಿನೇಳು ಪುಟಗಳಷ್ಟು ವಿಸ್ತರಿಸಿ, ಎಲ್ಲೆಲ್ಲಿಯೂ ಜೊಳ್ಳಾಗದಂತೆ, ಬಿಗಿ ತಪ್ಪದಂತೆ, ನಡೆಸಿಕೊಂಡು ಬರುವುದೆಂದರೆ ಸಾಮಾನ್ಯವಲ್ಲ. ಕಡೆಯವರೆಗೂ ಕಥೆಯೊಂದು ಒಗಟೆಯಾಗಿ ಕುಳಿತಿದೆ. ಕಡೆಯಲ್ಲಿ 'ಬರಿಯ ಚಿತ್ರಪಟವೇ ನಮ್ಮನ್ನು ಇಷ್ಟು ಮರುಳು ಮಾಡಿ ಇಲ್ಲಿಯವರೆಗೆ ಎಳೆತಂದಿತೇ?' ಎಂದು ಹರ್ಷಪುಳಕಿತರಾಗುತ್ತೇವೆ. ಅದರ ಓಟಕ್ಕಾಗಿ ಕಥೆಯನ್ನು ಇಮ್ಮಡಿಯಾಗಿ ಪ್ರೀತಿಸುತ್ತೇವೆ, ಗೌರವಿಸುತ್ತೇವೆ. ಇದೇ ಕಥನಸಾಹಿತ್ಯದಲ್ಲಿನ ನೈಪುಣ್ಯ ಪ್ರೌಢಿಮೆ.

ಶ್ರೀ ಗೋಪಾಲಕೃಷ್ಣರಾಯರ 'ನಟಿ'ಯಲ್ಲಿ ಕಥೆಯ ಸಂವಿಧಾನ ಮನೋಹರವಾಗಿದೆ. ಆಗರ್ಭ ಶ್ರೀಮಂತನಾದ ತರುಣನೊಬ್ಬ ತನ್ನ ವಿದ್ಯಾ ಭ್ಯಾಸವನ್ನು ಮುಗಿಸಿ ಕಲಕತ್ತೆಯಿಂದ ಹಿಂದಿರುಗಿದ ದಿನ, ನಾಟಕದ ನಟಿ ಯೊಬ್ಬಳು ತನ್ನ ಅಭಿನಯಕೌಶಲದಿಂದ ಅವನನ್ನು ಸಂತೋಷಪಡಿಸಿದಳು. ಅವನು ಊರಿನವರ ಪರವಾಗಿ ಅವಳಿಗೆ ಬಹುಮಾನವನ್ನು ಸಲ್ಲಿಸಿದನು. ಆ ಹುಡುಗಿಯ 'ತಂದೆ' ಎನಿಸಿಕೊಂಡ ಪಾಪಿಗೆ ಹಣದ ಮೇಲೆ ದುರಾಶೆ. ಹುಡುಗಿಯನ್ನು ಶ್ರೀಮಂತ ತರುಣನಿಗೆ ಗಂಟುಹಾಕಿ ಹಣ ಸಂಪಾದಿಸಬೇಕೆಂದು ಕೊಳ್ಳುತ್ತಾನೆ. ಅಷ್ಟರಲ್ಲಿ ಹುಡುಗಿಯ ತಾಯಿಯಿಂದ ಅವಳು ಶ್ರೀಮಂತನ ತಂದೆಯ ಸಮಾಜದೂಷ್ಯ ಒಲವಿನ ಫಲವೆಂದು ಗೊತ್ತಾಗುತ್ತದೆ. ಈ ತಂಗಿ ಯನ್ನು ನರಕಜೀವನದಿಂದ ಉದ್ಧರಿಸಬೇಕೆಂದು ಕಂಕಣಬದ್ಧನಾದ ತರುಣ ಅವಳನ್ನು ಇಂಗ್ಲೆಂಡಿಗೆ ಕರೆದುಕೊಂಡುಹೋಗಿ, ಶಿಕ್ಷಣ ಕೊಡಿಸುತ್ತಾನೆ.

ಆವಳನ್ನು ತನ್ನ ಸ್ನೇಹಿತನೊಬ್ಬನಿಗೆ ಲಗ್ನಮಾಡಿಕೊಡಬೇಕೆಂದು ತರುಣನು ಹವಣಿಸುತ್ತಿರುವಾಗ, ಹುಡುಗಿಯು, ತನ್ನ ಮನಸ್ಸಿನ ಪ್ರೇಮದ ಕನಸಿನಲ್ಲಿ ಕಾಣುತ್ತಿದ್ದ ತರುಣನು ತನ್ನ ಅಣ್ಣನೆಂಬ ಗುಟ್ಟು ಗೊತ್ತಾಗಿ ಎಲ್ಲಿಯೋ ಕಣ್ಮರೆಯಾಗುತ್ತಾಳೆ.

ಪ್ರಸಂಗ ಇಷ್ಟು ದೊಡ್ಡದಾಗಬಾರದಿತ್ತೇನೊ! ಆದರೂ ಸಣ್ಣ ಕಥೆಗೆ ತಕ್ಕ ವಸ್ತುರಚನೆ ಇದರಲ್ಲಿ ಮೂಡಿದೆ. ಕಥೆಯ ಓಟ ಎಲ್ಲಿಯೂ ಕುಂಟದೆ ಏಮ್ಮುಖವಾಗಿ ಓಡುತ್ತದೆ. ಮನಸ್ಸನ್ನು ಅತ್ತ ಇತ್ತ ಹರಿಯುವಂತೆ ಮಾಡುವ ಪ್ರಸಂಗಗಳಾವುವೂ ಇಲ್ಲಿಲ್ಲ. ಸಣ್ಣ ಕಥೆಗೆ ಅಗತ್ಯವಾದ ಸಂದೇಹಾಶಂಕೆಗಳು ಮತ್ತೆ ಮತ್ತೆ ಉತ್ಪನ್ನವಾಗುತ್ತವೆ. ನಮ್ಮ ಕುತೂಹಲವು ಏರುತ್ತ ಇಳಿಯುತ್ತಾ ಮುಂದೆ ಸಾಗುತ್ತದೆ. ಕಥೆಯಲ್ಲಿನ ಆಶಂಕೆ ಸಂದೇಹಗಳು ಒಂದೊಂದೂ ಒಂದು ಘಟ್ಟ, ಒಂದೊಂದು ಶಿಖರ. ನಟಿಯು ತರುಣನ ಪ್ರಯತ್ನಗಳನ್ನೆಲ್ಲಾ 'ನೀರಿನಲ್ಲಿನ ಹೋಮ' ಮಾಡಿ ಕಣ್ಮರೆಯಾಗುವುದು ಈ ಶಿಖರಗಳ ಸಾಲಿನಲ್ಲಿನ ಗೌರೀಶಂಕರ. ಈ ಅತ್ಯುನ್ನತ ಶಿಖರ ಕಥೆಯ ಕೊನೆಯಲ್ಲಿ ಬರುತ್ತದೆ. ಓದುಗರ ಔತ್ಸುಕ್ಯವೆಂಬುದು ಒಂದೇ ಮಟ್ಟದಲ್ಲಿ ಹರಿದುಕೊಂಡು ಹೋಗುವ ಹೊಳೆಯಲ್ಲ. ಇದನ್ನು ಹರಿಸಬೇಕಾದರೆ ಕಥಾಸ್ವಾರಸ್ಯದ ಸೆಳವು ಆವಶ್ಯಕ. ಕೊನೆಯ ಶಿಖರಕ್ಕೂ ಅದರ ಹಿಂದಿನ ಶಿಖರಕ್ಕೂ ಮಧ್ಯದ ಕಥೆ ಓದುಗರ ಮನಸ್ಸನ್ನು ವೇಗವಾಗಿ ಸೆಳೆಯಲು ತಕ್ಕಂತಿರಬೇಕು. ದೂರದಿಂದ ಮಂದ ಮಂದವಾಗಿ ಕೇಳಿಬರುವ ಗುಡುಗು ಫಳಕ್ಕನೆ ಹೊಳೆಯುವ ಮಿಂಚಿನೊಡನೆ ಸೇರಿ, ಛಳಿರೆಂದು ಧರೆಗಿಳಿಯುವ ಸಿಡಿಲಿನಂತೆ—ಅಷ್ಟು ರಭಸದಿಂದ—ಕಥೆಯು ಶಿಖರವನ್ನು ಮುಟ್ಟಬೇಕು. ಬಡಿದ ಸಿಡಿಲು, ಬಂದುದಕ್ಕಿಂತಲೂ ವೇಗವಾಗಿ ಮಾಯವಾಗುವಂತೆ, ಅನಿರೀಕ್ಷಿತ ಘಟನೆಯೊಡನೆ ಕಥೆಯೂ ಅಲ್ಲಿಗೆ ಕರಗಿ ಕೊನೆಗೊಳ್ಳಬೇಕು. ಶ್ರೀ ಆನಂದರ 'ಹೆಂಡತಿಯ ಕಾಗದ' ಈ ರೀತಿ ಮಾದರಿಯ ಮುಕ್ತಾಯದಲ್ಲಿ ಕೊನೆಯಾಗಿದೆ:

ಅತ್ಯುತ್ಸುಕತೆಯಿಂದ ಕಾಯುತ್ತಿದ್ದ ಪ್ರೇಮಪತ್ರ ಟಪಾಲಿನಲ್ಲಿ ಬಂದಿದೆ; ರಾಮನಾಥನಿಗೆ ಓದುವುದಕ್ಕೆ ಅವಕಾಶವಿಲ್ಲ. ಮನಸ್ಸೆಲ್ಲವೂ ಕಾಗದದ ಮೇಲೆ; ಆ ದಿನವೆಲ್ಲಾ ಹಿಡಿದ ಕೆಲಸಗಳೆಲ್ಲಾ ಹಾಳು. ರಾತ್ರಿಯವರೆಗೆ ಮುಳ್ಳಿನಮೇಲೆ ನಿಂತಿರುವವನಂತೆ ಕಾದು, ಕೊಠಡಿಯ ಏಕಾಂತದಲ್ಲಿ ಲಕೋಟೆ

ಒಡೆದು ನೋಡಿದರೆ ಹತ್ತು ಬರಿಯ ಹಾಳೆಗಳು. ಕಡೆಯಲ್ಲಿ ಎರಡು ಮಾತು : 'ನಿಮ್ಮ ಕೋಪದ ಕಾಗದ ತಲ್ಪಿತು. ಆದರೆ ಸಾಲದು ಕೋಪ! ಈ ದೊಡ್ಡ ಕಾಗದ ನೋಡಿದಾಗ ನಿಮಗೆ ಎಷ್ಟು ಸಿಟ್ಟು ಬಂತೋ, ಅದನ್ನೆಲ್ಲಾ ತುಂಬಿ ದಯವಿಟ್ಟು ಇನ್ನೊಂದು ಕಾಗದ ದಯಪಾಲಿಸಬೇಕು. ನಿಮ್ಮ, ವಾಣಿ.'

ಈ ಕಾಗದದ ಒಕ್ಕಣೆ ಕಥೆಯ ಶಿಖರ. ಅನಿರೀಕ್ಷಿತವಾದ ಈ ಶಿಖರ ವನ್ನು ಮುಟ್ಟಿದೊಡನೆಯೇ ಕಥೆ ಕೊನೆಯಾಗುತ್ತದೆ. ತನ್ನ ಸ್ಥಿತಿ ಹೇಗಾಗಿರ ಬಹುದೆಂದು ಊಹಿಸಿಕೊಂಡು ವಾಣಿ ನಗುತ್ತಿರಬಹುದೆಂಬ ಭಾವನೆ ಬರುತ್ತಲೇ ರಾಮನಾಥ 'ವಾಣಿ' ಎಂದಿದ್ದ ಸ್ಥಳವನ್ನು ಮೆಲ್ಲನೆ ತುಟಿಗಳಿಗೆ ಒತ್ತಿಕೊಳ್ಳು ತ್ತಾನೆ. 'ಎಷ್ಟಾದರೂ ರಸಿಕ ನೋಡಿ!' ಇದಕ್ಕಿಂತಲೂ ಉತ್ತಮ ರೀತಿಯ ಮುಕ್ತಾಯ ಅಸಾಧ್ಯವೇ ಸರಿ.

ಅನಿರೀಕ್ಷಿತವಾದ ಶಿಖರವೇ ಕಥೆಯ ಕೊನೆಯಾದರೂ ಕಥೆಯಿಂದ ಚಿತ್ತ ಕ್ಷೋಭವುಂಟಾಗುವುದಾದರೆ ಮನಸ್ಸಿನ ಸಮತೆಯನ್ನು ಪಡೆಯುವುದಕ್ಕಾಗಿ ಪುಟ್ಟ ಅವರೋಹಣವೊಂದನ್ನು ಕಥೆಯ ಕೊನೆಗೆ ಸೇರಿಸುವುದುಂಟು. ಶ್ರೀನಿ ವಾಸರ 'ಕಾಮನ ಹಬ್ಬ'ದ ಕಥೆಯ ನಾಲ್ಕನೆಯ ಭಾಗ ಈ ಅವರೋಹಣಕ್ಕೆ ಒಂದು ಉದಾಹರಣೆ. ಶೀನಿ–ಸಾವಿತ್ರಮ್ಮ—ಇವರ ಪರಸ್ಪರ ಸಮಾಗಮ ದೊಡನೆ ಕಥೆ ಮುಕ್ತಾಯವಾಯಿತಾದರೂ ಸಾವಿತ್ರಮ್ಮನವರು ಸುಖವಾಗಿದ್ದ ಚಿತ್ರವನ್ನು ಸ್ವಲ್ಪ ತೋರಿಸಿ, ಓದುಗರ ಚಿತ್ತದ ಉದ್ವಿಗ್ನತೆಯನ್ನು ಸ್ವಲ್ಪ ಮಟ್ಟಿಗೆ ಕಡಮೆಮಾಡುವುದಕ್ಕಾಗಿ ಗೌರಿಹಬ್ಬದ ಬಾಗಿನಗಳನ್ನು ಮುತ್ತೈದೆ ಯರಿಗೆ ಕೊಡುವಂದು ಸಾವಿತ್ರಮ್ಮನವರಿಗೆ ಅಗ್ರಪೂಜೆ ಸಲ್ಲುವಂತೆ ಮಾಡಿದೆ. ಹಾಗೆಯೇ ಬಿ. ಎಸ್. ಶ್ರೀಹರ್ಷರ 'ಮುರುಕು ಬೊಂಬೆ'ಯ ಅವರೋಹಣ ಕೂಡ ಅತ್ಯಂತ ಮನೋಹರವಾಗಿದೆ: ವಾರದ ಹುಡುಗ ರಾಮು ನೀರಿನಲ್ಲಿ ಬಿದ್ದ ಹುಡುಗಿ ಪರಿಮಳೆಯನ್ನು ಮೇಲಕ್ಕೆತ್ತಿ ಉದ್ಧರಿಸಿದ್ದ ; ಮುಂದೆ ಐನೂರು ಸಂಬಳ ತರುವ ಹುದ್ದೇದಾರನಾದಮೇಲೆ ಅವಳನ್ನೇ ಮದುವೆಯಾದ. ಅವರಿಬ್ಬರ ಪ್ರೇಮಫಲ ಪುಟ್ಟು. ತಾಯಿ ಮಗುವನ್ನು ಹೊಡೆದಾಗ ರಾಮು ಹೆಂಡತಿಯನ್ನು 'ಪರಿಮಳಾ, ದೇವರ ದಯದಿಂದ ನಮ್ಮ ಮನೆಯಲ್ಲಿ ಕೊಳ ವಿಲ್ಲ. ಇದ್ದಲ್ಲಿ ನಮ್ಮ ಪುಟ್ಟುವಿನ ಗತಿಯೇನು?' ಎಂದ. ಪರಿಮಳ ಮುಖ ತಗ್ಗಿಸಿ, ಅನಂತರ 'ಇದ್ದರೇನಾಗುತ್ತಿತ್ತು? ಒಬ್ಬಳು ಸೀತೆ ಬಂದು ಅವನನ್ನು

  

ಜುಟ್ಟು ಹಿಡಿದು ಕರೆದುಕೊಂಡು ಹೋಗುತ್ತಿದ್ದಳು. ಪುಟ್ಟುವಿಗೂ ಬೇಗ ಮದುವೆಯಾಗುತ್ತಿತ್ತು' ಎಂದು ಉತ್ತರ ಕೊಡುತ್ತಾಳೆ. ಈ ಗಂಡ-ಹೆಂಡತಿಯರ ಸಂವಾದ ಮಾದರಿಯ ಅವರೋಹಣ.

ಕಥೆಗಾರರಾಗಬೇಕೆಂದು ಬಯಸುವವರು ಅಗತ್ಯವಾಗಿಯೂ ಅರಿಯಬೇಕಾದ ಒಂದೆರಡು ಸೂಚನೆಗಳನ್ನು ಹೇಳಿ ಈ ಭಾಗವನ್ನು ಮುಗಿಸಬಹುದು. ಸಾಹಿತ್ಯವೂ ಸಹ ಚಿತ್ರಕೆಲಸದಂತೆ ಒಂದು ಕಲೆ. ಆಸಕ್ತಿ ಸ್ಫೂರ್ತಿಗೊಂಡಿರದ ಹೊರತು ಯಾವನೂ ಚಿತ್ರಗಾರನಾಗಲಾರ. ಉತ್ತಮ ಸಂಗೀತವನ್ನು ಕೇಳಿ ಅನುಕರಿಸುವಂತಿದ್ದರೆ, ಅದನ್ನು ಕೇಳುತ್ತಾ ಅಥವಾ ಹೇಳುತ್ತಾ ಮೈಮರೆಯುವಂತಿದ್ದರೆ ಅವನು ದೊಡ್ಡ ಸಂಗೀತಗಾರನಾಗುವನೆಂದು ನಾವು ಹೇಳುವುದಿಲ್ಲವೆ? ಕಥೆಗಾರನೂ ಅಷ್ಟೆ. ತನಗೆ ತಿಳಿದಷ್ಟನ್ನು ಸ್ವಾರಸ್ಯವಾಗಿ ಹೇಳಬಲ್ಲವನಾದರೆ, ಮತ್ತೊಬ್ಬರಿಂದ ಕೇಳಿದ ಕಥೆಯನ್ನಾದರೂ ರಮ್ಯವಾಗಿ ಉತ್ಸಾಹದಿಂದ ಪುನಃ ಹೇಳಬಲ್ಲನಾದರೆ, ಅವನು ಮುಂದೆ ಮುಂದೆ ದೊಡ್ಡ ಕಥೆಗಾರನಾಗುವನೆಂದು ಹೇಳಬಹುದು. ಸೊಗಸಾಗಿ ಕಾಗದ ಬರೆಯಬಲ್ಲವನು, ಉತ್ತಮ ವರ್ಣನೆಗಳನ್ನು ಬರೆಯಬಲ್ಲವನು, ಮನಸ್ಸಿನಲ್ಲಿಯೇ ಕಲ್ಪನಾಚಿತ್ರಗಳನ್ನು ಹೆಣೆಯಬಲ್ಲವನು—ಇವರಲ್ಲೆಲ್ಲಾ ಕಥೆಗಾರರಾಗುವ ಬಿತ್ತ ಹುದುಗಿಕೊಂಡಿರಬಹುದು. ಅಂತರ್ಗತವಾಗಿ ಈ ಮೂಲಸಾಮಗ್ರಿಯೊಡನೆ ಕಥನಕಲೆಯ ಲಕ್ಷಣವನ್ನೂ ಅರಿತುಕೊಂಡರೆ—ಕಲಾಶಕ್ತಿಯೊಡನೆ ಶಾಸ್ತ್ರಾಭ್ಯಾಸವೂ ಸೇರಿದರೆ—'ರನ್ನ ಮಣಿಯೊಳ್ ಚೆಂಬವಳಮಂ ಕೋದಂತಿರೆ'—ಉತ್ತಮ ಸಾಹಿತ್ಯ ಉದಿಸುತ್ತದೆ. ಕಲೆ ಒಂದು ಬ್ರಹ್ಮತೇಜಸ್ಸು; ಶಾಸ್ತ್ರ ಕ್ಷಾತ್ರತೇಜಸ್ಸು. ಇವೆರಡರ ಸಾಮರಸ್ಯವೇ ಮಹಾಕಾವ್ಯಕ್ಕೆ ಮೂಲ.

ನಿಯಮಗಳನ್ನು ತಿಳಿದುಕೊಳ್ಳಬೇಕೆಂದು ಹೇಳಿದ ಮಾತ್ರಕ್ಕೆ ದೊಡ್ಡ ಕಥೆಗಾರರೆಲ್ಲರ ದೊಡ್ಡತನಕ್ಕೂ ನಿಯಮಗಳೇ ಊರೆಗೋಲೆಂದು ಭಾವಿಸಬಾರದು. ಹಿರಿಯರಾದವರು ತಮ್ಮ ಶಕ್ತಿಯನ್ನು ತಾವೇ ಕಂಡುಕೊಂಡು ಹೆದ್ದಾರಿಯಲ್ಲಿ ನಡೆದು ಅದನ್ನು ಸಾಧಿಸಿದರು. ಉತ್ತಮ ಕಥೆಗಾರರೆನಿಸಿಕೊಂಡವರು, ಅನೇಕ ವರ್ಷಕಾಲ ತಮ್ಮ ಆಸೆ ನೆರವೇರದೆಯೇ ಕೆಲಸಮಾಡುತ್ತಿದ್ದು, ಅನುಭವದ ಮಹಾ ಶಿಕ್ಷಣಶಾಲೆಯಲ್ಲಿ ಪಾಠ ಕಲಿತರು. ಒಬ್ಬ ಪಾಶ್ಚಾತ್ಯ ಕಥೆಗಾರನು ತಾನು ಮೊದಲು ಮಾಸಪತ್ರಿಕೆಗಳಿಗೆ ಕಳುಹಿಸುತ್ತಿದ್ದ

ಕಥೆಗಳನ್ನು ಸಂಪಾದಕರು ಸ್ವೀಕರಿಸದೆ ಕಳುಹಿಸಿದ ಅಸ್ವೀಕಾರದ ಚೀಟಿಗಳಿಂದಲೇ ತನ್ನ ಕೊಠಡಿಯ ಗೋಡೆಗಳಿಗೆಲ್ಲಾ ಕಾಗದ ಅಂಟಿಸುವುದನ್ನು ಪೂರೈಸಿದ್ದನಂತೆ! ತನ್ನ ತಪ್ಪುಗಳೇನೆಂಬುದನ್ನು ತಾನೇ ಕಂಡುಕೊಳ್ಳುತ್ತಾ, ಅದರ ಬೆಳಕಿನಲ್ಲಿ ತನ್ನ ಕಥೆಗಳನ್ನು ಉತ್ತಮಗೊಳಿಸುತ್ತಾ, ಕ್ರಮೇಣ ಶಾಸ್ತ್ರದ ಪೂರ್ಣ ಪರಿಚಯವನ್ನು ತಾನಾಗಿಯೇ ಕಂಡುಕೊಂಡನಂತೆ! 'ಸಂಪ್ರದಾಯ ಶರಣ' ಎಂಬ ಹೆಸರು ವ್ಯಾಕರಣಕಾರನೊಬ್ಬನಿಗೇ ಅಲ್ಲ; ಸಾಹಿತ್ಯದ ಎಲ್ಲ ಶಾಸ್ತ್ರಭಾಗಗಳಿಗೂ ಅನ್ವಯಿಸಿಕೊಳ್ಳಬೇಕಾದ ಮಾತು ಅದು. ಉತ್ತಮ ಕಥೆಗಳ ಉದಾಹರಣೆಯಿಂದ ಕಥನಕಲಾವಿಮರ್ಶೆ ಹುಟ್ಟಿದೆ. ಕಲಾವಿಭಾಗದಲ್ಲಿ ವೈವಿಧ್ಯ ಹೆಚ್ಚಿದಂತೆ ಶಾಸ್ತ್ರವೂ ಬೆಳೆಯುತ್ತದೆ. ಅದ್ಭುತ ಕಲಾವಿದರ ಬ್ರಹ್ಮಸೃಷ್ಟಿಯ ಹಿಂದೆಯೇ ವಿಮರ್ಶಕನ ವಿಶ್ವಾಮಿತ್ರಸೃಷ್ಟಿಯೂ ಹೊರ ಹೊಮ್ಮುತ್ತದೆ.

ವಿಚ್ಛೇದನ–ವಿಭಜನೆಗಳು ಅನೇಕ ವೇಳೆ ಕಲೆಗೆ ಮೃತ್ಯುಗಳಾಗುವುದೂ ಉಂಟು. ಪಾಶ್ಚಾತ್ಯ ಪ್ರಸಿದ್ಧ ಕಥೆಗಾರನೊಬ್ಬನು ತನ್ನ ಸ್ನೇಹಿತನ ಬುದ್ಧಿವಾದದಂತೆ ಕಥೆಯ ನಿಯಮಗಳನ್ನೂ ಅದರ ರೂಪ–ರೇಖಾಚಿತ್ರಗಳನ್ನೂ ಹಲವು ತಿಂಗಳು ಅಭ್ಯಾಸಮಾಡುತ್ತಿದ್ದನಂತೆ. ಅದರಲ್ಲಿ ನಿಷ್ಣಾತನಾದಮೇಲೆ ಅವನ ಕಲಾಶಕ್ತಿಗೆ ಮೂಗುದಾರ ಹಾಕಿದಂತಾಗಿ, ಅದು ಮುಂದುವರಿಯುವುದೇ ಅಸಾಧ್ಯವಾಯಿತಂತೆ! ಕಲೆಯೂ ಶಾಸ್ತ್ರವೂ ಹುಟ್ಟುತ್ತಾ ಅಣ್ಣತಮ್ಮಂದಿರಾದರು. ಬೆಳೆಯುತ್ತಾ ದಾಯಾದಿಗಳಾಗುತ್ತಾರೆಂದು ತೋರುತ್ತದೆ. ಆದ್ದರಿಂದ ಕಥೆಗಾರನಾಗಿ ಹೊರಡುವವನು ನಿಯಮಗಳ ದಾಸಾನುದಾಸನಾಗಿ ಅವುಗಳನ್ನು ಅನುಸರಿಸಬೇಕೆಂದಲ್ಲ. ನಿಯಮಗಳನ್ನು ಅರಿತುಕೊಳ್ಳಬೇಕು, ಮರೆತುಬಿಡಬೇಕು. ಅರಿತಾಗ ಆದ ಸಂಸ್ಕಾರ ಮನಸ್ಸಿನ ಮೂಲೆಯಲ್ಲಿ ಕುಳಿತು ಮಾರ್ಗದರ್ಶಕವಾಗುತ್ತದೆ.

೫

ಈಗ ಅನಂದರ 'ಬೇವು–ಬೆಲ್ಲ' ಸಂಗ್ರಹವನ್ನು ಕುರಿತು ಸ್ವಲ್ಪ ವಿವೇಚಿಸೋಣ. ಈ ಸಂಗ್ರಹದಲ್ಲಿ ಒಟ್ಟು ಎಂಟು ಕಥೆಗೀವೆ. ಅವುಗಳಲ್ಲಿ ಒಂದು 'ಬೇವು–ಬೆಲ್ಲ'. ಈ ಒಂದು ಸಣ್ಣ ಕಥೆಯ ಹೆಸರನ್ನೇ ಇಡೀ ಸಂಗ್ರಹಕ್ಕೂ

ನಾಮಕರಣಮಾಡಿದೆ. ಸಾಮಾನ್ಯವಾಗಿ ಸಂಗ್ರಹದ ಆದಿಯಲ್ಲಿನ ಕಥೆಯಿಂದಲೋ ಅಥವಾ ಅದರಲ್ಲಿನ ಅತ್ಯುತ್ತಮವಾದ ಕಥೆಯಿಂದಲೋ ಆ ಸಂಗ್ರಹದ ಹೆಸರನ್ನು ನಿರ್ಧರಿಸುವುದು ವಾಡಿಕೆ. 'ಬೇವು-ಬೆಲ್ಲ' ಈ ಸಂಗ್ರಹದ ಪ್ರಥಮ ಕಥೆಯೂ ಅಲ್ಲ; ಅತ್ಯುತ್ತಮವಾದುದೆಂದೂ ಹೇಳುವಂತಿಲ್ಲ. ಆದರೂ ಆ ಹೆಸರು ಸಂಗ್ರಹಕ್ಕೆ ಕೇವಲ ಉಚಿತವಾಗಿದೆ. ಸಾಹಿತ್ಯವೆಂಬುದು ಜೀವನದ ಪ್ರತಿಬಿಂಬ. ಅನೇಕ ವೇಳೆ ಸಾಹಿತಿಯಾದವನು ತನ್ನದೇ ಆದ ಒಂದು ಜೀವನ ತತ್ತ್ವವನ್ನೂ, ತನ್ನ ಕೃತಿಯ ಮೂಲಕ, ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ನಿರೂಪಿಸುತ್ತಾನೆ. ಸಾಹಿತ್ಯದ ಒಂದು ಮುಖ್ಯ ಅಂಗವಾದ ಸಣ್ಣ ಕಥೆಯೂ ಇಂತಹ ಒಂದು ಕಾರ್ಯವನ್ನು ಸಾಧಿಸಲು ಪ್ರಬಲವಾದ ಸಾಧನವಾಗಿದೆ. ಬಾಳಿನಲ್ಲಿ ಸುಖವಿದೆ, ಕಷ್ಟವಿದೆ; ಅದೊಂದು ಬೇವು-ಬೆಲ್ಲ. ಅಷ್ಟೇ ಅಲ್ಲ; ಕಷ್ಟದ ಕಹಿಯಲ್ಲಿ ಸುಖದ ಸಿಹಿಯಿದೆ; ಸುಖಾನುಭವದ ಮಾಧುರ್ಯದೊಳಗೆ ಕಷ್ಟದ ಕಟುವಿದೆ. 'ಬೇವು-ಬೆಲ್ಲ'ದ ಕಥೆ ಈ ಸುಖ-ಸಂಕಟಗಳ ಕಣ್ಣುಮುಚ್ಚಾಲೆಯನ್ನು ಮನೋಹರವಾಗಿ ಚಿತ್ರಿಸುತ್ತದೆ. ಯುಗಾದಿಯ ದೊಡ್ಡ ಹಬ್ಬದ ದಿನ ತನಗಾಗಿ ಜೀವದ ಗೆಳೆಯನಾದ ರಂಗಣ್ಣ ದಿನವೆಲ್ಲಾ ಉಪವಾಸಮಾಡಿ ಕಂಗೆಟ್ಟಿದ್ದನೆಂಬ ಸುದ್ದಿಯನ್ನು ಕೇಳಿದಾಗ ಶಿವಸ್ವಾಮಿಗೆ ಸಂತೋಷವಾಯಿತೋ, ಸಂಕಟವಾಯಿತೋ? ಹೊರನೋಟಕ್ಕೆ ಸಂಕಟವೇ ನಿಜ. ಆದರೆ, ಸುಖ-ಸಂತೋಷದಲ್ಲಿ ನಲಿಯುವವನಿಗೆ ಎಂತಹ ಸಂತೋಷವುಂಟಾಗಬಹುದೋ ಅದಕ್ಕಿಂತಲೂ ಅತಿಶಯವಾದ ಅನಿರ್ವಚನೀಯ ಆನಂದ ಆ ಸಂಕಟದ ಗರ್ಭದಲ್ಲಿ ಹೂರಣವಾಗಿ ಹುದುಗಿದೆ. ಹೊರನೋಟಕ್ಕೆ ಉಂಡು ತಿಂದು ನಕ್ಕು ನಲಿದಿರಬಹುದಾದ ಅವನ ಮಡದಿಗೆ ಆ ಸಂತೋಷವೆಲ್ಲಾ ಬರಿಯ ಕನಸು; ಒಳಗಿನ ಹೂರಣವೆಲ್ಲಾ ಅರಕೆಯಿಂದ ಕೂಡಿದ ವ್ಯಾಕುಲ. ಹೀಗೆ ಬಾಳೆಂಬುದು ಸುಲಭವಾಗಿ ಬಿಡಿಸಲಾಗದ ಸುಖ-ಸಂಕಟಗಳ ಹಾಸುಹೊಕ್ಕು. 'ಬೇವು-ಬೆಲ್ಲ'ದ ಕಥೆ ಸಾರುತ್ತಿರುವ ಈ ಸಂದೇಶದಲ್ಲಿ ಸಂಗ್ರಹದ ಎಲ್ಲ ಕಥೆಗಳೂ ಒಂದಲ್ಲ ಒಂದು ವಿಧದಲ್ಲಿ ಭಾಗಿಗಳಾಗಿವೆ. 'ಭವತಿ ಭಿಕ್ಷಾಂ ದೇಹಿ'ಯ ಮಾಧು ಹಳಸಿದ ಅನ್ನವನ್ನು ತಿಂದು, ಕಾಹಿಲೆ ಬಿದ್ದು ಬಾಳಿನ ಬೇನೆಯನ್ನು ಮೆಲ್ಲುತ್ತಿರುವಾಗ, ಆ ಕಟು ಅನುಭವದ ಗರ್ಭದಲ್ಲಿಯೋ ಬಂಗಾರದ ಪದವಿ, ದೊಡ್ಡ ಉದ್ಯೋಗಗಳ ಸವಿಸುಖ ಅಂಕುರಿಸುತ್ತಿತ್ತು. ಬೆಲ್ಲದಂತಹ

ಮಾಧವರಾಯನ ಜೀವನಮಧ್ಯದಲ್ಲಿ ಶಿವುವಿನ ಬೇವುಜೀವನ ಕಾಣಿಸಿಕೊಳ್ಳುತ್ತದೆ. 'ಸರಸಿಯ ಗೊಂಬೆ'ಯ ಕಥೆಗಾರ, ಅವಳ ಬಾಲ್ಯದಲ್ಲಿ ತಾನು ನಿರ್ಮಿಸಿಕೊಳ್ಳುತ್ತಿದ್ದ ಸುಂದರ ಸುಖ ಸ್ವಪ್ನ ಕಡೆಯಲ್ಲಿ ಒಡೆದು ಆಶಾಭಂಗದ ಅಂಧಕಾರವನ್ನು ಅವನ ಪಾಲಿನ ಆಸ್ತಿಯನ್ನಾಗಿ ಮಾಡಿತು. ಹೀಗೆಯೇ ಉಳಿದ ಕಥೆಗಳಲ್ಲಿಯೂ, ಬೇವು–ಬೆಲ್ಲಗಳು ಮಾನವನ ಬಾಳಿನ ಉದ್ದಕ್ಕೂ ಪರಸ್ಪರ ಸ್ಪರ್ಧೆಯಿಂದ—ಒಮ್ಮೆ ಅದು, ಒಮ್ಮೆ ಇದು—ತಮ್ಮ ಆಧಿಪತ್ಯವನ್ನು ಸ್ಥಾಪಿಸಿಕೊಳ್ಳುತ್ತಿರುವಂತೆ ಕಾಣುತ್ತದೆ. ಆದ್ದರಿಂದ ಈ ಸಂಗ್ರಹಕ್ಕೆ ಇಟ್ಟಿರುವ ಹೆಸರು ಉಚಿತವಾಗಿದೆ, ಅರ್ಥಗರ್ಭಿತವಾಗಿದೆ.

'ಬೇವು–ಬೆಲ್ಲ' ಎಂಬ ಹೆಸರಿನ ಅರ್ಥವ್ಯಾಪ್ತಿ ಎಷ್ಟು ವಿಸ್ತಾರವಾಗಿದೆ ಎಂಬುದನ್ನು ನಾವೀಗ ಅರಿತಿದ್ದೇವೆ. ಕಲೆಯ ಬಲೆಯಾದ ಸಣ್ಣ ಕಥೆಯಲ್ಲಿ ಇಂತಹ ಒಂದೊಂದು ಸಣ್ಣ ವಿಚಾರಕ್ಕೂ ಅಗಾಧವಾದ ಪ್ರಾಮುಖ್ಯತೆಯಿದೆ. ಆನಂದರು ಈ ಪ್ರಾಮುಖ್ಯತೆಯನ್ನು ಚೆನ್ನಾಗಿ ಅರಿತವರು. ಒಮ್ಮೆ ಅವರೇ ಹೇಳಿದಂತೆ ಕಥೆಯ ಹೆಸರೆಂಬುದು 'ಮುತ್ತೈದೆಯ ಹಣೆಯ ಮೇಲಿನ ಕುಂಕುಮ' ವಿದ್ದಂತೆ. ಅದು ಬಹು ದೊಡ್ಡದಾದರೆ ಮಾರಮ್ಮನ ಪೂಜಾರಿಯಂತೆ ಕಾಣುತ್ತಾಳೆ, ಹೆಣ್ಣು; ತೀರ ಸೂಕ್ಷ್ಮವಾದರೆ ಅದು ಗರತಿತನಕ್ಕೆ ಒಪ್ಪದು; ಅದು ಹಾಳತವಾಗಿರಬೇಕು. ಸೌಂದರ್ಯಕ್ಕೂ ಸಾಧನವಾಗಬೇಕು; ಐದೆತನದ ಲಕ್ಷಣಕ್ಕೂ ಹೊಂದಿಕೊಳ್ಳಬೇಕು. ಅದನ್ನು ನೋಡುತ್ತಲೇ ಹೆಣ್ಣಿನ ಸ್ವರೂಪ ಗೊತ್ತಾದೀತು. ಕಥೆಯ ಹೆಸರೂ ಅಷ್ಟೆ. ಆಡಕವಾಗಿರುವುದರ ಜೊತೆಗೆ ಕಥೆಯ ಸ್ವರೂಪವನ್ನು ಸೂಕ್ಷ್ಮವಾಗಿ ಸೂಚಿಸುವಂತಿರಬೇಕು; ಇಡೀ ಕಥೆಗೇ ಅನ್ವಯಿಸುವಷ್ಟು ವ್ಯಾಪಕವಾಗಿರಬೇಕು. ಆನಂದರ ಕಥೆಗಳಲ್ಲಿನ ಒಂದೊಂದು ಹೆಸರೂ ಈ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಿವೆ. 'ಭವತಿ ಭಿಕ್ಷಾಂ ದೇಹಿ'ಯಿಂದ ಆರಂಭವಾದ ಮಾಧವರಾಯನ ಜೀವನ ಶಿವುವಿನ 'ಭವತಿ ಭಿಕ್ಷಾಂ ದೇಹಿ'ಯನ್ನು ಸಲ್ಲಿಸುವುದರೊಡನೆ ಕೊನೆಗೊಳ್ಳುತ್ತದೆ. 'ಭವತಿ ಭಿಕ್ಷಾಂ ದೇಹಿ' ಎಂಬ ಧ್ವನಿ ಕಥೆಯ ನಾಳನಾಳಗಳಲ್ಲಿಯೂ ಹರಿದು ವ್ಯಾಪಿಸಿದೆ. 'ಸರಸಿಯ ಗೊಂಬೆ'ಯೂ ಅಷ್ಟೆ. ಬೆಣ್ಣೆಕೃಷ್ಣನ ಅರಗಿನ ವಿಗ್ರಹ 'ಬಾಲಸುಂದರಿ' ಸರಸಿಯ ಅವ್ಯಕ್ತ ಮಾತೃಪದವಿಯನ್ನು ಸೂಚಿಸಿದರೆ ಪುಟ್ಟ 'ಪುಟ್ಟು' ಅವಳ ಬಾಲ್ಯದ ಬೊಂಬೆಯ ಪ್ರತೀಕವಾಗಿದ್ದಾನೆ. ಅಂದು

ಬಣ್ಣದ ಗೊಂಬೆ; ಇಂದು ಜೀವಂತ ಗೊಂಬೆ. ಸರಸಿಯ ಆಯಾ ಮಟ್ಟದ ದೃಷ್ಟಿಯಲ್ಲಿ, ಎರಡಕ್ಕೂ ವ್ಯತ್ಯಾಸವೇನೂ ಇಲ್ಲ. ಕುರುಡಿಯಾಗಿಹೋಗಿದ್ದ ಮೀನಾಕ್ಷಿಗೆ ಕಣ್ಣು ಬರುವುದೆಂಬುದು ಬಹು 'ದೂರದ ಆಸೆ.' ಅದು ಮೃಗ ಮರೀಚಿಕೆಯಂತೆ ದೂರ, ಸುದೂರವಾಗಿ ಕಡೆಗೊಮ್ಮೆ ಕೈಗೂಡಿತು. ಕಥೆಯ ಉದ್ದಕ್ಕೂ ಆ ಆಸೆಯೇ ತುಂಬಿಕೊಂಡಿದೆ. 'ಮನೆಗೆ ಹೋದರು', 'ಹೆಂಡತಿಯ ಕಾಗದ', 'ಅಶ್ವಾರೋಹಿ', 'ಜೋಯಿಸರ ಚಾಡಿ'—ಎಲ್ಲೆ ಲ್ಲಿಯೂ ಇದೇ ಕೌಶಲ ಕಾಣಬರುತ್ತದೆ. ಆತುರಪಡದೆ ದೀರ್ಘವಾಗಿ ಆಲೋ ಚಿಸಿ, ಶ್ರದ್ಧೆಯಿಂದ ಕಾರ್ಯತತ್ಪರನಾಗುವುದು ಸಣ್ಣ ಕಥೆಗಾರನ ಆದ್ಯ ಕರ್ತವ್ಯ. ಆನಂದರು ಅಂತಹ ಶ್ರದ್ಧೆಯಿಂದ ಕಾರ್ಯರಂಗಕ್ಕಿಳಿಯುವ ರೆಂಬುದು ಅವರು ಕೊಟ್ಟಿರುವ ಶಿರೋನಾಮೆಗಳಿಂದಲೇ ವ್ಯಕ್ತವಾಗುತ್ತದೆ.

'ಜೇನು-ಬೆಲ್ಲ' ಸಂಗ್ರಹದ ಎಂಟು ಕಥೆಗಳಲ್ಲಿ 'ಹೆಂಡತಿಯ ಕಾಗದ', 'ಜೋಯಿಸರ ಚಾಡಿ'—ಈ ಎರಡನ್ನು ಬಿಟ್ಟರೆ ಉಳಿದ ಕಥೆಗಳೆಲ್ಲಾ, ಒಂದು ಗಂಭೀರವಾದ, ಅನೇಕವೇಳೆ ಗಭೀರವಾದ ವಾತಾವರಣದಲ್ಲಿ ನಡೆಯತಕ್ಕವು. ಮೇಲಿನ ಎರಡು ಕಥೆಗಳಲ್ಲಿ ಮಾತ್ರ ಹಾಸ್ಯರಸ ಸುಳುಸುಳು ನಿನಾದದಿಂದ ಹರಿಯುತ್ತಿದೆ. ಆನಂದರ ಹಾಸ್ಯವೆಂದರೆ ಮೂವತ್ತೆರಡು ಹಲ್ಲುಗಳೂ ಕಾಣು ವಂತೆ ಗಹಗಹಿಸಿ ನಗುವ ಹಾಸ್ಯವಲ್ಲ; ತುಟಿಗಳ ಮೇಲೆ ಮಾತ್ರ ಮಿನುಗಿ ಮಾಯವಾಗುವ ಮುಗುಳ್ನಗೆಯನ್ನು ಪ್ರಚೋದಿಸಬಲ್ಲ ಸುಸಂಸ್ಕೃತ ಹಾಸ್ಯ. ಅವರ ಕಥೆಗಳಲ್ಲಿ ಮತಿಗೌರವಕ್ಕೆ ಲೋಪಬರುವಂತಹ ಸಂದರ್ಭ ಸನ್ನಿವೇಶ ಗಳೇ ಕಡಿಮೆ. ಆದ್ದರಿಂದ ಕೇವಲ ಕೆಳಮಟ್ಟದ ಕೀಳುಹಾಸ್ಯಕ್ಕೆ ಅವುಗಳಲ್ಲಿ ಎಡೆಯಿಲ್ಲ. 'ಹೆಂಡತಿಯ ಕಾಗದ'ದ ಕೊನೆಯಲ್ಲಿ ಕಾಣಬರುವ ಬರೀ ಹಾಳೆಗಳು, ಆ ಹಾಳೆಗಳ ಕೊನೆಯಲ್ಲಿನ ವಾಣಿಯ ವ್ಯಂಗ್ಯ ಮೂದಲಿಕೆಯ ಎರಡು ಸಾಲುಗಳು, ಇದರಿಂದ ರಾಮನಾಥನ ಮನಸ್ಸಿಗೆ ಆಗಬಹುದಾದ ಕಸಿವಿಸಿ—ಇವುಗಳನ್ನು ಚಿತ್ರಿಸಿಕೊಂಡಾಗ, ನಗೆ ತುಟಿಯನ್ನು ದಾಟಿ ಹೊರ ನುಗ್ಗಬಹುದಾದರೂ ಅದು ನಿರ್ದುಷ್ಟವಾದ ನಗೆ. ಇದರಂತೆಯೇ 'ಜೋಯಿಸರ ಚಾಡಿ'ಯಲ್ಲಿ, ಹಣವೆತ್ತುವುದಕ್ಕೆಂದು ಅಗೆದಾಗ ದುಬ್ಬುಗುಂಡು ಸಿಕ್ಕು, ಅದಕ್ಕೆ ದೇವಿಯ ಪಟ್ಟ ದೊರೆತು, ಆ ಗುಂಡಿಗೆ ಷೋಡಶೋಪಚಾರಗಳು ನಡೆಯುತ್ತಾ ಹೋಗುವುದೂ ಹಾಸ್ಯರಸಪ್ರಚೋದಕವಾದ ಸನ್ನಿವೇಶವೇ.

'ಸರಸಿಯ ಗೊಂಬೆ'ಯಲ್ಲಿ ಅವಳು ಗೊಂಬೆಯನ್ನು ಮಗುವೆಂದು ಭಾವಿಸಿ ಪ್ರದರ್ಶಿಸುವ ನಡವಳಿಕೆಗಳೂ, ಕಿಲಾಡಿ ಕಥೆಗಾರ ಅವಳ ಮಗುವಿನ ತಂದೆ ಯಾರೆಂದು ಪ್ರಶ್ನಿಸಿ ಉತ್ತರ ಪಡೆಯುವುದೂ ಹಾಸ್ಯಮಯವಾದ ಸನ್ನಿವೇಶಗಳೇ. 'ಸರಸಿಯ ಗೊಂಬೆ'ಯ ಪೂರ್ವಾರ್ಧವೆಲ್ಲವೂ, ತಿಳಿಗಾಳಿಯ ಮೇಲೆ ವೈಹಾಳಿ ಹೋದಂತೆ, ಹಾಸ್ಯರಸದ ಕಿರುದೆರೆಗಳ ಮೇಲೆ ನಮ್ಮನ್ನು ತೇಲಿಸಿಕೊಂಡು ಹೋಗುತ್ತದೆ. ಹೀಗೆ ಹಾಸ್ಯಮಯವಾದ ಸನ್ನಿವೇಶಗಳು ಅವರ ಕಥೆಗಳಲ್ಲಿ ಅಲ್ಲಿ ಇಲ್ಲಿ ಕಾಣಿಸಿಕೊಳ್ಳಬಹುದಾದರೂ, ಅದು ಹೆಚ್ಚಾಗಿ ಪ್ರದರ್ಶಿತವಾಗಿರುವುದು ನುಡಿಜೋಡಣೆಯಲ್ಲಿನ ಒಂದು ಚಮತ್ಕಾರದಿಂದ. ಕುರುಡಿಯಾದ ಮೀನಾಕ್ಷಿ ಗಂಡನನ್ನು ಕುರಿತು 'ನಾನೇನೋ ನಿಮ್ಮ ಕೈಹಿಡಿದುದು ಸರಿ; ನೀವೂ ನನ್ನ ಕೈಹಿಡಿಯುವ ಹಾಗಾಯಿತಲ್ಲಾ!' ಎಂದು ಹಾಸ್ಯಮಾಡುತ್ತಾಳೆ. 'ನಿನ್ನನ್ನು ಕೋತಿ ತಿಮ್ಮಣ್ಣನಿಗೆ ಕೊಟ್ಟು ಮದುವೆ ಮಾಡುತ್ತಾರೆ' ಎಂದಾಗ, ಸರಸಿ 'ಚಂದ್ರನಂತಹ ಮುಖವನ್ನು ಸೌತೇಕಾಯಿಯ ಹಾಗೆ ಮಾಡಿಕೊಂಡ'ಳಂತೆ! ಮಲ್ಲಿಗೆಹಳ್ಳಿ ಕೃಷ್ಣಜೋಯಿಸರು ಭೂತಪಿಶಾಚಿಗಳನ್ನೆಲ್ಲಾ ತೆಂಗಿನಕಾಯಿಗಳಲ್ಲಿ ಸೆರೆಹಿಡಿದು ತಂದು, ಮಲ್ಲಿಗೆಹಳ್ಳಿ ಕೆರೆ ಏರಿಯ ಮೇಲಿನ ಹುಣಿಸೇ ಮರದಲ್ಲಿ ದಿಗ್ಬಂಧನ ಮಾಡುತ್ತಿದ್ದರು. 'ಕೆಲವು ಕಾಲದಲ್ಲೇ, ಭೂತಪಿಶಾಚಿಗಳಿಗೆ ಸೆಂಟ್ರಲ್ ಜೈಲಿನಂತಿದ್ದ ಆ ಮುದಿ ಹುಣಿಸೇ ಮರದಲ್ಲಿ, ಎಲೆಗಳಿಗಿಂತ, ಜೋಯಿಸರು ತಂದು ಸೇರಿಸಿದ ಕೈದಿಗಳ ಸಂಖ್ಯೆಯೇ ಹೆಚ್ಚಾಯಿತು.' ಆ ಜೋಯಿಸರು 'ಒಳ್ಳೇ ಸ್ಥೂಲಕಾಯದ ಆಜಾನುಬಾಹು ಆಸಾಮಿ. ಕಪ್ಪು ಬಣ್ಣಕ್ಕೆ ಮಾತೃಭೂಮಿ.' 'ಕುಡುಕನು ಹೆಂಡಕ್ಕೆ ದಾಸನಾದಂತೆ, ಭಂಗಿಕೋರನು ಭಂಗಿಸೊಪ್ಪಿಗೆ ಬಲಿಯಾದಂತೆ, ಅಫೀಮು ಸೇವಕನು ಅಫೀಮಿಗೆ ಸೋತಂತೆ, ಕೃಷ್ಣಜೋಯಿಸರು ಧನಪಿಶಾಚಿಗೆ ದಾಸರಾದರು, ಬಲಿಯಾದರು, ಸೋತರು!' 'ಮಸಿಯಲ್ಲಿ ಇದ್ದಲಿ ಮುಳುಗಿದ ಹಾಗೆ, ಕಷ್ಟದಲ್ಲಿ ಜೋಯಿಸರು ಮಾಯವಾದರು.' ಕಥೆಯ ನಡುವೆ ಬಂದಿರುವ ಕಥೆಗಾರನ ಮಾತು 'ಮಾರಿಗೆ ಹಾಲಿನಲ್ಲಿ ನೀರು ಬೆರೆತ ಹಾಗೆ.' ಈ ಪಟ್ಟಿಯನ್ನು ಬೇಕಾದಷ್ಟು ಬೆಳಸಬಹುದಾದರೂ ಇಷ್ಟಿನ ಹಾಸ್ಯದ ಸ್ವರೂಪವನ್ನು ದಿಗ್ದರ್ಶನ ಮಾಡಿಸಲು ಇಷ್ಟು ಸಾಕು. ಅನಂತರ 'ಜೋಯಿಸರ ಚೌಡಿ' ಅವರ ಹಾಸ್ಯ ನಿರೂಪಣಾಶಕ್ತಿಗೆ ಅತ್ಯುತ್ತಮವಾದ ಉದಾಹರಣೆ.

ಹಾಸ್ಯರಸಕ್ಕಿಂತಲೂ ಶೃಂಗಾರರಸ ಆನಂದರ ಕಥೆಗಳಲ್ಲಿ ಸಿದ್ಧಿಗಂಡಿದೆ. ಮನುಷ್ಯನ ಪ್ರವೃತ್ತಿಗಳಲ್ಲಿ ಹಸಿವನ್ನು ಬಿಟ್ಟರೆ ಎರಡನೆಯದೇ ಪ್ರೇಮ ವ್ಯಾಪಾರ. ಆದ್ದರಿಂದ ಜೀವನದಲ್ಲಿಯಾಗಲಿ, ಜೀವನದ ಪ್ರತಿಬಿಂಬವಾದ ಸಾಹಿತ್ಯದಲ್ಲಿಯಾಗಲಿ ಇದಕ್ಕೆ ಬಹು ಪ್ರಾಮುಖ್ಯತೆಯಿದೆ. ಆದರೆ ಒಂದು ಗಾಂಭೀರ್ಯದ ಎಲ್ಲೆಯೊಳಗಿದ್ದರೆ ಮಾತ್ರ ಅದಕ್ಕೆ ಪುರಸ್ಕಾರ ದೊರೆತೀತು. ಆನಂದರು ಇದನ್ನು ಚೆನ್ನಾಗಿ ಅರಿತಿದ್ದಾರೆ. ಮಿತಿ ಮತಿಗೌರವಗಳೇ ಉಚ್ಛ್ವಾಸ ನಿಶ್ವಾಸಗಳಾಗಿರುವ ಅವರ ಕಥೆಗಳಲ್ಲಿ ಒಂದು ಎಲ್ಲೆಯನ್ನು ಮೀರಿದ ಉಲ್ಲಾಸ ತುಂಬಿ ತುಳುಕುತ್ತದೆ. ‘ಬೇವು-ಬೆಲ್ಲ’ದ ಶಿವಸ್ವಾಮಿ ಹೆಂಡತಿಯ ‘ಕಾಗದ ಓದಿದ—ಕಣ್ಣಿಗೆ ಒತ್ತಿಕೊಂಡ; ಪುನಃ ಓದಿದ—ತುಟಿಗೆ ಒತ್ತಿಕೊಂಡ.’ ‘ಹೆಂಡತಿಯ ಕಾಗದ’ದ ರಾಮನಾಥ ವಾಣಿ ಕಳಿಸಿದ್ದ ಬರೀ ಹಾಳೆಗಳ ಕಾಗದವನ್ನು ಕಂಡಾಗ ಅಂದಿನ ವಿಘ್ನಪರಂಪರೆಗಳನ್ನೆಲ್ಲಾ ನೆನೆದು ಎಷ್ಟು ಮನನೊಂದಿರಬೇಕು? ಆದರೂ ಕ್ಷಣಮಾತ್ರದಲ್ಲಿ ಅವನ ಕೋಪ ಹಾರಿ ಹೋಯಿತು. ಅವನು ನಕ್ಕ. ತನ್ನ ಕೋಪವನ್ನು ಕಲ್ಪಿಸಿಕೊಂಡು ವಾಣಿ ನಗುವ ಚಿತ್ರ ಅವನ ಕಣ್ಣಿಗೆ ಕಟ್ಟಿತು. ‘ನಿಮ್ಮ, ವಾಣಿ’ ಎಂದಿದ್ದ ಸ್ಥಳವನ್ನು ಮೆಲ್ಲಗೆ ತನ್ನ ತುಟಿಗೆ ಒತ್ತಿಕೊಂಡ. ‘ಬೇವಿನ ಕಾಯನ್ನು ತಿನ್ನುತ್ತಾ ಮುಖದಲ್ಲಿ ಮಾವಿನ ಹಣ್ಣಿನ ಸವಿಯ ಭಾವವನ್ನು ತೋರುವುದೀಗ ರಸಿಕತೆ.’ ರಾಮನಾಥ ಅಂಥ ರಸಿಕ. ಅವನ ರಸಿಕತೆಯ ಸ್ವರೂಪ ಕಥೆಯ ಆರಂಭದಲ್ಲೇ ಕಂಡುಬರುತ್ತದೆ. ಹುಸಿ ಕೋಪದಲ್ಲಿದ್ದ ಹೆಂಡತಿಯನ್ನು ಅವನು ವರ್ಣಿಸ ಹೊರಡಲು, ಅವಳು ಅವನನ್ನು ಛೀಗಟ್ಟಿ ‘ನನ್ನನ್ನು ಮುಟ್ಟಬೇಡಿ’ ಎಂದಳು. ತನ್ನ ಎದೆಯ ಮೇಲೇ ಒರಗಿದ್ದವಳು ‘ಮುಟ್ಟಬೇಡಿ’ ಎಂದರೇನರ್ಥ?—ಎಂದು ರಾಮನಾಥನ ಸವಾಲು. ಅವಳು ಒಂದು ಬಿಮ್ಮಾನದಿಂದ ದೇಹಲತೆಯನ್ನು ಬಳುಕಿಸುತ್ತ ‘ನಾನು ಹೇಳಿದ್ದೇನು?—ನೀವು-ನನ್ನ-ಮುಟ್ಬೇಡಿ—ಅಂತ’ ಎಂದಳು. ಅವಳ ವಾಕ್ಚಾತುರ್ಯಕ್ಕೆ ಮೆಚ್ಚಿದ ರಾಮನಾಥ ಅವಳಿಗೆ ಒಂದು ಮೆಚ್ಚು ಕೊಡಲು ನಿಶ್ಚಯಿಸಿದ. ಆ ಮೆಚ್ಚು ಏನೆಂಬುದು ಸತಿಪತಿಗಳಿಬ್ಬರಿಗೂ ಗೊತ್ತು. ಆದರೂ ಬಾಯಿಬಿಟ್ಟು ಹೇಳುವುದಿಲ್ಲ. ರಾಮನಾಥ ಮೆಲ್ಲಗೆ ಅವಳ ಗಲ್ಲವನ್ನು ಎತ್ತಿದ. ವಾಣಿ ನಗುತ್ತ ಬಳುಕುತ್ತ ‘ಯಾಕೆ?’ ಅಂದಳು. ‘ಇಷ್ಟು ಜಾಣತನದಿಂದ ಮಾತಾಡಿದೆ! ಸ್ವಲ್ಪ ಬಹುಮಾನ ಕೊಡ

ದಿಪ್ರೆ ಆಗುತ್ತದೆಯೆ?' 'ಎಲ್ಲಾ ಆಗುತ್ತೆ.' 'ಛೆ, ಎಲ್ಲಾದರೂ ಉಂಟೆ?' 'ಅಬ್ಬಾ, ಎಷ್ಟು ಆಸೆಯೊ'........ರಾಮನಾಥ 'ವಾಣಿಗೆ ತನ್ನ ಆಸೆಯ ಆಳವನ್ನು ನಿಶ್ಶಬ್ದವಾಗಿಯೇ ತೋರಿಸಿದ.' ಇಂತಹ ಧ್ವನಿಪೂರ್ಣವಾದ ಒಂದು ಶಬ್ದಚಿತ್ರವನ್ನೇ 'ದೂರದ ಆಸೆ'ಯ ಕೊನೆಯಲ್ಲಿಯೂ ಕಾಣುತ್ತೇವೆ. ಕಳೆದುಹೋಗಿದ್ದ ಕಣ್‌ದೃಷ್ಟಿಯನ್ನು ಪುನಃ ಪಡೆದ ಮೀನಾಕ್ಷಿ ರಾಮಚಂದ್ರನನ್ನು ಕಣ್ತುಂಬ ನೋಡುತ್ತಿದ್ದಳು. ಗಂಡನನ್ನು ಕುರಿತು 'ನಿಮ್ಮನ್ನು ಹಿಡಿದು, ನನ್ನ ಹೃದಯದಲ್ಲಿ ತುಳುಕೋ ಹಾಗೆ ತುಂಬಿಕೊಳ್ಳುತ್ತಾ ಇದ್ದೇನೆ' ಎಂದಳು. 'ಊಹುಂ, ಆಮೇಲೆ?'

'ಮನಸ್ಸು ಸೊಲುತ್ತೆಯೆ—ನೋಡ್ತಾ ಇದ್ದೀನಿ.'

'ಇಷ್ಟಕ್ಕೇ ಮನಸ್ಸು ಸೋಲಲ್ಲ, ಮೀನಾ.'

'ಮತ್ತೆ ಯಾವುದಕ್ಕೆ ಸೋತೀತು....ಹೇಳಿ.'

'ಎಲ್ಲಿ, ಹೀಗೆ ತಿರುಗು........ಇದಕ್ಕೆ!'

ಎರಡು ಕಡೆಯಲ್ಲಿಯೂ ಗಂಡ ಹೆಂಡತಿಗೆ ಮುತ್ತು ಕೊಟ್ಟ. ಅದನ್ನು ಬಾಯಿಬಿಟ್ಟು ಹೇಳುವುದು ಅರಸಿಕತೆ. ಮುತ್ತು ಎಂಬ ಮಾತೇ ಬಳಸಬಾರದೆಂದಲ್ಲ. ಸರಸಿಗೆ ಮುತ್ತಿನ ಮಳೆಯನ್ನೇ ಸುರಿಸಿದ್ದಾರೆ ಕತೆಗಾರರು. ಅವಳು ಚಿಕ್ಕ ಹುಡುಗಿ, ತಾಯಿ ಮಗುವನ್ನು ಎಲ್ಲರೆದುರಿಗೂ ಮುತ್ತಿಟ್ಟುಕೊಳ್ಳುತ್ತಾಳೆ. ಅದರಲ್ಲಿ ಎಗ್ಗಿಲ್ಲ. ಅದನ್ನು ವರ್ಣಿಸುವುದರಲ್ಲಿಯೂ ಸಂಕೋಚ ಅಗತ್ಯವಿಲ್ಲ. ನಿಜ ಜೀವನದಲ್ಲಿ ಹೇಗೋ ಹಾಗೆ, ಸಾಹಿತ್ಯದಲ್ಲಿಯೂ ಪ್ರೇಮವ್ಯಾಪಾರಕ್ಕೆ ಒಂದು ಆಚ್ಛಾದನೆ ಹಾಕುವುದು ಉತ್ತಮ ಕಲೆಯ ಗುಟ್ಟು. ಇದನ್ನು ಆನಂದರು ಅರಿತಿರುವರೆಂಬುದು ಅವರ ಕಥೆಗಳಿಂದ ವ್ಯಕ್ತವಾಗುತ್ತದೆ.

ಹತ್ತಾರು, ನೂರಾರು ಸಮಸ್ಯೆಗಳು ಇಂದು ನಮ್ಮ ಕಣ್ಣ ಮುಂದೆ ಪ್ರಶ್ನಾರ್ಥಕ ಚಿಹ್ನೆಯಾಗಿ ನಿಂತು ವಿಕಟಾಟ್ಟಹಾಸ ಮಾಡುತ್ತಿವೆ. ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಜನರನ್ನು ಇದಿರಿಸುತ್ತಿರುವ ಈ ಸಮಸ್ಯೆಗಳನ್ನು ಸಾಹಿತಿಯಾದವನು—ಸಾಹಿತ್ಯದ ಒಂದು ಮುಖ್ಯವಾದ ಸಣ್ಣ ಕಥೆಗಳನ್ನು ಸೃಷ್ಟಿಸುವವನು—ತನ್ನ ಕಾವ್ಯವಸ್ತುವಾಗಿ ಸ್ವೀಕರಿಸಬೇಡವೆ? ಕಾಳಸಂತೆ, ರೇಷನ್ ಗೋಳು, ಬಂಡವಾಳಗಾರ–ಕೂಲಿಗಾರರ ಹೋರಾಟ, ಕ್ಷಾಮ, ಯುದ್ಧ ಮತ್ತು ಅದರ ಫಲವಾದ ನೈತಿಕಪತನ, ಕೋಮುವಾರು

ವ್ಯಾಧಿ, ಅಧಿಕಾರದ ದುರುಪಯೋಗ, ವೇಶ್ಯಾಪದ್ಧತಿ, ಸಮಾಜವಾದ—ಎಷ್ಟು ಸಮಸ್ಯೆಗಳಿಲ್ಲ? ನಿಜ. ಈ ಸಮಸ್ಯೆಗಳನ್ನು ಕುರಿತು ಬರೆಯಬೇಕಾದುದು ಅಗತ್ಯ. ಇವು ಕಥೆಗೆ ವೈವಿಧ್ಯತೆಯನ್ನು ದೊರಕಿಸಲು ಸಹಾಯಕವಾಗುತ್ತವೆ. ಆದರೆ ಈ ಸಮಸ್ಯೆಗಳೆಲ್ಲವೂ ತಾತ್ಕಾಲಿಕವಾದುವೆಂಬುದನ್ನು ನಾವು ಮರೆಯಬಾರದು. ಈ ಪ್ರಚಲಿತ ಸಮಸ್ಯೆಗಳೆಲ್ಲವೂ ಮೂಲಭೂತವಾದ, ಮಾನವಸಹಜವಾದ ಕೆಲವು ಸಮಸ್ಯೆಗಳ ಬಹಿರಂಗ ಮಾತ್ರ. ಇವುಗಳನ್ನು ಕಾವ್ಯವಸ್ತುವಾಗಿ ಸ್ವೀಕರಿಸಿದಾಗ, ಅವುಗಳ ಅಂತರಂಗದಲ್ಲಿರುವ ಮೂಲ ಸಮಸ್ಯೆಗಳನ್ನು ಮುಟ್ಟದಿದ್ದರೆ ಕಾವ್ಯ ಅಲ್ಪಾಯುವಾಗುತ್ತದೆ. ಹಸಿವು, ದಾರಿದ್ರ್ಯ, ಕಾಮ, ಸೌಖ್ಯ, ಆಸೆ, ಮಾತ್ಸರ್ಯ, ಕ್ರೋಧ ಮೊದಲಾದ ಮಾನವಸಹಜವಾದ ಮೂಲಗುಣಗಳಿಂದ ಉದ್ಭವಿಸುವ ಸಮಸ್ಯೆಗಳನ್ನು ತಮ್ಮ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ ಆನಂದರು. ನಮ್ಮ ಸಮಾಜದಲ್ಲಿ ಈ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕೂಡ ರೂಢಮೂಲವಾಗಿ ನಿಂತಿರುವ ಬಸವಿ ಬಿಡುವ ಪದ್ಧತಿಯನ್ನು 'ನಾನು ಕೊಂದ ಹುಡುಗಿ' ಎಂಬ ಕಥೆಯಲ್ಲಿ ಎಷ್ಟು ಮನೋಜ್ಞವಾಗಿ ಚಿತ್ರಿಸಿದ್ದಾರೆ! ಕರುಣರಸದಿಂದ ತುಂಬಿ ತುಳುಕುತ್ತಿರುವ ಆ ವಿಸ್ತೃತವಾದ [illegible] ಕಥೆಯಿಂದ ಈ ಸಂಗ್ರಹ ವಂಚಿತವಾಗಿದ್ದರೂ, ಇಲ್ಲಿರುವ ಕಥೆಗಳಲ್ಲಿಯೇ ನಮ್ಮ ಸಮಾಜದ ಅನೇಕ ಸಮಸ್ಯೆಗಳ ವಿವರಣೆ ದೊರೆಯುತ್ತದೆ. 'ಭವತಿ ಭಿಕ್ಷಾಂ ದೇಹಿ'ಯಲ್ಲಿನ ಶಿವು ಯಾವ ತನ್ನ ತಪ್ಪಿಗಾಗಿ ಆ ಎಳೆಯ ವಯಸ್ಸಿನಲ್ಲಿ ಭಿಕ್ಷಾನ್ನದ ಭಿಕಾರಿಯಾಗಬೇಕು? ಸಮಾಜದ ಮೇಲೆ ಗದಾಪ್ರಹಾರಮಾಡಲು ಅವನಂತಹ ಒಬ್ಬನು ಸಾಕು. 'ಮನೆಗೆ ಹೋದರು' ಕಥೆಯಲ್ಲಿ ಬರುವ ಭಿಕ್ಷುಕರಿಗೆ ಆ ಗತಿಯೇಕೆ ಬರಬೇಕು? 'ಜೋಯಿಸರ ಜೌಡಿ'ಯಲ್ಲಿನ ಕೃಷ್ಣಜೋಯಿಸ, ಸಮಾಜಕ್ಕೆ ಹತ್ತಿದ ಗೆದ್ದಲು ಹುಳುವಲ್ಲವೆ? ಆದರೂ ಅವನನ್ನು ನಿರೂಪಿಸುವ ವಿಧಾನದಲ್ಲಿ ಮನಸ್ಸಿನ ಸಮತೆಗೆ ಲೋಪ ಬಂದಿಲ್ಲ. ದೀನ–ದಲಿತರಲ್ಲಿ ಅಪಾರವಾದ ಅನುಕಂಪವಿದೆ, ನಮ್ಮ ಕಥೆಗಾರರಿಗೆ. ಆದರೆ ಅದಕ್ಕೆ ಕಾರಣರಾದವರ ಮೇಲೆ ಕಿಡಿಗಾರುವ ಕ್ರೌರ್ಯವನ್ನು ಮಾತ್ರ ವಹಿಸುವುದಿಲ್ಲ. ಹತ್ತು ಜನ ನಿರ್ಗತಿಕರನ್ನು ಕಂಡೊಡನೆಯೇ ಸಾಹುಕಾರರ ವಂಶವನ್ನೆಲ್ಲಾ ಸವರಿ ಅವರ ರಕ್ತದಿಂದ [illegible] [illegible] ತುಂಬಬೇಕೆಂದು ಕೊಡಲಿಯನ್ನು ಝಳಪಿಸುವುದು

ಸದಸದ್ವಿವೇಕವೆಂದು ಹೇಳುವುದು ಹೇಗೆ? ಆನಂದರು ಕಲೆಗೆ ಕೊಲೆಯಾಗುವಂತೆ ವಾಚ್ಯವಾಗಿ ಎಲ್ಲಿಯೂ ನೀತಿಬೋಧೆಗೆ ಹೊರಟಿಲ್ಲ. ಅವರ ಕಥೆಗಳನ್ನು ಓದಿದಮೇಲೆ ಒಂದೊಂದರಲ್ಲಿಯೂ ಅವರ ಔದಾರ್ಯ ಕಂಡುಬರುತ್ತದೆ. ಬಿದ್ದವರಲ್ಲಿ ಅನುಕಂಪವಿದೆ; ಎದ್ದವರಲ್ಲಿ ಮೆಚ್ಚಿಗೆಯಿದೆ. ಲೋಪದೋಷಗಳನ್ನು ಆರೋಪಿಸಿ ತೆಗಳುವುದಕ್ಕಿಂತಲೂ ಸದ್ಗುಣಗಳನ್ನು ಅಳವಡಿಸಿ ಮೆಚ್ಚುವುದರಲ್ಲಿ ಅವರಿಗೆ ಆಸಕ್ತಿ ಹೆಚ್ಚು. ದೊಡ್ಡ ಅಧಿಕಾರಿಯಾಗಿ ಸುಖಸಂತೋಷಗಳಲ್ಲಿ ನಲಿಯುತ್ತಿದ್ದರೂ ಮಾಧು ತನ್ನ ಬಾಲ್ಯದ ಕಷ್ಟಕಾರ್ಪಣ್ಯಗಳನ್ನು ಮರೆಯುವುದಿಲ್ಲ. ದಿಕ್ಕಿಲ್ಲದ ಶಿವೂಗೆ ಅವನೂ ಅವನ ಮಡದಿಯೂ ಹುಡುಗನ ‘ಗೋಪು, ಅಪ್ಪ, ಅಮ್ಮ ಎಲ್ಲಾ’ ಆಗುತ್ತಾರೆ. ‘ಮನೆಗೆ ಹೋದರು’ ಕಥೆಯಲ್ಲಿನ ಭಿಕ್ಷುಕಳನ್ನು ಕಂಡು ಪೋಲೀಸಿನವನೂ ಮನಮರುಗುತ್ತಾನೆ! ಅವಳನ್ನು ಸಮಾಧಾನಪಡಿಸುತ್ತಾನೆ; ಇತರರು ಪಾಷಾಣಹೃದಯವನ್ನು ಕಾಣುವ ಕಡೆ ಆನಂದರ ಕಣ್ಣಿಗೆ ಮಾನವೀಯತೆ ಗೋಚರವಾಗುತ್ತದೆ. ‘ಸರಸಿಯ ಗೊಂಬೆ’ಯಲ್ಲಿ ಕಥೆ ಹೇಳುತ್ತಿರುವ ಕಥಾನಾಯಕ (?) ತಾನು ಕಟ್ಟಿಕೊಂಡಿದ್ದ ಗಂಧರ್ವನಗರಿಯೆಲ್ಲವೂ ಕುಸಿದುಬಿದ್ದಾಗ ಸಹ, ಮನಸ್ಸಿನಲ್ಲಿ ಅಸಹ್ಯ ವೇದನೆಯಿದ್ದರೂ, ಸರಸಿಗೆ ಕೇಡನ್ನು ಬಯಸುವುದಿಲ್ಲ. ಅತ್ಯಾಧುನಿಕತೆಯ ಹೆಸರಿನಲ್ಲಿ ಕಾಣಬರುವ ಉಚ್ಛೃಂಖಲ ವೃತ್ತಿಯ ಕಥೆಗಾರನಾಗಿದ್ದರೆ, ಈ ಸಂದರ್ಭದಲ್ಲಿ ಕೊಲೆ ಆತ್ಮಹತ್ಯಗಳೊಡನೆ ಕಥೆಯನ್ನು ಕೊನೆಗಾಣಿಸುತ್ತಿದ್ದನೆಂದು ತೋರುತ್ತದೆ. ಒಟ್ಟಿನಲ್ಲಿ ಉದ್ಧಾರದ ಹೆದ್ದಾರಿ ಕರುಣೆ–ಔದಾರ್ಯಗಳೇ ಹೊರತು ವಿಪ್ಲವವಲ್ಲ, ಎಂಬುದು ಈ ಕಥೆಗಳಲ್ಲಿ ಪ್ರದರ್ಶಿತವಾಗಿರುವ ಭಾವನೆ.

ಆನಂದರ ವರ್ಣನಾವೈಖರಿಯನ್ನು ಕುರಿತು ಎರಡು ಮಾತುಗಳನ್ನು ಹೇಳುವುದು ಇಲ್ಲಿ ಅತ್ಯಗತ್ಯ. ಸಣ್ಣ ಕಥೆಯಲ್ಲಿ ವರ್ಣನೆಗೆ—ವರ್ಣನೆಗಾಗಿಯೇ ಇರುವ ವರ್ಣನೆಗೆ—ಎಡೆಯಿಲ್ಲ. ಎಲ್ಲಿಯಾದರೂ ವರ್ಣನೆ ಬಂದಾಗ ಅದು ಕಥೆಗೆ ನಿಕಟವಾದ ಒಂದು ಬಾಂಧವ್ಯವನ್ನು ಪಡೆದಿರಬೇಕು. ವರ್ಣನೆಯೆಂಬುದು ಕಥೆಯ ಓಟಕ್ಕೆ ಸೆಳವನ್ನು ಒದಗಿಸಬೇಕೇ ಹೊರತು ಅದರ ವೇಗವನ್ನು ಕುಂಠಿತಗೊಳಿಸಕೂಡದು. ‘ನಾನು ನಿದ್ರೆಯಿಂದ ಎಚ್ಚರವಾಗಿ ಗಾಬರಿಯಿಂದ ಕಣ್ಣುಬಿಟ್ಟರೆ, ಅವಳು ದೂರ ಮೂಲೆಗೆ ಹೋಗಿ ನಿಂತುಕೊಂಡು, ತನ್ನ ಪುಟ್ಟ ಎಳೆಯ ದೇಹವನ್ನು ಹಾಗೆ ಹೀಗೆ ಬಳುಕಿಸುತ್ತಾ,

ಮುದ್ದಾಗಿ ಮಿಂಚುವ ಕಣ್ಣುಗಳನ್ನು ಇನ್ನಷ್ಟು ದೊಡ್ಡದಾಗಿ ಬಿಡುತ್ತ, ಚಪ್ಪಾಳೆ ತಟ್ಟಿ ಕಿಲಕಿಲನೆ ನಕ್ಕುಬಿಡುವಳು. ನನಗೆ ಆ ಚಿಕ್ಕ ರತಿಯನ್ನು ಕಂಡರೆ ಮನಸ್ಸಿಗೆ ಬಹಳ ಸುಖವಾಗುತ್ತಿತ್ತು. (ಪು. ೯೨) 'ನನಗೆ ಅವಳ ಮುಖವನ್ನೂ ಆ ಕಣ್ಣುಗಳ ಸೊಬಗನ್ನೂ ನೋಡಿ, ಬಾಲಚಂದ್ರನು ಮಿರುಗುವ ಎರಡು ನಕ್ಷತ್ರಗಳೊಡನೆ ಭೂಮಿಗೆ ಇಳಿದಂತಾಯಿತು. ಸರಸಿ ಎಂತಹ ಮುತ್ತು ಕೊಟ್ಟಳು! ಅವಳ ಮಿತವಾದ ದೇಹದಲ್ಲಿ ಅಡಗಿದ್ದ ಅನಂತವಾದ ಹೃದಯದ, ಅಮಿತವಾದ ಪ್ರೇಮವೂ, ಅಭಿಮಾನವೂ ಅವಳ ಆ ಎಳಸಾದ ತುಟಿಗಳನ್ನು ಹಾಯ್ದುಬಂದು ನನ್ನ ಹೃದಯಕ್ಕೆ ಇಳಿದಹಾಗಾಯಿತು' ಇಂತಹ ವರ್ಣನೆಗಳು ಯಾವ ಕವಿತೆಗೇನು ಕಡಮೆ? 'ಕಣ್ಣೀರು ಮೌನವಾದ ಮಾತು. ರಾಮಚಂದ್ರನಿಗೆ ಆ ಕಣ್ಣೀರು, ಎಲ್ಲಿಯೋ ಕತ್ತಲೆಯಾದ ಗುಹೆಯ ಅಂತರಾಳದಿಂದ, ತನ್ನದೇ ಆದ ಒಂದು ಸಂಗೀತದೊಡನೆ ಹರಿದುಬರುವ ಸಣ್ಣ ಪ್ರವಾಹದಂತೆ ತೋರಿತು. ಅವನ ಕಣ್ಣಾಲಿಗಳು ನೀರಿನಲ್ಲಿ ತೇಲಲಾರಂಭಿಸಿದವು'—ಇಂತಹ ಕಾವ್ಯಮಯವಾದ ವರ್ಣನೆಗಳು ಈ ಕಥಾಸಂಗ್ರಹದಲ್ಲಿ ಅಲ್ಲಲ್ಲಿ ಕಾಣಬರುತ್ತವೆ. 'ಧನಪಿಶಾಚಿಗೆ ಕನಕಾಭಿಷೇಕ', 'ಚಿಕ್ಕ ರತಿ', 'ಬಾಲಸುಂದರಿ', 'ಕಲ್ಲೆದೆಯ ಸುಂದರಿ' ಇಂತಹ ಮಾತುಗಳೇ ಸಾಕು; ಹತ್ತು ವಾಕ್ಯಗಳಲ್ಲಿ ವರ್ಣಿಸುವುದನ್ನು ಒಂದೇ ಮಾತಿನಲ್ಲಿ ಕಣ್ಣಿಗೆ ಕಟ್ಟುತ್ತವೆ.

ಶ್ರೀ ಆನಂದರ ಕಥೆಗಳಲ್ಲಿ ಗಮನಾರ್ಹವಾದ ಮತ್ತೊಂದು ವಿಷಯವೆಂದರೆ ಭಾವದ ಭಾರದಿಂದ ಬಳುಕುವ ಸೂಕ್ತಿಗಳು ಅಲ್ಲಲ್ಲಿ ಕಾಣಿಸಿಕೊಳ್ಳುವುದು. ಅವುಗಳ ಅಸ್ತಿತ್ವದಿಂದ ಕಥೆಗೊಂದು ಭವ್ಯತೆಯ ವಾತಾವರಣ ಒದಗಿದಂತಾಗುತ್ತದೆ. ಮೃಣ್ಮಯ ಜಗತ್ತಿನಿಂದ ಚಿಜ್ಜಗತ್ತಿನ ಕಡೆ ಹೀಗೆ ಆಗಾಗ ಕುಡಿನೋಟವನ್ನು ಹರಿಸುವುದು ಸುಸಂಸ್ಕೃತಿಯ ಒಂದು ಕುರುಹು. ಇಂತಹ ಸೂಕ್ತಿಗಳು ಬಹಳ ಹುಲುಸಾಗಿಯೇನೂ ಇಲ್ಲ. ಮಿತಿಯಾಗಿರುವುದರಿಂದ ಅವುಗಳ ಮಹತ್ತು ಮತ್ತಷ್ಟು ಹೆಚ್ಚಿದೆ. ಸರಸಿ ಬೇರೊಬ್ಬನನ್ನು ಮದುವೆಯಾಗಿ, ತನ್ನ ಆಸೆ ನಿರಾಶೆಯಾದಾಗ 'ಸರಸಿಯ ಗೊಂಬೆ'ಯ ಕಥಾನಾಯಕ ಹೀಗೆಂದುಕೊಂಡ: 'ಅನೇಕ ವೇಳೆ ಆಸೆಯೇ ನಮ್ಮ ದುಃಖಕ್ಕೆ ಕಾರಣ. ಹುಟ್ಟುವುದು ನಮ್ಮ ಆಸೆಯಲ್ಲ; ಸಾಯುವುದೂ ನಮ್ಮ

ಆಸೆಯಿಲ್ಲ. ಹೀಗಿರುವಲ್ಲಿ ಇವೆರಡರ ಮಧ್ಯೆ ನಮ್ಮ ಆಸೆ ಪ್ರಬಲವಾಗಲೇಕೆ ?’ ರಾಮಚಂದ್ರ ಕುರುಡಿಯಾದ ಮೀನಾಕ್ಷಿಯನ್ನು ಮದುವೆಯಾದ. ಅದರಿಂದ ಎಷ್ಟೋ ಕಷ್ಟವಾಗಬಹುದು. ‘ಆದರೆ ಹಾಗೆ ಕಷ್ಟಪಡುವುದರಲ್ಲಿ ಎಷ್ಟು ಸುಖವಿದೆ!........ಯಾರಿಗೋಸ್ಕರ ನಮ್ಮ ಹೃದಯ–ಕರುಳು ಎದ್ದುಬರುತ್ತದೆಯೋ ಅವರಿಗೋಸ್ಕರ ಸಾಯುವುದೂ ಸುಖವಾಗಿರುತ್ತದೆ.’ ರಂಗಣ್ಣನ ಅಸದೃಶ ಸ್ನೇಹವನ್ನು ಸವಿದ ಶಿವಸ್ವಾಮಿಗೆ ‘ಜನ್ಮಜನ್ಮಾಂತರಗಳನ್ನು ಹಾಯ್ದು ಹರಿಯುವ ತಿಳಿನೀರಿನ ತೊರೆ—ಸ್ನೇಹ’ ಎಂದು ತೋರಿತು. ರಾಮನಾಥ ಪೂರಾ ರಸಿಕ. ‘ಮಾವಿನ ಹಣ್ಣನ್ನು ತಿನ್ನುತ್ತಾ ಮುಖದಲ್ಲಿ ಸಂತೋಷದ ಭಾವವನ್ನು ತೋರುವುದು ಹೆಚ್ಚಲ್ಲ; ಬೇವಿನ ಕಾಯನ್ನು ತಿನ್ನುತ್ತಾ ಮುಖದಲ್ಲಿ ಮಾವಿನಹಣ್ಣಿನ ಸವಿಯ ಭಾವವನ್ನು ತೋರುವುದೀಗ ರಸಿಕತೆ.’ ಇಂತಹ ಸೂಕ್ತಿಗಳು ಕಥೆಯ ಮಧ್ಯದಲ್ಲಿ, ಮಿಂಚಿನಂತೆ ಹೊಳೆದು, ಹಿಂದುಮುಂದಿನ ಕಥಾಭಾಗಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಅಷ್ಟೇ ಅಲ್ಲ, ಓದುಗನಿಗೆ ಉಸಿರು ಕಟ್ಟಿಹೋಗುವಂತಹ ಸನ್ನಿವೇಶದಲ್ಲಿ ಒಮ್ಮೊಮ್ಮೆ ನೂತನ ಶಕ್ತಿ ಸಂಚಾರವಾದಂತಾಗಿ ಆಶಾವಾದ ಮೊಳೆಯಲು ಸಹಾಯಕವಾಗುತ್ತದೆ.

ಈ ಎಂಟು ಕಥೆಗಳ ಸಂಕಲನ ಗ್ರಂಥದಲ್ಲಿ ‘ಅಶ್ವಾರೋಹಿ’ ಮತ್ತು ‘ಮನೆಗೆ ಹೋದವರು’ ಈ ಎರಡು ಕಥೆಗಳನ್ನು ಬಿಟ್ಟರೆ ಉಳಿದುವೆಲ್ಲ ಸ್ವತಂತ್ರ ಕಥೆಗಳು. ‘ಅಶ್ವಾರೋಹಿ’ ಅಮೇರಿಕದ ಪ್ರಸಿದ್ಧ ಕಥೆಗಾರನಾದ ಆಂಬ್ರೋಸ್ ಬಿಯರ್ಸ್ ಎಂಬುವನ ‘A Horseman in the Sky’ ಎಂಬ ಕಥೆಯ ಆಧಾರದಿಂದ ಬರೆದುದು. ಬಿಯರ್ಸ್‌ನ ಕಲಾಶಕ್ತಿಯನ್ನೂ, ಆತನ ‘A Horseman in the Sky’ನ ಪ್ರಾಮುಖ್ಯತೆಯನ್ನೂ ಈ ಹಿಂದೆಯೇ ವಿವೇಚಿಸಿದುದಾಗಿದೆ. ಕನ್ನಡದ ರೂಪಾಂತರಕ್ಕೆ ಮೂಲದ ವಿಚಾರದಲ್ಲಿ ಹೇಳಿರುವ ಮಾತುಗಳೇ ಬಹುಮಟ್ಟಿಗೆ ಅನ್ವಯಿಸುತ್ತವೆ. ಆದರೆ ‘ಅಶ್ವಾರೋಹಿ’ಯ ನುಡಿಸರಣಿಯನ್ನು ಕುರಿತು ಎರಡು ಮಾತುಗಳನ್ನಾಡುವುದು ಮಾತ್ರ ಇಲ್ಲಿ ಪ್ರಕೃತ. ತಮ್ಮ ಕಥೆಗಳಿಗೆ ಭಾಷೆಯನ್ನು ಬಳಸುವುದರಲ್ಲಿ ಇವರದು ಸಾಮಾನ್ಯವಾಗಿಯೇ ಸೌವರ್ಣ ಮಧ್ಯಗಾಮಿಗಳು; ಇತ್ತ ಕೇವಲ ದಿನಬಳಕೆಯ ಮಾತುಗಳೂ ಅಲ್ಲ, ಅತ್ತ ಪಾಂಡಿತ್ಯಪ್ರಚುರವಾದ ‘ಅಂಭಃಕುಂಭೀನ ಕುಂಭೀನಸ ಮಕರ ಮಹಾಕೂರ್ಮ ಕೀರ್ಣೋರ್ಮಿಮಾಲಾ ಜೃಂಭತ್ ದಂಭೋಳಿ

ದಂಭಾ ಹತಹಸಿತ' ಭಾಷೆಯೂ ಇಲ್ಲ. ಆನಂದರ ಈ ಭಾಷಾಶೈಲಿ ಇಲ್ಲಿ ಒಂದು ಬಿಕ್ಕಟ್ಟನ್ನು ಪಡೆದು ಕಥೆಯ ವಾತಾವರಣಸೃಷ್ಟಿಗೆ ಬಹು ಸಹಾಯಕವಾಗಿದೆ. ತಂದೆ-ಮಕ್ಕಳ ಅಭಿಪ್ರಾಯಭೇದದಿಂದ ರಸೂಲನು ತಂದೆಯನ್ನು ಅಗಲಿ ಶತ್ರುಗಳಲ್ಲಿ ಆಶ್ರಯ ಪಡೆದವನು. ಕರ್ತವ್ಯನಿರ್ವಹಣೆಗಾಗಿ ಪಿತೃ ತಂದೆಯನ್ನೇ ಆಹುತಿ ತೆಗೆದುಕೊಂಡನು. ಹೀಗೆ ಗಭೀರವಾದ ಪರಿಸ್ಥಿತಿಯೊಡನೆ ಆರಂಭವಾದ ಕಥೆ ಭಯಂಕರ ಘಟನೆಯೊಡನೆ ಕೊನೆಗೊಳ್ಳುತ್ತದೆ. ನಿಷ್ಠುರ ಕರ್ತವ್ಯಕ್ಕಾಗಿ ಪ್ರೇಮದ ಬಲಿದಾನವೀಯುವ ಈ ಕಥಾಪ್ರವಾಹದ ಪಾತ್ರವೆಲ್ಲವೂ ರಸೂಲನ ಹೃದಯವಿಪ್ಲವದ ಲಾವಾರಸದಿಂದ ತುಂಬಿಹೋಗಿದೆ. ಓದುಗರ ಮನಸ್ಸಿನಲ್ಲಿ ಈ ಭಾವೋದಯವಾಗಲು ತಕ್ಕ ಭಾಷಾಶೈಲಿ 'ಅಶ್ವಾರೋಹಿ'ಯದು.

'ಬೇವು-ಬೆಲ್ಲ' ಸಂಗ್ರಹದ ಕಥೆಗಳಲ್ಲಿ ಎಲ್ಲವೂ ಸುಂದರವಾಗಿವೆಯಾದರೂ ಅವರವರ ಪ್ರವೃತ್ತಿಗೆ ತಕ್ಕಂತೆ ಒಬ್ಬೊಬ್ಬರಿಗೆ ಒಂದೊಂದು ಅತ್ಯುತ್ತಮವಾಗಿ ಕಾಣಿಸೀತು. 'ಹಂಪೆಯ ಕಾಗದ'ವನ್ನು ಓದಿದ್ದ ನನ್ನ ಗೆಳೆಯರೊಬ್ಬರು ಅದನ್ನು ಆನಂದರ ಕಥೆಗಳಲ್ಲೆಲ್ಲಾ ಉತ್ತಮವಾದುದೆಂದರು. 'ರಸಿಕತೆಯ ಕಡಲುಕ್ಕಿ ಹರಿವುದಿಲ್ಲಿ' ಎಂದು ತಮ್ಮ ವಾದಕ್ಕೆ ಸಮರ್ಥನೆ ಮಾಡಿಕೊಂಡರು. 'ಜೋಯಿಸರ ಚೌಡಿ'ಯನ್ನು ಓದಿದವರೊಬ್ಬರು ಅದೇ ತಮಗೆ ಅತ್ಯಂತ ಮೆಚ್ಚಿಗೆಯದಾದುದರಿಂದ ಅದನ್ನೇ ಅತ್ಯುತ್ತಮವಾದುದು ಎಂದರು. ಸರಳ ಮನಸ್ಸಿನ ನನ್ನ ಗೆಳೆಯರೊಬ್ಬರು 'ಸಂಗ್ರಹಕ್ಕೆ ಇಟ್ಟಿರುವ ಹೆಸರು ನೋಡಿದರೆ ಗೊತ್ತಾಗುವುದಿಲ್ಲವೆ? ಕವಿಯ ದೃಷ್ಟಿಯಲ್ಲಿ ಕೂಡ 'ಬೇವು-ಬೆಲ್ಲ'ದ ಕಥೆಯೇ ಅತ್ಯುತ್ತಮವಾದುದು' ಎಂದು ಹೇಳಿದರು. ಯಾರು ಏನು ಹೇಳಿದರೂ ನನ್ನ ಮನಸ್ಸಿಗೆ ಇಲ್ಲಿನ ಕಥೆಗಳಲ್ಲೆಲ್ಲಾ 'ಸರಸಿಯ ಗೊಂಬೆ' ಅತ್ಯಂತ ಮೆಚ್ಚುಗೆಯಾದುದಾಗಿದೆ. ಆ ಕಥೆಯ ಆದಿಯಲ್ಲಿರುವ 'A young boy is a young boy, A young girl is a young woman' ಎಂಬ ಪದ್ಯಭಾಗದ ಭಾವ ಕಥೆಯನ್ನೆಲ್ಲಾ ವ್ಯಾಪಿಸಿದೆ. ಎಳೆಯ ಹುಡುಗಿ ಸರಸಿಯಲ್ಲಿ ಸ್ತ್ರೀತ್ವಕ್ಕೊಂದು ಭಾಷ್ಯವನ್ನು ಕಲ್ಪಿಸುವ ಕೆಲಸವನ್ನು ಕೈಕೊಂಡು ಆ ಕಾರ್ಯದಲ್ಲಿ ಕೃತಕೃತ್ಯರಾಗಿದ್ದಾರೆ, ನಮ್ಮ ಕಥೆಗಾರ. 'ಅವಳು ಆರು ವರ್ಷದ ಹುಡುಗಿಯಾಗಿದ್ದರೂ ಬಲು ಮಾತಿನ ಗಣಿ! ಇಷ್ಟರ ಮಧ್ಯೆ ನಾಚಿಕೆ

ಬೇರೆ.' ಸರಸಿಯು ಈ ಸರಸವಾದ ನುಡಿ-ನಡೆಗಳಿಗೆ ತಕ್ಕಂತೆ, ರೂಪದಲ್ಲಿ ಅವಳು ಒಬ್ಬ 'ಚಿಕ್ಕ ರತಿ'. ಕಥೆ ಹೇಳುತ್ತಿರುವ ಕಥಾನಾಯಕ ಈ 'ಬಾಲ ಸುಂದರಿ'ಯಿಂದ ಮುತ್ತುಗಳನ್ನು ಕೊಳ್ಳೆಹೊಡೆಯುತ್ತಿರುವ ಒಬ್ಬ ಪರಮ ಸುಖಿ. ಅವನು ಮಲಗಿರುವಾಗ ಸರಸಿ ಸದ್ದಿಲ್ಲದೆ ಅವನ ಕೋಣೆಯನ್ನು ಪ್ರವೇಶಿಸಿ ಕಿವಿಯಲ್ಲಿ ಕಿರ್ರೆನ್ನುವಳು, ಚಕ್ಕಳಗುಳಿ ಇಡುವಳು, ಕಾಲು ಕೆರೆಯುವಳು. ಅವನು ಎದ್ದು ಕಕ್ಕಾಬಿಕ್ಕಿಯಾದಾಗ ಅವಳು ಕಿಲಕಿಲ ನಗುತ್ತಾ ಚಪ್ಪಾಳೆ ತಟ್ಟುವಳು. ಆಗ ಕಥಾನಾಯಕ, 'ಸರಸಿ, ನೀನು ಹೀಗೆಯೇ ಮಾಡುತ್ತಿರು; ನಿನ್ನನ್ನು, ನಿಮ್ಮಪ್ಪನಿಗೆ ಹೇಳಿ, ಒಂದು ಕೋತಿ ತಿಮ್ಮಣ್ಣನಿಗೆ ಮದುವೆ ಮಾಡಿಸಿಬಿಡುತ್ತೇನೆ' ಎಂದ. ಆರು ವರ್ಷದ ಆ ಚುರುಕು ಹುಡುಗಿ 'ನಿನ್ನ ಹೆಂಡತಿ ಯಾರು ಗೊತ್ತೆ?' ಎಂದು ಆರಂಭಿಸಿ, ಮಾತಾಡುತ್ತಾ ಆಡುತ್ತಾ, ಅವನನ್ನು ಕೋತಿ ತಿಮ್ಮಣ್ಣನನ್ನಾಗಿ ಮಾಡಿ, 'ಕಪ್ಪನೆ ಕರಡಿ'ಯನ್ನು ಅವನಿಗೆ ಗಂಟುಹಾಕಿದಳು. ಇಂತಹ ಸಕ್ಕರೆ ಹರಳ ದಂಡೆಗಳ ಮಧ್ಯೆ ಕಥೆಯ ಹಾಲ ತೊರೆ ಹರಿಯುವುದೇ ಇದರ ಹಿರಿತನಕ್ಕೆ ಮೊದಲ ಕಾರಣ.

ಚಿಕ್ಕ ಮಕ್ಕಳಿಗೆ ಸಹಜವಾದ ಕಲ್ಪನಾಶಕ್ತಿಯನ್ನು ಕಥೆಯ ಬೆಳವಣಿಗೆಗೆ ಸಾಧನವಾಗಿ ಬಳಸಿಕೊಳ್ಳುವುದರಲ್ಲಿ ನಮ್ಮ ಕಥೆಗಾರ ಅದ್ಭುತವಾದ ಪ್ರತಿಭೆಯನ್ನು ಪ್ರದರ್ಶಿಸಿದ್ದಾರೆ. ಶಿಶುಮನಶ್ಶಾಸ್ತ್ರದ ಪರಿಚಯದೊಡನೆ ಸೂಕ್ಷ್ಮ ಪರಿಶೀಲನಾದೃಷ್ಟಿಯೂ ಸೇರಿದಾಗ ಮಾತ್ರ ಕಥೆಗಾರ ಇಂತಹ ಸಹಜ ಚಿತ್ರ ಒಂದನ್ನು ಚಿತ್ರಿಸಲು ಶಕ್ತನಾಗುತ್ತಾನೆ. ಸರಸಿಗೆ ದೊರೆತ ಅರಗಿನ ಗೊಂಬೆ, ಅವಳ ಪಾಲಿಗೆ ಸಜೀವವಾದ ಶಿಶುವಾಗಿತ್ತು. ಅದನ್ನು ತೊಡೆಯ ಮೇಲಿಟ್ಟು ತಟ್ಟುವಳು. ಬಾಗಿನದ ಅವಲಕ್ಕಿ ಉಂಡೆ, ಬಾಳೆಹಣ್ಣುಗಳನ್ನು ತಿಂದು ಅದಕ್ಕೆ ಜ್ವರ ಬಂದಿದೆ. ಅದರಿಂದ ಅದು ಹಟಮಾಡಿ ರಾತ್ರಿಯೆಲ್ಲಾ ಅವಳಿಗೆ ನಿದ್ದೆಯಿಲ್ಲದಂತಾಗಿದೆ! ತೊಡೆಯ ಮೇಲಿಟ್ಟು ತಟ್ಟುತ್ತಾ ತಟ್ಟುತ್ತಾ ಅದು ಹಾಗೆಯೇ ನಿದ್ದೆ ಹೋಗುತ್ತದೆ. ಯಾರಾದರೂ ಗಟ್ಟಿಯಾಗಿ ಮಾತನಾಡಿದರೆ ಅದಕ್ಕೆ ನಿದ್ರಾಭಂಗವಾದೀತೆಂದು ಸರಸಿಯ ಭಯ. ಕಥಾನಾಯಕ ಅದರ ತಂದೆ ಯಾರೆಂದು ಹುಡುಗಾಟವಾಡಿ, ತಾನೇ ಅದರ ತಂದೆಯೆಂಬುದನ್ನು ಸರಸಿಯ ಬಾಯಿಂದ ಕೇಳಿದಾಗ ತಾನು ಧನ್ಯನಾದೆನೆಂದುಕೊಂಡ. ಅವ್ಯಾಜವಾದ ಅವನ ಪ್ರೇಮ ಬಹುಶಃ ಸಕಾಮ ಪ್ರೇಮವಾಗಲು ಇಲ್ಲಿ ಅಂಕುರವಾಗಿದೆ

ಎಂದು ತೋರುತ್ತದೆ. ಈ ಆಸೆಯ ಕೀಟವು ಹೃದಯವನ್ನು ಪ್ರವೇಶಿಸುವಂತೆ ಮಾಡಿರುವುದು ಎಷ್ಟು ಕಲಾಮಯವಾಗಿದೆಯೋ ಅಷ್ಟೇ ಸಹಜವಾಗಿದೆ, ಸುಂದರವಾಗಿದೆ.

ಕಥೆಯ ಮಧ್ಯೆ ಮಧ್ಯೆ ಬರುವ ಸುಂದರವಾದ ವರ್ಣನೆಗಳನ್ನೂ ಅನೇಕ ವೇಳೆ ಆ ವರ್ಣನೆಗಳು ಕಾವ್ಯದ ಮಟ್ಟಕ್ಕೇರುವುದನ್ನೂ ಕುರಿತು ಹಿಂದೆಯೇ ವಿವೇಚಿಸಿದ್ದೇನೆ. ಇಂತಹ ವರ್ಣನೆಗಳು 'ಸರಸಿಯ ಗೊಂಬೆ'ಯಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಅವುಗಳನ್ನು ಇಲ್ಲಿ ಮತ್ತೆ ಎತ್ತಿತೋರುವುದು ಅನಗತ್ಯವಾದರೂ, ಇಲ್ಲಿನ ಸೂರ್ಯಾಸ್ತದ ವರ್ಣನೆಯನ್ನು ಒಂದು ವಿಶಿಷ್ಟ ಗುಣಕ್ಕಾಗಿ ಉದ್ಧರಿಸಬೇಕಾಗಿದೆ. ನಾಯಕನ ಹೃದಯದಲ್ಲಿ ಅಂಕುರಿಸಿದ ಸರಸಿಯ ಮೇಲಿನ ಪ್ರೇಮ ದಿನದಿನಕ್ಕೆ ಕುಡಿಯಿಡುತ್ತಾ ಹೋಗಿ, ಕೊನೆಗೆ ಸುಪುಷ್ಟವಾಗಿ ಬೆಳೆದು ರೂಢಮೂಲವಾಗುತ್ತದೆ. ಆತನ ಹೃದಯದ ಅನುರಾಗ ಅತ್ಯಂತ ಗೋಪ್ಯವಾಗಿದೆ. ಅದು ತನ್ನ ಕೈಗೆ ಎಟುಕದ ಫಲವಾಗಬಹುದೇನೋ ಎಂಬ ಭಯವೂ ಅದರೊಡನೆ ಸೇರಿದೆ. ಈ ಮನೋಭಾವದ ಕಥಾನಾಯಕ ಒಂದು ಸಂಜೆ ಬಂಡೆಯೊಂದರ ಮೇಲೆ ಕುಳಿತು ತಂಗಾಳಿಯನ್ನು ಸೇವಿಸುತ್ತಿದ್ದಾನೆ. ಆಗ "ಪ್ರೇಯಸಿಯನ್ನು ಬಹಳ ಹೊತ್ತು ಕಾಯಿಸಿ ಆಮೇಲೆ ಅವಳ ಮನೆಗೆ ಹೋಗುವ ನಾಯಕನು, ಅವಳ ಮನೆಯ ಹತ್ತಿರ ಹತ್ತಿರ ಹೋದಹಾಗೆಲ್ಲಾ 'ಛೆ, ಎಷ್ಟು ಹೊತ್ತು ಕಾಯಿಸಿಬಿಟ್ಟೆ! ಏನು ಅನ್ನುವಳೊ! ಎಷ್ಟು ಸಿಟ್ಟು ಮಾಡುವಳೊ!' ಎಂಬ, **ಮನಸ್ಸಿಗೆ ಸುಖವನ್ನುಂಟು ಮಾಡುವ ಭೀತಿಯಿಂದ** ಹೆಜ್ಜೆಗಳನ್ನು ಮೆಲ್ಲಮೆಲ್ಲಗೆ ಇಡುವಂತೆ, ಸೂರ್ಯನು ಪಶ್ಚಿಮಾಕಾಶದಲ್ಲಿ ತಡೆತಡೆದು ಇಳಿಯುತ್ತಿದ್ದ"ನಂತೆ! ನಾಯಕನ ಮನಃಸ್ಥಿತಿ ಈ ವರ್ಣನೆಯಲ್ಲಿ ಎಷ್ಟು ಸುಂದರವಾಗಿ ಪ್ರತಿಬಿಂಬಿತವಾಗಿದೆ! ಸೂರ್ಯನು 'ಮನಸ್ಸಿಗೆ ಸುಖವನ್ನುಂಟುಮಾಡುವ ಭೀತಿಯಿಂದ' ತುಂಬಿದ್ದರೆ ನಾಯಕನೂ ಅದೇ ಸ್ಥಿತಿಯಲ್ಲಿದ್ದಾನೆ. ಸರಸಿ ಮತ್ತೊಬ್ಬನ ಕೈಹಿಡಿದು ಎಲ್ಲಿ ತನ್ನ ಹಳ್ಳಿಯಿಂದ ಕಣ್ಮರೆಯಾಗುವಳೊ, ಎಲ್ಲಿ ತನ್ನ ಜೀವನಾಕಾಶವೆಲ್ಲವೂ ಕತ್ತಲಿನಿಂದ ತುಂಬಿಹೋಗುವುದೋ—ಎಂಬ ನಾಯಕನ ಕಾತರವೂ ಇಲ್ಲಿ ಧ್ವನಿತವಾಗಿದೆ.

ಹೀಗೆ ಈ ಕಥೆ ಹೆಜ್ಜೆಹೆಜ್ಜೆಗೂ ಒಂದೊಂದು ಸೊಬಗನ್ನು ಚೆಲ್ಲುವ ಕಲೆಯಿಂದ ತುಂಬಿದೆ. ಕಥೆ ಬೆಳೆದಂತೆ, ಕ್ರಮಕ್ರಮವಾಗಿ ಶುಕ್ಲ ಪಕ್ಷ ಕಳೆದು

ಹೋಗಿ, ನಾಯಕನ ಜೀವನದಲ್ಲಿನ ಕೃಷ್ಣ ಪಕ್ಷ ಕಾಲಿಡುತ್ತದೆ. ಸರಸಿ ಅನುರೂಪನಾದ ವರನನ್ನು ಹೊಂದಿ ಹುಟ್ಟಿದ ಹಳ್ಳಿಯಿಂದ ದೂರವಾಗಿ ಹೊರಟು ಹೋದಳು. ಕಥಾನಾಯಕನ ಹೃದಯದಂತೆ ಅವಳದೇನೂ ದುಃಖಭಾರದಿಂದ ಭಾರವಾಗಿರಲಿಲ್ಲ. ಅವಳ ಮನಸ್ಸಿನಲ್ಲಿ ಯಾವುದೊಂದು ಆಸೆಯೂ ನೆಲಸಿರಲಿಲ್ಲ; ಆದ್ದರಿಂದ ಅವಳು ಅತ್ಯಂತ ಸುಖಿಯಾಗಿಯೇ ಇದ್ದಳು. ಆದರೆ ನಾಯಕನ ಹೃದಯ ಮೂಕವೇದನೆಯಿಂದ ಒಳಗೊಳಗೇ ಕೊರಗಿ ಮರುಗಿತು. ಈ ಹೃದಯವೇದನೆ ಮನೋಹರವಾಗಿ ಚಿತ್ರಿತವಾಗಿದೆ, ಕಥೆಯಲ್ಲಿ. ಸರಸಿ ಊರಿಗೆ ಹೊರಟ ದಿನ, ನಾಯಕ ತನ್ನ ತೋಟಕ್ಕೆ ಹೋಗಿ, ತಾನು ಕಟ್ಟಿಕೊಂಡಿದ್ದ ಸುಂದರ ಸ್ವಪ್ನ ತನ್ನ ಕಣ್ಣೆದುರಿಗೇ ಒಡೆದು ಬಿದ್ದಿರುವುದನ್ನು ಕಣ್ಣಾರೆ ಕಂಡು ಮರುಗುತ್ತಾನೆ. ಇಷ್ಟಾದರೂ ಆತನ ಹೃದಯದಲ್ಲಿ ಸರಸಿಯ ವಿಚಾರದಲ್ಲಿ ದುರ್ಭಾವನೆ ಯಾವುದೂ ಮೂಡುವುದಿಲ್ಲ. 'ಎಲ್ಲವೂ ದೇವರ ನಿಯಮ' ಎಂದುಕೊಂಡು ಮನಸ್ಸನ್ನು ಸ್ತಿಮಿತದಲ್ಲಿ ಇಟ್ಟುಕೊಳ್ಳುತ್ತಾನೆ. ಆತ ಅವಳನ್ನು ತಂಗಿಯಂತೆ ನಡಸಿಕೊಳ್ಳುತ್ತಾನೆ. ಈ ಮಧುರಭಾವ, ಈ ಉದಾತ್ತ ದೃಷ್ಟಿ—ಸುಸಂಸ್ಕೃತಿಯ ಹೆಗ್ಗುರುತು.

ಹೆಚ್ಚೇನು ? 'ಸರಸಿಯ ಗೊಂಬೆ' ಒಂದು ರಸಪಾಕ. ಅದು ಯಾರಿಗಾದರೂ ಅತ್ಯಂತ ಮೆಚ್ಚಿಗೆಯಾದೀತು.

ಒಟ್ಟಿನಲ್ಲಿ ವಸ್ತು, ಪಾತ್ರ, ರಸ—ಯಾವ ದೃಷ್ಟಿಯಿಂದ ನೋಡಿದರೂ ಆನಂದರ ಕಥೆಗಳು ತಮ್ಮದೇ ಆದ ಒಂದು ವಿಶಿಷ್ಟತೆಯನ್ನು ಪಡೆದು ಕನ್ನಡ ಕಥನಸಾಹಿತ್ಯಕ್ಕೆ ಪುಷ್ಟಿಯನ್ನು ಒದಗಿಸಿವೆ. ಇದಕ್ಕಾಗಿ ಅವರು ಕನ್ನಡಿಗರೆಲ್ಲರ ಅಭಿನಂದನೆಗೆ ಪಾತ್ರರು.

* * * *

ಈ ದೀರ್ಘವಾದ, ಸುದೀರ್ಘವಾದ ಪೀಠಿಕೆಯನ್ನು ಬರೆಯಲು ನನ್ನನ್ನು ಪ್ರೇರಿಸಿ, ಕನ್ನಡ ಕಥಾಪ್ರೇಮಿಗಳಿಗೆ ನನ್ನಿಂದ ಈ ಸೇವೆ ಸಲ್ಲುವಂತೆ ಒಂದು ಸದವಕಾಶವನ್ನು ಒದಗಿಸಿಕೊಟ್ಟ ನನ್ನ ಪ್ರಿಯ ಮಿತ್ರರಾದ ಆನಂದರಿಗೆ ನಾನು ಚಿರಋಣಿ. ಅವರ ಕಥಾಪುಷ್ಪಗಳನ್ನು ಧರಿಸುವವರು ಈ ಪೀಠಿಕೆಯ ನಾರನ್ನು ಬಳಸುವರಾದರೆ ನಾನು ಧನ್ಯ.

**ತ. ಸು. ಶಾಮರಾಯ**

# ‘ ಭವತಿ ಭಿಕ್ಷಾಂ ದೇಹಿ ’

೧

“ ಭವತಿ ಭಿಕ್ಷಾಂ ದೇಹಿ ! ”........

“ ಭಿಕ್ಷಾನ್ನ, ತಾಯಿ ! ”

“ ಮುಂದೆ ಹೋಗಿಬಿಟ್ಟು ಬಾಪ್ಪ ! ”

(ಬಹು ಸಂಕೋಚದಿಂದಲೂ ದೀನಸ್ವರದಿಂದಲೂ)

“ ಇವತ್ತು ಎಲ್ಲಿಯೂ ಸಿಕ್ಕಲಿಲ್ಲ, ತಾಯಿ ! ”

ಭಿಕ್ಷಾನ್ನಕ್ಕೆ ಬಂದಿದ್ದ ಹುಡುಗನ ಹೆಸರು ಮಾಧು. (ಸ್ಕೂಲಿನಲ್ಲಿ ‘ ಮಾಧವರಾವ್ ’ ಎಂದು ಇರಬಹುದು) ‘ ಹೋಗಿಬಿಟ್ಟು ಬಾ ’ ಎಂದು ಹೇಳಿದವರು ನಾಗೇಶರಾಯರ ಹೆಂಡತಿ ಶಾರದಾಬಾಯಿ. ಇದುವರೆಗೆ ಅವರು ಮಾಧುವನ್ನು ಎಂದೂ ಭಿಕ್ಷಾನ್ನ ಹಾಕದೆ ಕಳುಹಿಸಿರಲಿಲ್ಲ; ಆದರೆ ಇಂದು ಊಟವಾಗಿ ಎಲ್ಲ ಮುಗಿದುಹೋಗಿತ್ತು. ಅವನೂ ಇದುವರೆಗೆ ಎಂದೂ ಎರಡನೆಯ ಸಾರಿ ಕೇಳಿದ್ದಿಲ್ಲ; ಆದ್ದರಿಂದ ಅವನು ಈ ಹೊತ್ತು ಸಂಕೋಚದಿಂದ ‘ ಎಲ್ಲಿಯೂ ಸಿಕ್ಕಲಿಲ್ಲ ’ವೆಂದು ಹೇಳಿದ ಕೂಡಲೆ ಅವರ ಗಮನವು ಆ ಕಡೆ ಹೋಯಿತು. ಅನಂತರ, “ ಮಧ್ಯಾಹ್ನದ ಅನ್ನ ಸ್ವಲ್ಪ ಮಿಕ್ಕಿದೆಯೇನೋ— ಹಾಕಲೇ, ಅಪ್ಪ ? ” ಎಂದು ಕೇಳಿದರು.

“ ಹಾಕಿ, ಅಮ್ಮ.”

“ ಸ್ವಲ್ಪ ಮೆತ್ತಗಿದೆಯೆಂತ ಕಾಣುತ್ತದೆಯಲ್ಲ, ಇರಲೇ ? ಹಳಸಿದ ಅನ್ನ ಹಾಕಿದರೆಂದುಕೊಳ್ಳಬೇಡ. ತಿನ್ನುವುದಕ್ಕೆ ಬರುವ ಹಾಗಿದ್ದರೆ ತಿನ್ನು ; ಆಗದಿದ್ದರೆ ಬಿಸಾಟುಬಿಡು.”

“ ಹಾಕಿ, ಅಮ್ಮ ; ಭಿಕ್ಷಾನ್ನದ ಹುಡುಗರು ಅದೆಲ್ಲಾ ನೋಡುವುದಕ್ಕಾಗುತ್ತದೆಯೆ ? ನನಗೆ ಎಲ್ಲಾ ಅಭ್ಯಾಸವಾಗಿದೆ ; ಅದು ಉಪವಾಸಕ್ಕಿಂತ ಕಡೆಯೆ, ತಾಯಿ ! ”

“ ಉಪವಾಸ ಏಕಪ್ಪ ! ”

ಹೀಗೆಂದು ಹೇಳಿ ಶಾರದಮ್ಮನವರು ಮಿಕ್ಕಿದ್ದ ಮಧ್ಯಾಹ್ನದ ಅನ್ನ

ವನ್ನೆಲ್ಲಾ ಹಾಕಿ ಕಳುಹಿಸಿದರು. ಈ ಮಾತುಗಳನ್ನು ಕೇಳಿ ಓಡಿ ಬಂದ ಅವರ ಮಗಳು—ಆರೇಳು ವರ್ಷದ ಹುಡುಗಿ—ಸೀತೆ, ಹುಡುಗ ಹೊರಟು ಹೋದಮೇಲೆ,

"ಹಳಸಿದ ಅನ್ನ ಹ್ಯಾಗೆ ತಿಂತಾನೇ, ಅಮ್ಮಾ! ಅಸಯ್ಯ್ನಾಶಿ ಆಗುವದಿಲ್ಲ ವೇನೇ?" ಎಂದು ಕೇಳಿದಳು.

"ಹಳಸಿರಲಿಲ್ಲ ಕಣೆ! ಎಲ್ಲೋ ಸ್ವಲ್ಪ ಮೆತ್ತಗಿತ್ತು, ಅಷ್ಟೆ" ಎಂದು ಶಾರದಮ್ಮನವರು ಉತ್ತರ ಕೊಟ್ಟರು. ಆದರೆ ಆ ಹುಡುಗನ ಮಾತುಗಳನ್ನೂ ಅವನ ದೈನ್ಯವನ್ನೂ ನೋಡಿ ಅವನ ಪೂರ್ವೋತ್ತರಗಳನ್ನೆಲ್ಲಾ ತಿಳಿದುಕೊಳ್ಳ ಬೇಕೆಂದು ಕುತೂಹಲ ಹುಟ್ಟಿತು. ನಾಗೇಶರಾಯರೂ ವಿಚಾರಿಸಬಹುದೆಂದೂ, ತುಂಬ ಕಷ್ಟಪಡುತ್ತಿದ್ದರೆ ಏನಾದರೂ ಸಹಾಯ ಮಾಡಬಹುದೆಂದೂ ಒಪ್ಪಿ ಕೊಂಡರು.

[ಗಂಡಹೆಂಡಿರಿಬ್ಬರಿಗೂ ಹೀಗೆ ಒಂದೇ ವಿಧವಾದ ಮನಸ್ಸೂ ಕನಿಕರವೂ ಧಾರಾಳ ಬುದ್ಧಿಯೂ ಇರುವುದು ಅಪರೂಪ. ಸಾಮಾನ್ಯವಾಗಿ ವಿದ್ಯಾವಂತ ನಿಗೆ ಮೂಢೆಯೂ, ಸಾತ್ವಿಕನಿಗೆ ರಾಕ್ಷಸಿಯೂ, ಧಾರಾಳಿಗೆ ಜಿಪುಣೆಯೂ ಹೆಂಡತಿಯಾಗುವುದೇ ಹೆಚ್ಚು] ಹಾಗಲ್ಲದೆ ಅನುರೂಪಳಾದ ಹೆಂಡತಿ ಇದ್ದದ್ದ ರಿಂದ ನಾಗೇಶರಾಯರ ಸಂಸಾರವು ಅಮೃತಮಯವಾಗಿತ್ತು. ಅವರು ತಮ್ಮ ಸಂಸಾರವನ್ನು ಕ್ಷೀರಸಾಗರವೆಂದೂ ತಮ್ಮ ಹೆಂಡತಿಯು ಅದರಲ್ಲಿ ಹುಟ್ಟಿದ ಲಕ್ಷ್ಮಿಯೆಂದೂ—ಇನ್ನೂ ಏನೇನೋ ಹೇಳಿಕೊಳ್ಳುವರು.

ಮರುದಿನ ಮಾಧು ಬಂದಾಗ ಅವನ ಕಥೆಯೆಲ್ಲಾ ತಿಳಿಯಿತು. ಬಹು ಕಷ್ಟವಾದ ಕಥೆ—ತಂದೆತಾಯಿಗಳು ತೀರ ಬಡವರು; ಎಲ್ಲೋ ದೂರದ ಹಳ್ಳಿ ಯಲ್ಲಿ ಇರುವರು; ಮಾಧು ಮಾತ್ರ ಪಟ್ಟಣಕ್ಕೆ ಬಂದು ಭಿಕ್ಷಾನ್ನದಿಂದ ಹೊಟ್ಟೆ ಹೊರೆದುಕೊಳ್ಳುತ್ತ ಎಂಟ್ರೆನ್ಸ್ ತರಗತಿಯಲ್ಲಿ ಓದುತ್ತಿದ್ದ. ಒಪ್ಪತ್ತು ಉಪ ವಾಸ, ತಂಗಳು, ಹಳಸಲು—ಎಲ್ಲಾ ಅವನಿಗೆ ಚಿರಪರಿಚಿತವಾಗಿದ್ದುವು. ಈ ಪ್ರಪಂಚದಲ್ಲಿ ಎಷ್ಟೋ ಸಹಸ್ರ ಜನ ತನಗಿಂತಲೂ ಹೆಚ್ಚು ಕಷ್ಟಪಡುತ್ತಿರುವ ರೆಂದೂ, ನಿಲ್ಲುವುದಕ್ಕೆ ನೆಲೆಯಿಲ್ಲದ ನಿರ್ಗತಿಕರು ಎಷ್ಟೋ ಮಂದಿ ಇರುವ ರೆಂದೂ, ತನ್ನನ್ನು ದೇವರು ಅವರಿಗಿಂತಲೂ ನೂರು ಪಾಲು ಉತ್ತಮ ಸ್ಥಿತಿ ಯಲ್ಲಿಟ್ಟಿರುವನೆಂದೂ ಹೇಳಿಕೊಳ್ಳುವನು; 'ನಾನು ಜೋಳಿಗೆ ಹಾಕಿಕೊಂಡು

ಹೋದರೆ 'ಭಿಕ್ಷಾನ್ನದ ಹುಡುಗ' ಎಂದು ಯಾರಾದರೂ ನಾಲ್ಕು ಜನ ಅನ್ನ ಹಾಕುತ್ತಾರೆ; ಬೀದಿಯಲ್ಲಿ ನರಳುತ್ತ ಬಿದ್ದಿರುವ ಕುಂಟರೂ ಕುರುಡರೂ ಕುಷ್ಠರೋಗಿಗಳೂ ಇದ್ದಾರಲ್ಲ, ಅವರ ಗತಿಯೇನು?' ಎಂದು ಪದೇ ಪದೇ ಯೋಚನೆಯು ಬರುವುದು. ಆಗ, ಹುಡುಗರು ಹೆದರಿಕೆಗೆ ಕಣ್ಣುಮುಚ್ಚಿಕೊಂಡು ಬಿಡುವಂತೆ, ಮುಂದೆ ಏನೂ ತೋರದೆ ಸೊರಗಿ ಸುಮ್ಮನಾಗುವನು.

ಅವನ ಕಥೆಯನ್ನು ಕೇಳಿ ನಾಗೇಶರಾಯರಿಗೂ ಶಾರದಮ್ಮನವರಿಗೂ ಬಹಳ ವ್ಯಸನವಾಯಿತು; ಅಲ್ಲಿಂದ ಮುಂದೆ ಆ ಮನೆಯಲ್ಲಿ ಅವನು 'ಹೋಗಿಬಿಟ್ಟು ಬಾ'ಬೇಕಾಗಲಿಲ್ಲ. ನಿತ್ಯವೂ ಅನ್ನದ ಜೊತೆಗೆ ಸ್ವಲ್ಪ ತುಪ್ಪವೂ ಹಬ್ಬಹರಿದಿನಗಳಲ್ಲಿ ತಿಂಡಿಗಳೂ ಸಿಕ್ಕುತ್ತ ಬಂದವು.

"ಅಮ್ಮ, ಆ ಹುಡುಗ ಯಾರೇ?"—ಸೀತೆ ಒಂದು ದಿನ ಕೇಳಿದಳು.

ಶಾರದಮ್ಮ: "ಭಿಕ್ಷಾನ್ನದ ಹುಡುಗ ಕಣೇ!"

ಸೀತೆ: "ಹೌದಮ್ಮಾ, ಭಿಕ್ಷಾನ್ನದ ಹುಡುಗ. ಅವನು ಯಾರೂ ಅಂತ ಕೇಳಿದೆ—ಅವನಿಗೆ ತಿಂಡೀ ಎಲ್ಲಾ ಕೊಡುತ್ತೀಯಲ್ಲಾ—ಅದಕ್ಕೆ."

ಶಾರದಮ್ಮ: "ಯಾರಾದರೇನು? ನೀಯೇನು ಮದುವೆ ಮಾಡಿಕೊಳ್ಳಬೇಕೇನು?"

ನಮ್ಮ ಹೆಂಗಸರಿಗೆ ಅಡಿಗೆ, ಒಡವೆ, ಮದುವೆ—ಇದರಲ್ಲಿ ಎಲ್ಲವೂ ಮುಗಿದುಹೋಗುವುದು. ಈಗ ಸೀತೆಯ ಮಾತೂ ಇಲ್ಲಿಯೇ ನಿಂತು ಹೋಯಿತು. ಅಂತೂ ದಿನದಿನಕ್ಕೆ ಎಲ್ಲರಿಗೂ ಮಾಧುವಿನ ಮೇಲೆ ವಿಶ್ವಾಸ ಹೆಚ್ಚಿತು. ಸೀತೆ ತಾನೇ ಒಂದೊಂದು ದಿನ ಅನ್ನವನ್ನು ಹಾಕುವಳು. ತಿಂಡಿ ಮಾಡಿದ ದಿನವಂತೂ ಅವನ್ನು ಮರೆತ್ತಾದರೂ ಹಾಕಲೇ ಕೂಡದು! ದಿನಕ್ಕೊಂದು ಸಾರಿಯಾದರೂ ಮನೆಯಲ್ಲಿ ಅವನ ಪ್ರಸ್ತಾಪ ಬರದೇ ಇರುತ್ತಿರಲಿಲ್ಲ. ಈ ಸಂದರ್ಭದಲ್ಲಿ ಮಾಧು ಇಷ್ಟಪಟ್ಟಿದ್ದರೆ ನಾಗೇಶರಾಯರಿಂದ ಬೇಕಾದ ಸಹಾಯವನ್ನೆಲ್ಲಾ ಪಡೆದು ಸುಖವಾಗಿರಬಹುದಾಗಿತ್ತು. ಆದರೆ ಅವನ ಪ್ರಕೃತಿ ಅಷ್ಟು ಸಡಿಲವಾಗಿರಲಿಲ್ಲ.

ಒಂದು ದಿನ ರಾತ್ರಿ, ನಾಗೇಶರಾಯರು ಊಟಕ್ಕೆ ಕುಳಿತಿರಲು ಅವರಿಗೆ ಅನ್ನ ಬಡಿಸಿ ತುಪ್ಪ ಹಾಕುವಾಗ, ಶಾರದಮ್ಮನವರಿಗೆ ಮಾಧುವಿನ ಜ್ಞಾಪಕ ಬಂತು. ಆಗ ಅವರು,

“ ಪಾಪ, ಮಾಧೂಗೆ ಬಹಳ ಕಷ್ಟ ! ” ಎಂದರು.

“ ಹೌದು ; ಏನು ಮಾಡುವುದು ? ನಾನೂ ನನ್ನ ಕೈಲಾದ ಸಹಾಯ ವನ್ನೆಲ್ಲಾ ಮಾಡುತ್ತಿದ್ದೇನೆ. ಯಾವುದೋ ಎರಡು ಮೂರು ಪುಸ್ತಕಗಳು ಬೇಕಾಗಿದ್ದುವೆಂದು ತಿಳಿಯಿತು ; ತೆಗೆಸಿಕೊಟ್ಟೆ. ಒಂದೆರಡು ಬಟ್ಟೆ ಕೊಡಿಸಿದೆ. ಬಹಳ ಕಷ್ಟವಾಗಿದ್ದರೆ ನಮ್ಮ ಮನೆಯಲ್ಲಿಯೇ ಬಂದಿರುವ ಹಾಗೆ ಹೇಳಿದೆ....”

“ ಅದಕ್ಕೆ ಅವನೇನಂದ ? ”

“ ‘ ನನಗೆ ಈಗ ಅಷ್ಟೇನೂ ಕಷ್ಟವಿಲ್ಲ ’ ಎಂದ.”

“ ಅವನ ತಂದೆತಾಯಿಗಳು ತೀರ ಬಡವರಂತೆ.”

“ ಹೌದು, ಮೊನ್ನೆ ಅವರಿಗೆ ಕಳುಹಿಸುವ ಹಾಗೆ ಹೇಳಿ ಹತ್ತು ರೂಪಾಯಿ ಕೊಟ್ಟೆ.”

“ ಏನೋ, ನಮ್ಮ ಕೈಲಾದಷ್ಟು ಮಾಡುವುದು. ದೇವರೇ ಅವನನ್ನು ಮುಂದಕ್ಕೆ ತರಬೇಕು.”

೨

ಪರೀಕ್ಷೆ ಹತ್ತಿರ ಬಂದುಬಿಟ್ಟಿತಲ್ಲಾ ಎಂದು ಕಳವಳಪಡುವ ಹುಡುಗರೇ ಹೆಚ್ಚು ಮಂದಿ ; ಆದರೆ ಮಾಧು ಆ ಗುಂಪಿಗೆ ಸೇರಿದವನಾಗಿರಲಿಲ್ಲ. ‘ ಪರೀಕ್ಷೆ ಇನ್ನೂ ಎರಡು ತಿಂಗಳಿದೆಯಲ್ಲಾ—ಎಂದಿಗೆ ಕಳೆಯುವುದೋ ! ’ ಎಂದು ಯೋಚಿಸುತ್ತಿರುವನು. ಪರೀಕ್ಷೆ ಮುಗಿದಮೇಲೆ ಹೇಗಾದರೂ ತನ್ನ ಕಷ್ಟ ಸ್ವಲ್ಪ ತಪ್ಪೀತು—ಎಂದು ಅವನ ಯೋಚನೆ.

ಹಾಗೂ ಹೀಗೂ ಒಂದು ತಿಂಗಳು ಕಳೆಯಿತು ; ಆಗ ಅವನಿಗೆ ಮಲೇರಿಯಾ ಜ್ವರ ಬಂದು, ಹಾಸಿಗೆ ಹಿಡಿದು ಮಲಗಿಬಿಟ್ಟ. ದಿನ ಬಿಟ್ಟು ದಿನ ಜ್ವರ ಬರುವುದಕ್ಕೆ ಆರಂಭವಾಗಿ ದೇಹದಲ್ಲಿದ್ದ ಬಲವನ್ನೆಲ್ಲಾ ಹಿಂಡಿ ತೆಗೆದುಬಿಟ್ಟಿತು. ಏಳುವುದಕ್ಕೆ ತ್ರಾಣವಿಲ್ಲ. ಆ ಕಾಲದಲ್ಲಿ ಅವನ ಸ್ನೇಹಿತ ಕೃಷ್ಣಮೂರ್ತಿ ಎಂಬ ಹುಡುಗ ನಿತ್ಯವೂ ತನ್ನ ಮನೆಯಿಂದ ಗಂಜಿ, ಹಾಲು—ಎಲ್ಲಾ ತಂದುಕೊಡುತ್ತಿದ್ದ. ಯಾರೋ ಪಂಡಿತರಿಗೆ ದಮ್ಮಯ್ಯಗುಡ್ಡೆ ಹಾಕಿ ಔಷಧಿಗೆ ಏರ್ಪಾಡು ಮಾಡಿದ. ಆದರೂ ಮಾಧುವಿಗೆ ಒಂದು ಕಡೆ ಜ್ವರದ ತಾಪ, ಒಂದು ಕಡೆ ಪರೀಕ್ಷೆಯ ಯೋಚನೆ ; ಇವೆರಡೂ ಸೇರಿ ಅವನ ಮನಸ್ಸಿ

ನಲ್ಲಿ ಶಾಂತಿಯಿಲ್ಲದ ಹಾಗೆ ಮಾಡಿದುವು. ಆದರೂ ಅವನು ತನ್ನ ಕಾಯಿಲೆಯ ಸಮಾಚಾರವನ್ನು ಯಾರಿಗೂ ತಿಳಿಸಲಿಲ್ಲ. ತಿಳಿಸುವುದಕ್ಕೆ ಆಗಲೂ ಇಲ್ಲ—ಯಾರೂ ಇರಲೂ ಇಲ್ಲ. ಇದ್ದ ಕೃಷ್ಣಮೂರ್ತಿಯೊಬ್ಬನು ನೆರವಾಗಿ ಬಂದ. ತಂದೆತಾಯಿಗಳು ಗಾಬರಿಪಟ್ಟಾರೆಂದು ಅವರಿಗೆ ಬರೆಯಲಿಲ್ಲ. ಆದರೆ ತಂದೆ ತಾಯಿಗಳಿಗಿಂತ ಹೆಚ್ಚಾಗಿ ನಾಗೇಶರಾಯರಿಗೂ ಶಾರದಮ್ಮನವರಿಗೂ ಕಳವಳಕ್ಕೆ ಆರಂಭವಾಯಿತು. " ಪಾಪ, ಮಾಧು ಸ್ವಸ್ಥವಾಗಿದಾನೆಯೋ ಇಲ್ಲವೋಂದ್ರೆ! ಆಗಲೇ ಎಂಟು-ಹತ್ತು ದಿನವಾಯಿತು ಭಿಕ್ಷಾನ್ನಕ್ಕೆ ಬಂದು. ಪರೀಕ್ಷೆ ಬೇರೆ ಹತ್ತಿರವಾಯಿತು " ಎಂದು ಶಾರದಮ್ಮನವರು ಗಂಡನ ಕೈಲಿ ಪ್ರಸ್ತಾಪವನ್ನೆತ್ತಿದರು.

ನಾಗೇಶರಾಯರು ಮಾಧುವನ್ನು ನೋಡಿಕೊಂಡು ಬರುವುದಕ್ಕೆ ಅವನಿದ್ದ ಕೊಠಡಿಗೆ ಹೋದರು. ಕೊಠಡಿಯ ಬಾಗಿಲು ಓರೆಯಾಗಿತ್ತು. ಒಳಗೆ ಮಾಧು ಹಾಸಿಗೆಯ ಮೇಲೆ ಮಲಗಿದ್ದ. ನಾಗೇಶರಾಯರು ಹೊರಗೇ ನಿಂತುಕೊಂಡು, " ಮಾಧೂ ! " ಎಂದು ಕೂಗಿದರು. ಮಾಧು ಮಲಗಿಕೊಂಡೇ " ಯಾರು ? " ಎಂದು ಕೇಳಿದ.

ರಾಯರು, " ನಾನು " ಎಂದರು.

ಈಗ ಧ್ವನಿಯಿಂದ ನಾಗೇಶರಾಯರೆಂದು ತಿಳಿದುಕೊಂಡು, ಕಷ್ಟದಿಂದ ಎದ್ದು ಬಾಗಿಲು ತೆಗೆದ. ಅವರು ಒಳಗೆ ಬಂದು,

" ಏನಯ್ಯಾ, ಮಲಗಿಬಿಟ್ಟಿದ್ದೀಯೆ ! ಏನು ಕಾಯಿಲೆ ? ಹ್ಯಾಗಿದೆ ಈಗ ? ನನಗೆ ಹೇಳಿಕಳುಹಿಸಬಾರದಿತ್ತೇ ? " ಎಂದರು.

" ಚಳಿಜ್ವರ ಬರುತ್ತ ಇತ್ತು ; ಈಗ ಸ್ವಲ್ಪ ಇಳಿದಿದೆ. ಬಹಳ ನಿಶ್ಶಕ್ತಿ."

" ನನಗೇಕೆ ಹೇಳಿಕಳುಹಿಸಲಿಲ್ಲ ? "

" ಅಯ್ಯೊ, ಸುಮ್ಮನೆ ತೊಂದರೆ ! "

" ಮತ್ತೆ, ಔಷಧಿ ? ಪಥ್ಯ ? "

" ನನ್ನ ಸ್ನೇಹಿತ ಕೃಷ್ಣಮೂರ್ತಿ ಎಂತ ಇದಾನೆ ; ಅವನು ಸ್ವಲ್ಪ ಗಂಜಿ ಹಾಲು ತಂದುಕೊಡುತ್ತಾ ಇದಾನೆ."

" ಆಗಲಿ ; ಗಾಳಿಗೆ ಮೈ ಬಿಟ್ಟುಕೊಂಡಿರಬೇಡ ; ಹೊದ್ದುಕೊಂಡು ಮಲಗಿಕೊ. ಇಲ್ಲದಿದ್ದರೆ ನಮ್ಮ ಮನೆಗೇ ಬಂದುಬಿಡು, ಗಾಡಿ ತರುತ್ತೇನೆ."

" ಇಲ್ಲ, ಇಲ್ಲೇ ಇರುತ್ತೇನೆ; ಇವತ್ತು ಸ್ವಲ್ಪ ವಾಸಿ."

ನಾಗೇಶರಾಯರು ಅಲ್ಲಿಂದ ಮನೆಗೆ ಬಂದವರು ಡಾಕ್ಟರ್ ವೆಂಕಟರಾಯರಿಗೆ ಒಂದು ಚೀಟಿ ಬರೆದು ಕಳುಹಿಸಿದರು. ಅದನ್ನು ನೋಡಿ ಡಾಕ್ಟರು ಮಾಧುವಿನ ಕೊಠಡಿಗೆ ಹೋಗಿ, ಅವನ ದೇಹಸ್ಥಿತಿಯನ್ನು ಪರೀಕ್ಷಿಸಿ, ಔಷಧಿ ಕಳುಹಿಸಿಕೊಟ್ಟರು. ನಾಗೇಶರಾಯರ ಮನೆಯಿಂದ ಗಂಜಿ, ಬಿಸಿನೀರು, ಕಾಫಿ ಇವೂ ಬಂದವು. ನಿತ್ಯವೂ ರಾಯರೂ ಡಾಕ್ಟರೂ ಬಂದು ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ' ಅಯ್ಯೋ, ಈ ಭಿಕಾರಿಗೆ ಇವರು ಇಷ್ಟು ಒದ್ದುಕೊಳ್ಳುತ್ತಾರಲ್ಲಾ ! ' ಎಂದು ಮಾಧುವಿಗೆ ಬಹಳ ಸಂಕೋಚ ; ಅಂತೂ ಸುಮಾರು ಒಂದು ವಾರದಲ್ಲಿ ರೋಗವು ಗುಣಮುಖವಾಯಿತು.

ಒಂದು ತಿಂಗಳು ಕಳೆಯಿತು ; ಪರೀಕ್ಷೆ ಬಂತು ; ಅದೂ ಕಳೆಯಿತು. ಪ್ಯಾಸೂ ಆಯಿತು. ಅದನ್ನು ಕೇಳಿ ಅವನಿಗೆ ತಲೆಯ ಮೇಲಿನಿಂದ ಒಂದು ದೊಡ್ಡ ಬೆಟ್ಟವನ್ನು ಇಳಿಸಿದಂತಾಯಿತು. ಕೂಡಲೆ ಕೊಠಡಿಗೆ ಓಡಿಬಂದು, ತಾನು ಪೂಜಿಸುತ್ತಿದ್ದ ಸರಸ್ವತೀ ಪಠದ ಮುಂದೆ ನಮಸ್ಕಾರಮಾಡಿ " ತಾಯೀ, ನಿನ್ನ ಪ್ರಸಾದ ! " ಎಂದ.

ಮುಂದಿನ ತಿಂಗಳಿನ ಗೆಜೆಟ್ಟಿನಲ್ಲಿ, ಅವನು ಸಂಸ್ಥಾನದಲ್ಲಿ ಎರಡನೆಯವನಾಗಿ ಪ್ಯಾಸು ಮಾಡಿದ್ದಂತೆ ಪ್ರಕಟವಾಗಿತ್ತು. ಇದನ್ನು ನೋಡಿ ಅವನಿಗೆ ಆದ ಸಂತೋಷವು ವಿದ್ಯಾರ್ಥಿಗಳಾಗಿದ್ದವರಿಗೇ ಗೊತ್ತು. ತಾನು ಪಟ್ಟ ಶ್ರಮಕ್ಕೆ ತಕ್ಕ ಫಲ ದೊರೆಯಿತೆಂದು ಅವನಿಗೆ ಅಷ್ಟು ಸಂತೋಷವಿಲ್ಲ ; ಮುಂದೆ ತನಗೆ ತಿಂಗಳಿಗೆ ಇಪ್ಪತ್ತು ರೂಪಾಯಿ ವಿದ್ಯಾರ್ಥಿವೇತನ ಬರುವುದು ; ಅದರಲ್ಲಿ ಹತ್ತು ರೂಪಾಯನ್ನಾದರೂ ತಮ್ಮ ತಾಯಿತಂದೆಗಳಿಗೆ ಕಳುಹಿಸಬಹುದು—ಎಂದು. ವೇತನವೂ ಬಂತು. ಜೊತೆಗೆ ಎಲ್ಲಿಯೋ ಒಂದು ಕಡೆ ಪಾಠ ಹೇಳುತ್ತ, ತಿಂಗಳಿಗೆ ಐದಾರು ರೂಪಾಯಿ ಸಂಪಾದಿಸಿ, ಅದನ್ನು ಪುಸ್ತಕ ಮುಂತಾದ ಹೆಚ್ಚು ಖರ್ಚುಗಳಿಗೆ ಉಪಯೋಗಿಸುತ್ತಿದ್ದ. ಭಿಕ್ಷಾನ್ನವು ತಪ್ಪಿತು.

ಆದರೆ ನಾಗೇಶರಾಯರ ಮನೆಗೆ ಮಾತ್ರ ಹೋಗಿಬರುತ್ತಿದ್ದ. ಹಬ್ಬ ಹರಿದಿನಗಳಲ್ಲಿ ಊಟಕ್ಕೆ ಅಥವಾ ತಿಂಡಿಗೆ ಹೋಗುವುದು ಪೂರ್ವದಂತೆ ನಡೆದುಕೊಂಡು ಬರುತ್ತಿತ್ತು. ಹಿಂದೆ ಇದ್ದ ಕಷ್ಟವೂ ಈಗ ಇಲ್ಲ. ಆದ್ದರಿಂದ ಮತ್ತೆ ಮೂರು ವರ್ಷಗಳು ಅನಾಯಾಸವಾಗಿ ಕಳೆದುಹೋದುವು. ಬಿ.ಎ. ಪರೀಕ್ಷೆಯೂ

ಆಯಿತು. ಅದರಲ್ಲಿ ಮಾಧು ಮೊದಲನೆಯ ತರಗತಿಯಲ್ಲಿ ತೇರ್ಗಡೆಹೊಂದಿ ಒಂದು ಬಂಗಾರದ ಪದಕವನ್ನು ಸಂಪಾದಿಸಿದ. ಅದನ್ನು ಮೊದಲು ನಾಗೇಶ ರಾಯರಿಗೂ ಶಾರದಮ್ಮನವರಿಗೂ ತೋರಿಸಬೇಕೆಂಬ ಆತುರ; ಪದಕವನ್ನು ಶಾರದಮ್ಮನವರು ಕೈಲಿ ಹಿಡಿದುಕೊಂಡು ತೂಗುತ್ತಾ "ಚೆನ್ನಾಗಿದೆ! ಏನು, ಎರಡು ಸವರನ್ ಇರಬಹುದು?" ಎಂದು ಹೇಳಿ ಹಿಂತಿರುಗಿ ಕೊಟ್ಟು, "ಎಲ್ಲಿ ಯಾದರೂ ಚೆನ್ನಾಗಿರಪ್ಪ! ನಮ್ಮ ಕಣ್ಣುಮುಂದಿನ ಹುಡುಗ, ಎಷ್ಟೋ ಕಷ್ಟ ಪಟ್ಟಿದ್ದೀಯೆ!" ಎಂದು ಹರಸಿದರು. ಮನಸ್ಸಿನಲ್ಲಿ "ಅವನ ತಾಯಿತಂದೆಗಳ ಪುಣ್ಯವೇ ಪುಣ್ಯ" ಎಂದುಕೊಂಡರು. ಮಾಧುವಿಗೆ ಅವರ ಅಂತಃಕರಣವನ್ನು ನೋಡಿ ಕಣ್ಣುತುಂಬ ನೀರು ತುಂಬಿತು. "ನಿಮ್ಮ ಆಶೀರ್ವಾದ, ಅಮ್ಮ!" ಎಂದು ನಮಸ್ಕಾರ ಮಾಡಿದ.

ಸೀತೆ ತಾಯಿಯ ಬಳಿಯೇ ಅವರ ಸೆರಗನ್ನು ಹಿಡಿದುಕೊಂಡು ನಿಂತು ನೋಡುತ್ತಿದ್ದಳು. ತಾಯಿಯು ಪದಕವನ್ನು ಹಿಂತಿರುಗಿ ಕೊಟ್ಟಮೇಲೆ "ಎಲ್ಲಿ ಮಾಧು, ನೋಡೋಣ" ಎಂದು ತಾನು ಅದನ್ನು ತೆಗೆದುಕೊಂಡು ಅಂಗೈ ಯಲ್ಲಿಟ್ಟುಕೊಂಡು ನೋಡಿದಳು. ಥಳಥಳನೆ ಹೊಳೆಯುತ್ತಿತ್ತು. ಅದನ್ನು ನೋಡಿ ಅವಳ ಮುಖವು ಅರಳಿತು. ಮಾಧು ನೋಡಿ, "ಏನು ಸೀತಾ! ನಿನಗೆ ಬೇಕೇನು ಅದು? ನೀನೂ ಬಿ.ಎ., ಪ್ಯಾಸು ಮಾಡು, ನಿನಗೂ ಸಿಗುತ್ತೆ! ಇಲ್ಲದಿದ್ದರೆ, ನಾಳೆ ನಿನ್ನ ಗಂಡ ಬರುತ್ತಾನಲ್ಲ, ಅವನು ತಂದುಕೊಡುತ್ತಾನೆ" ಎಂದ.

೩

ಮಾಧೂಗೆ ಈಗ ದೊಡ್ಡ ಕೆಲಸ; ದೊಡ್ಡ ಸಂಬಳ; ದೊಡ್ಡ ಮನೆ. ಮನೆಯಲ್ಲಿ ಕೈಗೊಬ್ಬರು ಕಾಲಿಗೊಬ್ಬರು ಆಳುಗಳು. ತಾಯಿತಂದೆಗಳ ಯೋಗ ಕ್ಷೇಮವನ್ನು ನೋಡಿಕೊಳ್ಳುವುದಕ್ಕಾಗಿಯೇ ಒಬ್ಬ ಅಡಿಗೆಯ ಪರಿಚಾರಕನೂ ಆಳೂ ಇದ್ದರು. ಅವರು ಹಳ್ಳಿಗೆ ಹೋಗಬೇಕೆಂದರೆ, ಅನುಕೂಲವಾಗುವಂತೆ, ಮಾಧು ಒಂದು ಗಾಡಿಯನ್ನೂ ಒಂದು ಜೊತೆ ಎತ್ತನ್ನೂ ಕೊಂಡುಕೊಂಡಿದ್ದ. ಯಾವ ವಿಷಯದಲ್ಲಿಯೂ ಅವರಿಗೆ ವ್ಯಥೆಯಾಗಬಾರದೆಂಬುದೇ ಅವನ ಆಸೆ. ಅದಕ್ಕಾಗಿ ಅವನು ಎಷ್ಟೆಷ್ಟೋ ತೊಂದರೆಪಟ್ಟುಕೊಳ್ಳುತ್ತಿದ್ದ. ಆದರೆ ಅವರು

ಒಂದು ಸಾರಿ ಪ್ರೇಮಪುರಸ್ಸರವಾಗಿ "ಮಾಧೂ!" ಎಂದು ಕರೆದರೆ, ಅವನು ಪಟ್ಟ ಶ್ರಮಕ್ಕೆಲ್ಲಾ ಫಲ ಬಂದಂತಾಗುತ್ತಿತ್ತು.

ತನಗೆ ಕೆಲಸವಾದ ಮೇಲೆ ಒಂದು ದಿನ ಮಾಧು ನಾಗೇಶರಾಯರ ಮನೆಗೆ ಹೋದ. ಆಗ ಮಧ್ಯಾಹ್ನ. ನಾಗೇಶರಾಯರೂ ಶಾರದಾಬಾಯಿಯೂ ಮಾತನಾಡುತ್ತ ಕುಳಿತಿದ್ದರು. ಮಾಧು ಇಬ್ಬರಿಗೂ ನಮಸ್ಕಾರಮಾಡಿದ. ಅವರು ಅವನನ್ನು ಹರಸಿ, ಕೆಲಸವಾದದ್ದನ್ನು ಕೇಳಿ ಸಂತೋಷಪಟ್ಟರು. ಶಾರದಾಬಾಯಿ "ಏನಪ್ಪ, ಮಾಧು! ಈಗ ನೀನು ದೊಡ್ಡವನಾದೆ; ದೊಡ್ಡ ಕೆಲಸಕ್ಕೆ ಬಂದೆ; ಕೈತುಂಬ ಸಂಬಳ ತರುತ್ತಿದ್ದೀಯೆ; ಇನ್ನುಮೇಲೆ ನಿನ್ನನ್ನು 'ಮಾಧವರಾಯರೇ'—ಎಂದು ಕರೆಯಬೇಕು ಅಂತ ಕಾಣುತ್ತದೆ—ಅಲ್ಲವೆ?" ಎಂದರು.

"ನಾನು ದೊಡ್ಡವನಾದರೂ ನಿಮಗೆ ಚಿಕ್ಕವನೇ; 'ಮಾಧು'ವೇ! ನೀವು ಸಾಕಿ ಸಲಹಿದ ಹುಡುಗ 'ರಾಯರು' ಹೇಗಾದನು?"

"ನಾವು ಸಾಕಿ ಸಲಹಿದ್ದು ಅಷ್ಟರಲ್ಲೇ ಇದೆ; ಆದರೆ ನೀನು ಮದುವೆಯಾಗಿ ನಿನಗೆ ಒಬ್ಬ ಹುಡುಗನಾಗುವವರೆಗೂ ನೀನು ಹುಡುಗನೇ; ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ ಬಂದು ಆಕ್ಷೇಪಣೆಮಾಡಿದರೆ, ಆಮೇಲೆ ಬೇಕಾದರೆ ಬಹುವಚನದಲ್ಲಿ ಕರೆಯೋಣವಂತೆ!"

ಮಾಧೂಗೆ ಈ ಮಾತನ್ನು ಕೇಳಿ ಏನೋ ಸಂಕೋಚವಾಗಿ ಸ್ವಲ್ಪ ತಲೆ ಬಗ್ಗಿಸಿಕೊಂಡ. ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಇದ್ದಮೇಲೆ ಮಾಧು ತಟ್ಟನೆ, "ಸೀತೆಯೆಲ್ಲಿ? ಕಾಣಿಸಲಿಲ್ಲ!" ಎಂದ. ಶಾರದಾಬಾಯಿ "ಎಲ್ಲೋ ಒಳಗಿರಬಹುದು" ಎಂದು, "ಸೀತಾ, ಸೀತಾ!" ಎಂದು ಕೂಗಿದರು. ಕೂಡಲೆ ಒಳಗೆ "ಧಡ ಧಡ!" ಎಂದು ಸದ್ದಾಯಿತು. ಕೈಬಳೆಗಳ ಶಬ್ದ; ಕಾಲುರುಳಿಯ ಶಬ್ದ. ಸೀತೆ ಓಡಿಬರುತ್ತಿದ್ದಳು. ಬಂದು ಬಾಗಿಲಲ್ಲಿ ತಟ್ಟನೆ ನಿಂತುಬಿಟ್ಟಳು. ತಾಯಿಯೊಬ್ಬರೇ ಇದ್ದಾರೆಂದು ಭಾವಿಸಿದ್ದಳು. ಆದರೆ ಬಾಗಿಲ ಹತ್ತಿರಕ್ಕೆ ಬಂದ ಕೂಡಲೆ, ಸರಿಗೆರುಮಾಲು ಹಾಕಿಕೊಂಡಿದ್ದ ದೊಡ್ಡ ಮನುಷ್ಯರೊಬ್ಬರು ಕಣ್ಣಿಗೆ ಬಿದ್ದರು; ಆದ್ದರಿಂದ ಅವಳು ತಟ್ಟನೆ ಬಾಗಿಲಲ್ಲೇ ನಿಂತಳು. ಸೀತೆ ಅಲ್ಲೇ ನಿಂತಿದ್ದನ್ನು ನೋಡಿ, ಮಾಧು ಅವಳ ಕಡೆ ತಿರುಗಿ ನಗುತ್ತಾ, "ಸೀತಾ!" ಎಂದು ಕರೆದ.

ಸೀತೆ ಮಾತಾಡಲಿಲ್ಲ.

ಶಾರದಾಬಾಯಿ, " ಮಾತಾಡೇ, ಸೀತಾ ! " ಎಂದರು.

ಸೀತೆ ಇನ್ನೂ ಹಿಂದಕ್ಕೆ ಸರಿದಳು ; ಮಾತ್ರನಾಡಲಿಲ್ಲ.

ಮಾಧು ಪುನಃ " ಸೀತಾ ! " ಎಂದು ಕೂಗಿದ. ಉತ್ತರವಿಲ್ಲ.

ಮಾಧು : " ಯಾಕೆ ಸೀತಾ, ಮಾತೇ ಇಲ್ಲ? ನಾಚಿಕೆ ಬಂದು ಬಿಟ್ಟಿತೇನು ಆಗಲೇ ? ಹೋಗಲಿ, ಅಲ್ಲಿಂದಲೇ ಮಾತನಾಡು."

ಮಾತಿಲ್ಲ.

" ಹೋಗಲಿ ಬಿಡಮ್ಮ ! ನಿನಗೆ ಜಂಭ ಬಂದಿದೆ. ಬಡವರನ್ನು ಕಂಡರೆ ನಿನಗೆ ಉದಾಸೀನ ! ಯಾರಾದರೂ ಐಶ್ವರ್ಯವಂತ ಗಂಡನನ್ನು ಗೊತ್ತು ಮಾಡಿಕೊಂಡು ಬಂದಿದ್ದಾರೊ ? "

ಅದಕ್ಕೂ ಮಾತಿಲ್ಲ ! ಮಾತಿಗೆ ಬದಲಾಗಿ ಸೀತೆ ಪುನಃ ಒಳಕ್ಕೆ ಹೊರಟು ಹೋದಳು. ಮಾಧು ಇನ್ನೊಂದು ಘಳಿಗೆ ಮಾತ್ರ ಅಲ್ಲಿಯೇ ಮಾತಾಡುತ್ತಿದ್ದ. ಅವರ ಮನೆಯಲ್ಲಿಯೇ ಕಾಫಿ ತಿಂಡಿ ಎಲ್ಲಾ ಆಯಿತು.

ಮಾಧು ಹೊರಟುಹೋದಮೇಲೆ ಗಂಡಹೆಂಡಿರು ಏನೇನೋ ಮಾತನಾಡು ತ್ತಿದ್ದರು. ಮಾಧುವಿನ ಮಾತೇ ಹೆಚ್ಚು. ಒಬ್ಬರು " ಎಂಥ ಬುದ್ಧಿವಂತ ! " ಎಂದರು ; ಮತ್ತೊಬ್ಬರು " ಅಷ್ಟು ದೊಡ್ಡ ಸಂಬಳ ತಂದರೂ ಒಂದು ಚೂರೂ ಜಂಭವಿಲ್ಲ " ಎಂದರು. ಅಷ್ಟು ಹೊತ್ತಿಗೆ ಗಡಿಯಾರದಲ್ಲಿ ' ಡಿಂಗ್, ಡಿಂಗ್ ' ಎಂದು ಗಂಟೆ ಹೊಡೆಯಿತು. ಕೂಡಲೆ ಶಾರದಮ್ಮನವರು ಗಂಡನನ್ನು ಕುರಿತು ಥಟ್ಟನೆ, " ಈಗ ನನ್ನ ಮನಸ್ಸಿನಲ್ಲೇನಿತ್ತು ಬಲ್ಲಿರಾ ? " ಎಂದು ಆಶ್ಚರ್ಯದಿಂದ ಕೇಳಿದರು.

" ಹೆಂಗಸರಿಗಿನ್ನೇನು ಯೋಚನೆ ? ಮಾಧೂ ಮದುವೆ ಯಾವಾಗ ಎಂತ ಯೋಚಿಸಿರಬಹುದು."

" ಹೌದೂ ಅಂದ್ರೆ ! ನಿಜವಾಗಿಯೂ ಅದೇ !—ಅದೇ ! ನಿಮಗೆ ಹ್ಯಾಗೆ ಗೊತ್ತಾಯಿತು ? ನಿಜವಾಗಿಯೂ, ಮಾಧೂಗೆ ನಮ್ಮ ಸೀತೂನ ಕೊಟ್ಟು ಯಾಕೆ ಮದುವೆ ಮಾಡಿಬಿಡಬಾರದು—ಎಂದು ಯೋಚನೆ ಮಾಡು ತ್ತಿದ್ದೆ ; ಅಷ್ಟು ಹೊತ್ತಿಗೆ ಸರಿಯಾಗಿ ಗಂಟೆ ಹೊಡೆಯಿತು ! "

ನಾಗೇಶರಾಯರು ನಕ್ಕುಬಿಟ್ಟು,

"ಇನ್ನೇನು ಮದುವೆಯಾದ ಹಾಗೇ—ಹಾಗಾದರೆ?" ಎಂದರು.

"ಹಾಸ್ಯ ಮಾಡಬೇಡೀಂದ್ರೆ; ವಿಚಾರಿಸಿ."

ಕೂಡಲೇ ಇಬ್ಬರೂ ಎದ್ದರು. ತಾಯಿಯ ಮನಸ್ಸಿನ ತುಂಬ ಮಗಳ ಮದುವೆಯ ಯೋಚನೆಯೇ. ಆಕೆ ಒಳಕ್ಕೆ ಹೋಗಲು, ಸೀತೆ ತಾಯಿಯನ್ನು ನೋಡಿ, "ಅಮ್ಮಾ ಬಾರೆ, ಕವಡೆ ಆಡೋಣ" ಎಂದಳು. ಅದಕ್ಕೆ ಆಕೆ, "ಹ್ನೂ ಕಣೇ! ನನಗೆ ಬೇರೆ ಕೆಲಸವೇ ಇಲ್ಲ! ನಾಳೇ ಬರ್‍ತಾನಲ್ಲಾ ನಿನ್ನ ಗಂಡ!—ಅವನ ಕೈಲಿ ಬೇಕಾದರೆ ಆಡು!" ಎಂದರು. ಅಷ್ಟಕ್ಕೆ ಸುಮ್ಮನಾಗಬೇಕೊ ಇಲ್ಲವೋ? ತುಂಟ ಹುಡುಗಿ!—"ಆಡೇ ಆಡ್ತೀನಿ, ಬಿಡ್ತೀನೇನು?" ಎಂದುಬಿಟ್ಟಳು. ತಾಯಿಗೆ ಆಶ್ಚರ್ಯವಾಯಿತು. "ಅಲ್ಲ ಕಣೇ, ಇಷ್ಟು ಮಾತಾಡುವವಳಿಗೆ, ಪಾಪ, ಮಾಧು 'ಸೀತಾ, ಸೀತಾ' ಎಂದು ಕೂಗಿದಾಗ ಎಲ್ಲಿ ಹೋಗಿತ್ತೇ ಬಾಯಿ? ಅಷ್ಟು ಕೂಗಿದರೂ ಮಾತೇ ಆಡಬಾರದೇ?" ಎಂದರು. ಸೀತೆ "ಹೋಗೇ!" ಎಂದುಬಿಟ್ಟಳು. ಮುಖ ಕೆಂಪೇರಿತು. ಮಾತು ಮರೆಸುವುದಕ್ಕಾಗಿ, "ಅಮ್ಮಾ, ಈ ಕವಡೆ ಚೆನ್ನಾಗಿಲ್ಲ; ಬೇರೆ ಇದ್ದರೆ ಕೊಡೇ" ಎಂದಳು. ಸಫಲವಾಗಲಿಲ್ಲ. ಆಕೆ "ಇರಲಿ, ನಾಳೆ ನಿನ್ನನ್ನ ಮಾಧೂಗೇ ಕೊಟ್ಟು ಮದುವೆಮಾಡುವುದು! ಆಗ?—ಮಾತಾಡ್ತೀಯೋ ಬಿಡ್ತೀಯೋ?" ಎಂದು ಹಾಸ್ಯಮಾಡಿದರು.

ಸೀತೆ: "ನೀನು ಅಪ್ಪನ್ನ ಮದುವೆ ಮಾಡಿಕೊಂಡಾಗ ಏನು ಮಾಡಿದ್ದೆ? ಅವನ ಕೂಡ ಮಾತಾಡಿದ್ದೆಯೋ ಬಿಟ್ಟಿದ್ದೆಯೋ?"

ತಾಯಿ ಮಗಳ ಮಾತಿಗೆ ಬೆರಗಾಗಿ "ಅಬ್ಬಬ್ಬ! ಗಂಡುಬೀರಿ! ನಿನಗ್ಯಾರೆ ಇದನ್ನೆಲ್ಲಾ ಹೇಳಿಕೊಟ್ಟವರು?" ಎಂದು ಹೇಳಿ ನಕ್ಕುಬಿಟ್ಟರು.

೪

ಇಷ್ಟೆಲ್ಲಾ ಆದದ್ದು ಮದುವೆಯಾಗದೆ ಇರುತ್ತದೆಯೆ? ಮದುವೆಯೂ ಆಯಿತು. ಮದುವೆಯ ವರ್ಣನೆ ಅನಾವಶ್ಯಕ; ಏಕೇಂದರೆ ಮದುವೆಯನ್ನು ನೋಡದವರಾರು? ಆದರೆ ಮಾಧುವಿನ ಮದುವೆಯಲ್ಲಿ ಒಂದು ವಿಶೇಷ ಸಂಗತಿ ಮಾತ್ರ ನಡೆಯಿತು; ಅದನ್ನು ಇಲ್ಲಿ ತಿಳಿಸಬೇಕು. ಅವನು ಹುಡುಗಿಗೆ ಸೀರೆ ಕುಪ್ಪಸ ಒಡವೆ ವಸ್ತು ಇವನ್ನೆಲ್ಲಾ ತಕ್ಕಮಟ್ಟಿಗೆ ಮಾಡಿಸಿಕೊಟ್ಟಿದ್ದ.

ಅವುಗಳಲ್ಲಿ ತಾನು ಬಹುಮಾನವಾಗಿ ಪಡೆದ ಪದಕ ಮುಖ್ಯವಾಗಿತ್ತು. ಅದಕ್ಕೆ ಅವನು ಒಂದು ಚಿನ್ನದ ಸರವನ್ನು ಮಾಡಿಸಿದ್ದ. ಉರುಟಣೆಯ ರಾತ್ರಿ, ತಾನೂ ಸೀತೆಯೂ ಉಯ್ಯಾಲೆಯ ಮೇಲೆ ಕೂತು ಹೂವಿನ ಚಂಡಾಡುತ್ತ ಇದ್ದಾಗ, ಅವನು ಆ ಪದಕವನ್ನು ಸೀತೆಯ ಕೊರಳಿಗೆ ಹಾಕಿಬಿಟ್ಟ! ಅಲ್ಲಿದ್ದ ಹೆಂಗಸರ ಗುಂಪಿಗೆ ಗುಂಪೇ ನಕ್ಕುಬಿಟ್ಟಿತು. ಅವಳು ಮೊದಲೇ ತಲೆಯನ್ನು ಬಗ್ಗಿಸಿ ಕೊಂಡು ಕುಳಿತಿದ್ದಳು. ಅದು ಈಗ ನಾಚಿಕೆಯಿಂದ ಇನ್ನೂ ಬಾಗಿತು. ಅವಳು ನಗುತ್ತ ಆ ಪದಕವನ್ನು ಕೈಯಲ್ಲಿ ಹಿಡಿದು ನೋಡಿದಳು. ಅಲ್ಲಿದ್ದವರಲ್ಲಿ ಒಬ್ಬರು "ಏನೇ 'ದಾನಾ ಕೊಟ್ಟ ಎಮ್ಮೇನ ಹಲ್ಲು ಹಿಡಿದು ನೋಡಿದರು' ಅಂದಹಾಗೆ!" ಎಂದು ಕೇಳಿದರು. ಅವಳು ಸುಮ್ಮನೆ ಪದಕವನ್ನು ಕೈಯಲ್ಲಿ ಹಿಡಿದುಕೊಂಡಿದ್ದಳು. ಒಂದು ಕಡೆ ಇಂಗ್ಲೀಷಿನಲ್ಲಿ ಏನೇನೋ ಕೊರೆದಿತ್ತು; ಮತ್ತೊಂದು ಕಡೆ 'ಶ್ರೀ ಸೀತಾದೇವಿ' ಎಂದು ಕೊರೆದಿತ್ತು. ಮಾಧು ಸ್ವಲ್ಪ ದಿನದ ಕೆಳಗೆ 'ನಿನ್ನ ಗಂಡ ಪದಕವನ್ನು ತಂದುಕೊಡುತ್ತಾನೆ' ಎಂದು ಹೇಳಿದ ಮಾತು ಈಗ ಅವಳಿಗೆ ಜ್ಞಾಪಕಕ್ಕೆ ಬಂದಿತೆಂದು ತೋರುತ್ತದೆ.

ಇದೆಲ್ಲಾ ಆಗಿ ಈಗ ಐದಾರು ವರ್ಷಗಳಾಗಿ ಹೋಗಿವೆ. ಈಗ ಸೀತೆ ಗಂಡನ ಮನೆಯಲ್ಲಿ ಸಂಸಾರ ಮಾಡಿಕೊಂಡಿದ್ದಾಳೆ. ಮನೆಯಲ್ಲಿ ಅಡಿಗೆ ಯವನಿಲ್ಲ. ಅವಳಿಗೆ ಅಡಿಗೆ ಮಾಡಿ ಬಡಿಸುವುದರಲ್ಲಿ ಬಹಳ ಆಸಕ್ತಿ. ಮಾಧು ವಿಗೂ ಅವನ ತಾಯಿತಂದೆಗಳಿಗೂ ಅವಳು ಅಡಿಗೆಮಾಡಿ ಬಡಿಸಿದರೇ ತೃಪ್ತಿ. ಅವರು ಅವಳಿಗೆ ತಾಯಿತಂದೆಗಳಿಗಿಂತಲೂ ಹೆಚ್ಚಾಗಿದ್ದರು. ಹೀಗೆ ಅವಳ ಸುಖಕ್ಕೆ ಯಾವ ಅಂಶದಲ್ಲಿಯೂ ಕುಂದು ಇರಲಿಲ್ಲ. ಗಂಡನು ಅವಳಲ್ಲಿ ಪೂರ್ಣ ಪ್ರೇಮವನ್ನಿಟ್ಟಿದ್ದ. ಆ ಪ್ರೇಮವೃಕ್ಷವು ಬೇಗನೆ ಒಂದು ಫಲವನ್ನೂ ಬಿಟ್ಟಿತು. ಅದರ ಹೆಸರು 'ಕೃಷ್ಣಮೂರ್ತಿ' (ಉರುಫ್—ಮೂರ್ತಿ, ರಾಜ, ದೊರೆ ಇತ್ಯಾದಿ.)

ಮಾಧುವಿನ—ಮಾಧವರಾಯರ—ಮನೆಯಲ್ಲಿ ಈಗ ಮೂರು ನಾಲ್ಕು ಜನ ವಿದ್ಯಾರ್ಥಿಗಳು ಊಟಮಾಡಿಕೊಂಡಿದ್ದರು. ಅವರು ತಮ್ಮ ಮನೆಯಲ್ಲಿ ಊಟಮಾಡಿಕೊಂಡಿದ್ದಾರೆಂದು—ಸೀತಮ್ಮನಾಗಲಿ ಮಾಧವರಾಯನಾಗಲಿ— ಅವರಿಗೆ ಯಾವ ಕೆಲಸವನ್ನೂ ಹೇಳುತ್ತಿರಲಿಲ್ಲ. ಅವರಿವರ ಮನೆಯಲ್ಲಿ ಊಟಮಾಡಿಕೊಂಡಿರುವ ಕೆಲವು ಹುಡುಗರನ್ನು ನಾವು ನೋಡಿದ್ದೇವೆ.

ಹೊರಗಿನವರಿಗೆ, ಅವರು ಎಷ್ಟೋ ಸುಖವಾಗಿದ್ದಾರೆಂದೂ, ಭಿಕ್ಷಾನ್ನ–ವಾರದೂಟಗಳ ಪರದಾಟ ಅವರಿಗಿಲ್ಲವೆಂದೂ ಭಾವನೆ! ಮನೆಯ ಯಜಮಾನರು ತಿಳಿದುಕೊಂಡಿರುವುದೂ ಹಾಗೆಯೇ! ಆದರೆ, ನೂರಕ್ಕೆ ತೊಂಬತ್ತೊಂಬತ್ತು ಕಡೆ, ಹುಡುಗರ ಅನುಭವ ಹಾಗಿರುವುದಿಲ್ಲ. ಏಕೆಂದರೆ, ಮುಂದೆ ತಮ್ಮ ಮಗಳನ್ನೋ, ನಾದಿನಿಯನ್ನೋ, ಭಾವಮೈದುನನ ಮಗಳನ್ನೋ ಕೊಟ್ಟು ಮದುವೆಮಾಡುವ ಅಭಿಸಂಧಿಯಿಟ್ಟುಕೊಂಡು ಅನ್ನದಾನಮಾಡುವ ಪುಣ್ಯವಂತರೇ ಹೆಚ್ಚು ಮಂದಿ! ಇದಲ್ಲದಿದ್ದರೆ, ಆ ಹುಡುಗರಿಗೆ ನಿತ್ಯ ಮಾರ್ಕೆಟ್ಟಿಗೆ ಹೋಗಿಬರುವ ಕೆಲಸವೋ, ಪಂಚೆ ಒಗೆದುಹಾಕುವ ಕೆಲಸವೋ ಇರುತ್ತದೆ. ನಮ್ಮ ಸ್ನೇಹಿತನೊಬ್ಬನಿಗೆ ಹೀಗೆ ಕಾಗದ ಬರೆಯುವ ಕೆಲಸವಿತ್ತು; ಮನೆಯ ಯಜಮಾನರಿಗೆ ಕೈ ನಡುಗುವುದೆಂದು ನೆವ. ಅವರು ಕಾಗದ ಬರೆಸುವುದಕ್ಕೆ ಕೂತರೆ, ಮಧ್ಯೆ ನಾಲ್ಕು ಸಲ ಎದ್ದು ಹೋಗಿ, ಹತ್ತು ಸಲ ಮಾತನಾಡಿ, ಹೇಳಿದ್ದನ್ನೇ ಹೇಳಿ, ಓದಿದ್ದನ್ನೇ ಓದಿಸಿ, ಕೊನೆಗೆ ಮೂರು ಗಂಟೆಯ ಹೊತ್ತಿಗೆ, ಹಾಗೂ ಹೀಗೂ ಮಾಡಿ ಕಾಗದವನ್ನು ಬರೆಸಿ ಮುಗಿಸುವರು. ಹೀಗೆ ವಾರಕ್ಕೆ ಎರಡು ಮೂರು ಕಾಗದಗಳಿದ್ದೇ ಇರುವುವು. ಇದರಂತೆ 'ಸ್ವಲ್ಪ' ಸೌದೆ ಒಡೆದುಹಾಕಿಬಿಡುವುದು, 'ಕೊಂಚ' ಮಗುವನ್ನು ಎತ್ತಿಕೊಳ್ಳುವುದು—ಇಂಥ ಪ್ರಕರಣಗಳೂ ಉಂಟು.

ಮಾಧವರಾಯನ ಮನೆಯಲ್ಲಿದ್ದ ಹುಡುಗರಿಗೆ ಇಂಥ ಕೆಲಸವೊಂದೂ ಇರುತ್ತಿರಲಿಲ್ಲ. ಅವರಿಗೆ ಯಾವ ಕೆಲಸವನ್ನೂ ಹೇಳಕೂಡದೆಂದು ಅವನು ಖಂಡಿತವಾಗಿ ಅಪ್ಪಣೆಮಾಡಿದ್ದ. ಭಿಕ್ಷಾನ್ನದವರು ಯಾರು ಬಂದರೂ 'ಹೋಗು' ಎನ್ನಿಸಿಕೊಳ್ಳುತ್ತಿರಲಿಲ್ಲ; ಇವುಗಳ ಜೊತೆಗೆ ತಿಂಗಳಿಗೆ ಸುಮಾರು ಐವತ್ತು ರೂಪಾಯಿಗಳವರೆಗೂ ಅವರಿಗೆ ನಗದಾಗಿ ಸಹಾಯ ಮಾಡುತ್ತಿದ್ದ. ಯಾರೋ ಬೀದಿಯಲ್ಲಿ ಹೋಗುವವರಿಗಾಗಿ ಇಷ್ಟು ಖರ್ಚಾಗಿಬಿಡುವುದಲ್ಲಾ!—ಎಂದು ಒಂದು ದಿನವಾದರೂ ಅವನಾಗಲಿ ಅವನ ಹೆಂಡತಿಯಾಗಲಿ ಭಾವಿಸಿದವರಲ್ಲ. ಸ್ವಾರ್ಥವನ್ನು ಬಿಟ್ಟು, ನಿಜವಾದ ಧರ್ಮಬುದ್ಧಿಯಿಂದ ಖರ್ಚು ಮಾಡಿದಷ್ಟೂ, ದೇವರು ಹೆಚ್ಚುಹೆಚ್ಚಾಗಿ ಕೊಡುವನೆಂದು ಅವನಿಗೆ ಒಂದು ಗೊಡ್ಡು ನಂಬಿಕೆಯಿತ್ತು. ಅದರಂತೆ, ಅವನಿಗೆ ಪ್ರತಿ ವರ್ಷದಲ್ಲೂ ಯಾವುದಾದರೂ ಒಂದು ವಿಧದಲ್ಲಿ ಒಂದಕ್ಕಿಂತ ಹೆಚ್ಚಾಗಿ ಸಂಪಾದನೆಯಾಗದೆ ಇರುತ್ತಿರಲಿಲ್ಲ. ಕೊನೆಗೆ

ಅವನು ಧರ್ಮಾರ್ಥವಾದ ಒಂದು ವಿದ್ಯಾರ್ಥಿನಿಲಯವನ್ನು ಏರ್ಪಾಡುಮಾಡಿ ಅದನ್ನು ನಡೆಸುತ್ತ ಬಂದ. ಇದು ಬಹಳ ವರ್ಷಗಳಾದಮೇಲೆ ನಡೆದ ಮಾತು. ಇದಕ್ಕೆ ಮುಂಚೆ ಅವನು ಸಂಸಾರ ಹೂಡಿದ ಹೊಸದರಲ್ಲಿ ಒಂದು ಸಂಗತಿ ನಡೆಯಿತು. ಅದರಿಂದ ಅವನ ಮತ್ತು ಸೀತಮ್ಮನ ಮನಸ್ಸು, ಬಡ ವಿದ್ಯಾರ್ಥಿಗಳ ಕಷ್ಟವನ್ನು ನೋಡಿ ಹೇಗೆ ಬೆಣ್ಣೆಯಂತೆ ಕರಗಿ ಹೋಗುತ್ತಿತ್ತೆಂದೂ, ತಮ್ಮ ಸುಖವನ್ನಾದರೂ ಒತ್ತರಿಸಿ, ಹೇಗೆ ಅವರು ಹುಡುಗರ ಸುಖವನ್ನು ನೋಡುತ್ತಿದ್ದರೆಂದೂ ಗೊತ್ತಾಗುತ್ತದೆ.

ಒಂದು ದಿನ ಮಧ್ಯಾಹ್ನಕ್ಕೆ ಸರಿಯಾಗಿ ಮಾಧವರಾಯ ಎಲ್ಲಿಂದಲೋ ತುಂಬ ಆಯಾಸಪಟ್ಟು ಮನೆಗೆ ಬಂದ. ಮೈತುಂಬ ಬೆವರು ಹರಿಯುತ್ತಿತ್ತು. ಸೀತಮ್ಮ ಲಾಮಂಚದ ಬೀಸಣಿಗೆಗೆ ಹೂಜಿಯ ನೀರನ್ನು ಹಾಕಿ ಬೀಸಿಕೊಳ್ಳುವುದಕ್ಕೆ ಕೊಟ್ಟು, ನಿಂಬೆಯ ಹಣ್ಣಿನ ಪಾನಕ ಮಾಡುತ್ತಿದ್ದಳು. ಅಷ್ಟು ಹೊತ್ತಿಗೆ ಸರಿಯಾಗಿ ಒಬ್ಬ ಹುಡುಗ ಹೊರಗೆ “ ಭವತಿ ಭಿಕ್ಷಾಂ ದೇಹಿ ! ” ಎಂದು ಕೂಗಿದ. “ ಹೋಗಿಬಿಟ್ಟು ಬಾಪ್ಪ ” ಎಂದಳು ಸೀತಮ್ಮ. ಅದು ಅವನಿಗೆ ಕೇಳಲಿಲ್ಲವೋ, ಏನೋ, ಪುನಃ “ ಭವತಿ ಭಿಕ್ಷಾಂ ದೇಹಿ ! ! ” ಎಂದ. ಸೀತಮ್ಮ ಸ್ವಲ್ಪ ಬೇಸರಪಟ್ಟುಕೊಂಡು, “ ಕೈಯಲ್ಲಿ ಕೆಲಸವಿದೆ, ಒಂದು ದಿನ ಹೋಗಿ ಬಾ—ಅಂದರೆ ಹೋಗಬಾರದೇನೋ ? ” ಎಂದು ಸ್ವಲ್ಪ ಗದರಿಸಿದಳು. ಗಂಡನು ತುಂಬ ಆಯಾಸಪಟ್ಟು ಬಂದಿರುವಾಗ, ತಾನು ಪಾನಕ ಮಾಡುತ್ತಿರುವುದನ್ನು ಬಿಟ್ಟು ಎದ್ದುಹೋಗಲು ಅವಳಿಗೆ ಮನಸ್ಸು ಬರಲಿಲ್ಲ. ಕೂಡಲೆ ಮಾಧು ಮೆಲ್ಲಗೆ “ ಸೀತಾ ! ” ಎಂದ.

ಸೀತೆ ಕತ್ತೆತ್ತಿ ನೋಡಿದಳು.

“ ಅದನ್ನು ಬಿಟ್ಟಿಡು; ಎದ್ದುಹೋಗಿ ಮೊದಲು ಆ ಹುಡುಗನಿಗೆ ಅನ್ನ ಹಾಕಿಬಿಟ್ಟು ಬಾ ! ಪಾನಕವನ್ನು ನಾನು ಮಾಡಿಕೊಳ್ಳುತ್ತೇನೆ.”

“ ಇಷ್ಟು ಹೊತ್ತಿಗೆ ಆ ಹುಡುಗ ಹೊರಟುಹೋಗಿರಬಹುದು.”

“ ಹೋಗಿ ನೋಡು; ಮಗ್ಗಲು ಮನೆಗೆ ಹೋಗಿದ್ದರೆ ಕರೆ.”

ಸೀತಮ್ಮ ಹೊರಗೆ ಬಂದು ನೋಡಲು ಆ ಹುಡುಗ ಇನ್ನೂ ಅಲ್ಲೇ ನಿಂತಿದ್ದ. ಅವನು ಇನ್ನೂ ಚಿಕ್ಕವನು—ಸುಮಾರು ಹತ್ತು ಹನ್ನೆರಡು ವರ್ಷ ಇರಬಹುದು. ಕೈಯಲ್ಲಿ ಒಂದು ಒಬ್ಬೆಯ ಜೋಳಿಗೆ; ಒಂದು ಸಣ್ಣ ಅಲ್ಯೂ

ಮಿನಿಯಂ ಬಟ್ಟೆಲು; ಒಂದು ಪದರದ, ಒಂದು ಕೊಳೆಯ ಬಟ್ಟೆಯನ್ನು ಉಟ್ಟು ಕೊಂಡಿದ್ದ; ಹೊದೆದುಕೊಂಡಿದ್ದುದೂ ಹಾಗೇ ಇತ್ತು; ತಲೆಕೂದಲು ಒಂದು ಪೊದೆಯಾಗಿಯೂ, ಮುಖವು ಒಣಗಿದ ನಿಂಬೆಕಾಯಿಯಂತೆಯೂ ಇದ್ದುವು. ಅವನು ಅಲ್ಲಿಯೇ ಇದ್ದುದನ್ನು ನೋಡಿ ಸೀತಮ್ಮ ಅನ್ನವನ್ನು ತಂದು ಹಾಕಿದಳು. ಅಷ್ಟು ಹೊತ್ತಿಗೆ ಮಾಧವರಾಯನೂ ಎದ್ದು ಬಂದು ಆ ಹುಡುಗನನ್ನು ನೋಡಿ, "ನಿನ್ನ ಹೆಸರೇನೋ, ಹುಡುಗ?" ಎಂದು ಕೇಳಿದ. "ನನ್ನ ಹೆಸರು ಶಿವು" ಎಂದು ಆ ಹುಡುಗ ಉತ್ತರ ಕೊಟ್ಟ.

ಮಾಧವರಾಯ ಪಾನಕವನ್ನು ಮಾಡಿಕೊಂಡಿರಲಿಲ್ಲವಾದ ಕಾರಣ, ಸೀತಮ್ಮ ಪುನಃ ಬಂದು ಅದನ್ನು ಮಾಡಿ, ಒಂದು ಬೆಳ್ಳಿಯ ಲೋಟಕ್ಕೆ ಹಾಕಿ ಗಂಡನ ಕೈಗೆ ಕೊಡುವುದಕ್ಕೆ ಹೋದಳು. ಆಗ ಅವನ ಮುಖದಲ್ಲಿ ಆಯಾಸದ ಚಿಹ್ನೆಯಿರಲಿಲ್ಲ; ಏನೋ ಯೋಚನೆ ಮಾಡುತ್ತಿದ್ದ. ಲೋಟವನ್ನು ಕೈಗೆ ತೆಗೆದುಕೊಂಡು, "ಸೀತಾ!" ಎಂದ.

"ಏನು?"

"ನಿನಗೆ ಆ ಹುಡುಗನ ಮೇಲೆ ಸಿಟ್ಟು ಬಂತೇನು?"

"ಸಿಟ್ಟೇನೂ ಇಲ್ಲ; ನೀವು ದಣಿದು ಆಯಾಸಪಟ್ಟು ಬಂದಿದ್ದಿರಿ. ನಿಮಗೆ ಸ್ವಲ್ಪ ಪಾನಕ ಮಾಡಿಕೊಡೋಣವೆಂದು ಇದ್ದಾಗಲೇ ಅವನು ಬಂದನಲ್ಲಾ, ಎಂದು, ಇದೊಂದು ಒಪ್ಪೊತ್ತು 'ಹೋಗಿಬಿಟ್ಟು ಬಾ' ಎಂದೆ, ಅಷ್ಟೆ."

"ಅವರ ಮೇಲೆ ಸಿಟ್ಟುಮಾಡಬಾರದು, ಸೀತಾ! ಪಾಪ, ಆ ಹುಡುಗರು ಓದಬೇಕೆಂಬ ಆಸೆಯಿಂದ ಎಷ್ಟೆಷ್ಟೋ ಬಳಲುತ್ತಾರೆ. ಅವರಿಗೆ ಹೊತ್ತಿಗೆ ಗೊತ್ತಿಗೆ ಅನ್ನವಿಲ್ಲ, ನೀರಿಲ್ಲ, ಹೀಗಿರುತ್ತಾರೆ. ಒಂದೊಂದು ದಿನ ಉಪವಾಸ ಕೂಡ ಇದ್ದುಬಿಡುತ್ತಾರೆ! ಏನೋ, ದೇವರು ನಮಗೆ ಒಂದು ತುತ್ತು ಅನ್ನವನ್ನು ಕೊಟ್ಟಿರುವುದರಿಂದ ಅವರು ನಮ್ಮ ಮನೆಯ ಬಾಗಿಲಿಗೆ ಬರುತ್ತಾರೆ. ಅಂಥವರಿಗೆ ನಾವು ಕೊಡದೆ ಇನ್ನಾರು ಕೊಡಬೇಕು? ಅವರು ತಾಯಿತಂದೆಗಳನ್ನು ಬಿಟ್ಟು ಬಂದಿರುತ್ತಾರೆ. ಅನೇಕರಿಗೆ ತಾಯಿ–ತಂದೆ ಯಾರೂ ಇರುವುದಿಲ್ಲ; ಅಂಥವರಿಗೆ ನಾವೇ ತಾಯಿ–ತಂದೆ—ಎಲ್ಲ. ಅಂಥವರಿಗೆ ಸಿಡುಕಿನಿಂದ ಅನ್ನ ಹಾಕಿದರೆ ಅದು ಅವರ ಮೈಗೆ ಹತ್ತುವುದಿಲ್ಲ. ನಮಗೆ ಅನ್ನದಾನದ

ಫಲವೂ ಬರುವುದಿಲ್ಲ. ಸೀತಾ! ಇನ್ನು ಮೇಲೆ ನೀನು ನನಗೋಸ್ಕರವಾದರೂ, ಆ ಬಡಪಾಯಿಗಳ ಮೇಲೆ ಯಾವ ಕಾರಣದಿಂದಲೂ ಸಿಟ್ಟುಮಾಡಬೇಡ, ತಿಳಿಯಿತೇ?"

ಸೀತೆ ಅವನ ಪಕ್ಕದಲ್ಲಿಯೇ ಸುಮ್ಮನೆ ಮಾತಿಲ್ಲದೆ ನಿಂತಿದ್ದಳು. ಮುಖ ತಗ್ಗಿಹೋಗಿತ್ತು.

"ನಾನು ಹೀಗೆ ಹೇಳತ್ತೇನೆಂದು ಕೋಪವೇ, ಸೀತಾ?"

ಸೀತೆ ಸುಮ್ಮನಿದ್ದಳು.

"ಸೀತಾ, ನಾನು ಹೀಗೆ ಹೇಳಿದೆನೆಂದು ನೊಂದುಕೊಳ್ಳಬೇಡ. ನಿನ್ನಲ್ಲಿ ತಪ್ಪೆಣಿಸುವುದಕ್ಕೆ ಹೀಗೆ ಹೇಳಿದೆನೆಂದು ಭಾವಿಸಬೇಡ. ಏನೋ ಅವರ ಕಷ್ಟಗಳೆಲ್ಲಾ ನನಗೆ ಚೆನ್ನಾಗಿ ಗೊತ್ತು; ಆದುದರಿಂದ ಹೀಗೆ ಹೇಳಿದೆ. ಒಂದಾನೊಂದು ಕಾಲದಲ್ಲಿ ನಾನೂ ಜೋಳಿಗೆ ಹಿಡಿದು ಹೀಗೇ ಬೀದಿ ಬೀದಿ ಅಲೆಯುತ್ತಿದ್ದೆ, ಸೀತಾ. ನಿಮ್ಮ ಮನೆಗೂ ಭಿಕ್ಷಾನ್ನಕ್ಕೆ ಬರುತ್ತಿದ್ದೆ. ಆಗ ನೀನು ಇನ್ನೂ ಸಣ್ಣ ಹುಡುಗಿ. ಒಂದು ದಿನ ಭಿಕ್ಷಾನ್ನಕ್ಕಾಗಿ ನಿಮ್ಮ ಮನೆಯ ಬಾಗಿಲಿಗೆ ಬಂದೆ. ಆಗ ನಿಮ್ಮ ತಾಯಿ ಏನೋ ತಿಂಡಿಯನ್ನು ತೆಗೆದುಕೊಂಡು ಹೋಗಿ ಹಾಕು—ಎಂದರು. ನೀನು ಏನೋ ಆಟದಲ್ಲಿದ್ದದ್ದರಿಂದ ನನ್ನನ್ನು 'ನಿಂತುಕೊಂಡಿರೊ, ಬಂದೆ' ಎಂದು ಗದರಿಸಿದೆ. ನಾನು ಕಾದಿರಬೇಕಾಯಿತು—ಕಾದಿದ್ದೆ. ಇದೇನೋ ಬಹಳ ಹಿಂದಿನ ಮಾತು; ನಿನಗೆ ಮರೆತುಹೋಗಿದೆ; ಆದರೆ ನಾನು ಮರೆತಿಲ್ಲ."

ಸೀತೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಮಾಧು ಪುನಃ ಹೇಳತೊಡಗಿದ:

"ಸೀತಾ, ನಿನ್ನ ತಂದೆತಾಯಿಗಳ ಗುರುತು ಆಗುವುದಕ್ಕೆ ಮೊದಲು ನನಗೆ ಬಹಳ ಕಷ್ಟವಾಗುತ್ತಿತ್ತು. ಕೆಲವು ಮನೆಗಳಲ್ಲಿ ತಂಗಳನ್ನವನ್ನು ಹಾಕುತ್ತಿದ್ದರು; ಮತ್ತೆ ಕೆಲವರು ಹಳಸಿದ ಅನ್ನವನ್ನು ಕೂಡ ಹಾಕಿಬಿಡುತ್ತಿದ್ದರು! ಬರಿಯ ಹೊಟ್ಟೆಯಲ್ಲಿ ಎಷ್ಟೋ ರಾತ್ರಿಗಳನ್ನು ಕಳೆಯುತ್ತಿದ್ದೆ. ಈಗಲೂ ಅವುಗಳನ್ನು ನೆನೆಸಿಕೊಂಡರೆ ಕಣ್ಣಿನಲ್ಲಿ ನೀರು ಬರುವುದು! ದೇವರ ದಯದಿಂದ ನಿನ್ನ ತಂದೆತಾಯಿಗಳ ಗುರುತು ಆಗಿ, ಆಮೇಲೆ ನನಗೆ ಎಷ್ಟೋ ಸುಲಭವಾಯಿತು. ನಿನ್ನ ತಂದೆಯಿಂದ ನನಗೆ ಎಷ್ಟೋ ವಿಧದಲ್ಲಿ ಸಹಾಯವಾಯಿತು. ಅವರೇ ನನ್ನ ಭಾಗದ ದೇವರಾಗಿದ್ದರು."

ಸೀತೆಗೆ ದುಃಖ ತುಂಬಿಬಂದು, ಕಣ್ಣೀರು ಉಕ್ಕಿ ಹರಿಯತೊಡಗಿತು. ಅವಳು ಸುಮ್ಮನೆ ನೆಲವನ್ನು ನೋಡುತ್ತ ಕೇಳುತ್ತಿದ್ದಳು. ಮಾಧು ಪುನಃ ಪ್ರಾರಂಭಿಸಿದ :

“ಸೀತಾ, ಮೂರು ವರ್ಷಗಳ ಕಾಲ, ಮಲಗುವುದಕ್ಕೆ ಹಾಸಿಗೆಯಿಲ್ಲದೆ, ಬರೀ ಗೋಣೀ ತಟ್ಟಿನ ಮೇಲೆ ಮಲಗಿ ಕಾಲ ಕಳೆದೆ. ಒಂದು ಇಟ್ಟಿಗೆಯ ಮೇಲೆ ಹರಳೆಣ್ಣೆಯ ಹಣತೆಯೊಂದನ್ನು ಇಟ್ಟುಕೊಂಡು ರಾತ್ರಿಯ ಹೊತ್ತು ಓದುತ್ತಿದ್ದೆ. ನಾನು ಇದ್ದ ಕೊಠಡಿಯೋ ತೀರ ಚಿಕ್ಕದು ; ಮೂಲೆಯಿಂದ ಮೂಲೆಗೆ ಮಲಗಬೇಕಾಗಿತ್ತು. ಒಂದು ಮೂಲೆಯಲ್ಲಿ ಹಣತೆ, ಒಂದು ಮೂಲೆಯಲ್ಲಿ ಪುಸ್ತಕ, ಮತ್ತೊಂದು ಮೂಲೆಯಲ್ಲಿ ಒಂದು ತುಂಡು ಪೊರಕೆ— ಇಷ್ಟೆ. ಉಟ್ಟುಕೊಳ್ಳುವುದಕ್ಕೆ ಒಂದು ಪಂಚೆ ಬಿಟ್ಟರೆ ಮತ್ತೊಂದಕ್ಕೆ ಗತಿಯಿರಲಿಲ್ಲ. ಅಂಗಿಯೊಳಗೆ ಒಂದೆರಡು ಪುಸ್ತಕಗಳನ್ನು ಸುತ್ತಿ ಅದನ್ನೇ ತಲೆಯ ಕೆಳಗೆ ಇಟ್ಟುಕೊಳ್ಳುತ್ತಿದ್ದೆ. ಪುಸ್ತಕಕ್ಕೆ ದುಡ್ಡಿಲ್ಲ; ಪರೀಕ್ಷೆಗೆ ಹಣ ಕಟ್ಟುವುದಕ್ಕೆ ದುಡ್ಡಿಲ್ಲ. ಯಾರಾರನ್ನೋ ಅಂಗಲಾಚಿ ಬೇಡಿದೆ; ಒಂದು ಕಾಸೂ ಸಿಕ್ಕಲಿಲ್ಲ. ನಿರಾಶನಾಗಿ ಊರಿಗೆ ಹೋಗಬೇಕೆಂದಿದ್ದೆ. ಆಗ ನಿನ್ನ ತಂದೆ ನನ್ನ ಭಾಗದ ದೇವರ ಹಾಗೆ ಬಂದು ಸಹಾಯಮಾಡಿದರು....”

* * * *

ಆ ದಿನ ರಾತ್ರೆ ಸುಮಾರು ಹನ್ನೆರಡು ಗಂಟೆಯ ಸಮಯ. ಮಾಧವ ರಾಯ ಇನ್ನೂ ಒಂದು ಪುಸ್ತಕವನ್ನು ಹಿಡಿದುಕೊಂಡು ಓದುತ್ತಿದ್ದಾನೆ. ದೀಪ ಉರಿಯುತ್ತಿದೆ. ಮಗ್ಗುಲಲ್ಲಿ ಕೃಷ್ಣಮೂರ್ತಿಯೂ ಸೀತೆಯೂ ಮಲಗಿ ನಿದ್ರೆ ಹೋಗುತ್ತಿದ್ದಾರೆ. ಆಗ ಸೀತೆ ಇದ್ದಕ್ಕಿದ್ದ ಹಾಗೆ ಕನವರಿಸಿಕೊಂಡಳು :

“ಬಾಪ್ಪ, ಬಾ ನನ್ನ ಕಂದ! ಇಲ್ಲೇ ಊಟಮಾಡು, ಬಾಮ್ಮಾ!”

ಮಾಧು ತಿರುಗಿ ನೋಡಿದ. ಯಾರೂ ಇರಲಿಲ್ಲ. ಮೂರ್ತಿ ಮಲಗಿತ್ತು. ಆದ್ದರಿಂದ ಕನವರಿಕೆಯೆಂದು ತಿಳಿದು “ಸೀತಾ, ಸೀತಾ! ಎಚ್ಚರಮಾಡಿ ಕೊಳ್ಳಿ ; ಕಂದ ಯಾರು? ಊಟ ಯಾರು ಮಾಡಬೇಕೆ?” ಎಂದ. ಅವಳು ಕಣ್ಣಿನಿಂದ ನೀರು ಸುರಿಸುತ್ತಾ, ಅರ್ಧ ಎಚ್ಚರದಲ್ಲಿ, “ನೀವು ಭಿಕ್ಷಾನ್ನಕ್ಕೆ ಬಂದಿದ್ದು ; ಇವತ್ತು ಎಲ್ಲಿಯೂ ಸಿಕ್ಕಲಿಲ್ಲ ತಾಯಿ, ಎಂದ— ನೀವು ಹೇಳಿದ್ದೆಲ್ಲ ಜ್ಞಾಪಕಕ್ಕೆ ಬಂತು; ‘ಇಲ್ಲೇ ಊಟಮಾಡು ಏಳು’ ಎಂದೆ” ಎಂದಳು.

“ ಇದ್ಯಾಕೆ ಅಳುತ್ತೀಯೆ ? ಶಿವು ಎಲ್ಲಿದ್ದಾನೆಯೇ, ಎಚ್ಚರ ಮಾಡಿಕೊಳ್ಳೇ ! ” ಎಂದು, ಮಾಧು ಸ್ವಲ್ಪ ತಣ್ಣೀರನ್ನು ತಂದು ಅವಳ ಕಣ್ಣುಗಳನ್ನು ಒರೆಸಿದ.

ಸೀತೆಗೆ ಎಚ್ಚರವಾಯಿತು. ನಾಚಿಕೆಯಿಂದ ನಕ್ಕು ಮುಸುಕು ಹಾಕಿಕೊಂಡು ಮಲಗಿಬಿಟ್ಟಳು.

ಮರುದಿನ ಎಂದಿನಂತೆ ಶಿವು ಭಿಕ್ಷಾನ್ನಕ್ಕೆ ಬಂದು,

“ ಭವತಿ ಭಿಕ್ಷಾಂ ದೇಹಿ ! ” ಎಂದು ಕೂಗಿದ.

ಅದನ್ನು ಕೇಳಿ ಸೀತಮ್ಮ ತಟ್ಟನೆ ಎದ್ದು ಹೋಗಿ, ಆದರದಿಂದ ಅವನ ತಲೆಯನ್ನು ಸವರಿ ಬೆನ್ನುತಟ್ಟಿ, “ ಶಿವು, ಇನ್ನು ಮೇಲೆ ನೀನು ಭಿಕ್ಷಾನ್ನಕ್ಕೆ ಹೋಗಬೇಡ— ನಮ್ಮ ಮನೆಯಲ್ಲಿಯೇ ಇದ್ದುಬಿಡು. ಅವರು ನಿನಗೆ ಬೇಕಾದ ಪುಸ್ತಕ, ಬಟ್ಟೆಬರೆಗಳನ್ನೆಲ್ಲಾ ಕೊಡಿಸುವರು ” ಎಂದಳು.

ಅವನಿಗೆ ಆಶ್ಚರ್ಯವಾಯಿತು. ಅಲ್ಲಿಂದ ಮುಂದಕ್ಕೆ ಅವನು ಸೀತಮ್ಮನ ಇಷ್ಟದಂತೆ ಅವರ ಮನೆಯಲ್ಲಿಯೇ ನಿಂತ.

ಅಂದು ಹುಡುಗನಿಗೆ ಬಡಿಸುತ್ತ ಸೀತಮ್ಮ,

“ ಶಿವು, ನಿಮ್ಮ ಊರು ಯಾವುದು ? ” ಎಂದು ಕೇಳಿದಳು.

“ ನಂಗೊತ್ತಿಲ್ಲ. ”

“ ನಿಮ್ಮ ಅಪ್ಪ ಅಮ್ಮ ಎಲ್ಲಿದ್ದಾರೆ ? ”

“ ನೀವೇ ನನ್ನ ಗೋಪು ಅಪ್ಪ ಅಮ್ಮ— ಎಲ್ಲ. ”

“ ಏನು ? ನಿನಗೆ ತಂದೆ-ತಾಯಿ ಯಾರೂ ಇಲ್ಲವೇ ? ”

“ ಗೋಪು, ಒಂದು ದಿನ, ನಮ್ಮ ಅಪ್ಪ ಅಮ್ಮ ಸತ್ತು ಏಳೆಂಟು ವರ್ಷ ಆಯಿತೆಂದು ಹೇಳಿ ಅತ್ತ— ನಾನೂ ಅತ್ತೆ ಅಷ್ಟೇ. ಈಗ ನೀವೇ ನನ್ನ ಗೋಪು ಅಪ್ಪ ಅಮ್ಮ— ಎಲ್ಲ. ”

ಸೀತೆಯ ಕಣ್ಣಿನಲ್ಲಿ ನೀರು ಬಂತು.

“ ಗೋಪು ಯಾರು— ಶಿವು ? ”

“ ಗೋಪು ನನ್ನ ಅಣ್ಣ. ”

“ ಅವರೆಲ್ಲಿದಾರೆ ? ”

“ ಅವನು ಆಸ್ಪತ್ರೆಯಲ್ಲಿ ಸತ್ತುಹೋದ ; ಅವನೇ ಸಾಯುವಾಗ ನನ್ನ

ಕರೆದು, ‘ ಇನ್ನುಮೇಲೆ ನಿನಗೆ ಯಾರು ಅನ್ನ ಹಾಕುತ್ತಾರೆಯೋ ಅವರೇ ನಿನ್ನ ಗೋಪು ಅಪ್ಪ ಅಮ್ಮ—ಎಲ್ಲ; ನಾನು ಹೋಗುತ್ತೇನೆ’ ಎಂದು ಹೇಳಿದ.”

ಸೀತಮ್ಮ ಕಣ್ಣೀರನ್ನು ಒರೆಸಿಕೊಂಡು, “ ಶಿವು, ಹಾಗಾದರೆ ನಿನಗೆ ಯಾರೂ ಇಲ್ಲವೇ ? ” ಎಂದು ಕೇಳಿದಳು.

“ ಇದ್ದಾರೆ ! ”

“ ಯಾರು ? ”

“ ನೀವೇ—ನನ್ನ ಗೋಪು ಅಪ್ಪ ಅಮ್ಮ—ಎಲ್ಲಾ ! ”

---

# ಸರಸಿಯ ಗೊಂಬೆ

'A young boy is a young boy
A young girl is a young woman'

—*Anon*

೧

ಸರಸಿ ವೆಂಕಟರಾಮಯ್ಯನವರ ಮಗಳು. ವೆಂಕಟರಾಮಯ್ಯನವರು ನಮ್ಮ ಹಳ್ಳಿಯ ಶ್ಯಾನುಭೋಗರು. ದಯವಿಟ್ಟು ನಮ್ಮ ಹಳ್ಳಿ ಯಾವುದೆಂದು ಕೇಳಬೇಡಿ. ನಿಮಗೆ ನಮ್ಮ ಹಳ್ಳಿಯ ಹೆಸರು ಗೊತ್ತಾದರೆ ನಾನು ಯಾರು ಎಂದು ಖಂಡಿತವಾಗಿಯೂ ಗೊತ್ತಾಗುತ್ತದೆ. ನಾನು ಯಾರು ಎಂದು ತೋರಿಸಿ ಕೊಳ್ಳಲು ನನಗೆ ಇಷ್ಟವಿಲ್ಲ. ನಿಮಗೆ ಯಾವ ಯಾವ ವಿಷಯಗಳನ್ನು ಹೇಳಬೇಕೆಂದು ತೋರುತ್ತದೆಯೋ ಅವುಗಳನ್ನೆಲ್ಲಾ ಮರೆಮಾಚದೆ ಹೇಳು ತ್ತೇನೆ. ಅನವಶ್ಯಕವಾದುದನ್ನೆಲ್ಲಾ ಹೇಳಿ ವೃಥಾ ನಿಮಗೇಕೆ ಬೇಸರವನ್ನುಂಟು ಮಾಡಲಿ? ಇಷ್ಟು ಹೇಳಿದರೆ ಸಾಕು—ನಮ್ಮ ಹಳ್ಳಿ ಮೈಸೂರು ಸೀಮೆಯಲ್ಲೇ ಎಲ್ಲೋ ಒಂದು ಕಡೆ ಒಂದು ನದಿಯ ದಡದ ಮೇಲಿದೆ. ಇನ್ನು ವೆಂಕಟ ರಾಮಯ್ಯನವರ ವಿಷಯ. ಹಳ್ಳಿಯ ಶ್ಯಾನುಭೋಗರು ಅಂದಮೇಲೆ ನೆಮ್ಮದಿ ಯಾಗಿದ್ದಾರೆ—ಎಂಬುದು ತಿಳಿದ ವಿಷಯವೇ! ಮಿತವಾದ ಸಂಸಾರ. ಅವರು ನಮಗೆ ಸ್ವಲ್ಪ ದೂರದ ಸಂಬಂಧ. ಅವರಿಗೆ ಮೂರು ಮಕ್ಕಳು. ಮೂರೂ ಹೆಣ್ಣು! ಸರಸಿಯೇ ಮೊದಲನೆಯವಳು. ಇಲ್ಲಿ ನಾನು ಹೇಳುವುದು ಮುಕ್ಕಾಲು ಪಾಲು ಸರಸಿಯ ವಿಚಾರ.

ನಮ್ಮ ಮನೆಗೂ ಸರಸಿಯ ಮನೆಗೂ ಹತ್ತಿರ. ನಮ್ಮ ಮನೆಯ ಸಾಲಿ ನಲ್ಲೇ ಎಡಕ್ಕೆ ಎರಡನೆಯದಲ್ಲ ಮೂರನೆಯದೇ ಅವರ ಮನೆ. ಆ ಸಾಲಿನಲ್ಲಿ ನಮ್ಮ ಮನೆಯೊಂದಕ್ಕೇ ಮಹಡಿ ಇರುವುದು. ನಮ್ಮ ಸಾಲು ಉತ್ತರಾಭಿ ಮುಖವಾಗಿದೆ. ಅದರಲ್ಲಿ ಇರುವುದೆಲ್ಲಾ ಒಟ್ಟು ಎಂಟು–ಹತ್ತು ಮನೆಗಳು. ನಮ್ಮ ಮನೆಯ ಮುಂದಿನ ರಸ್ತೆಯಲ್ಲಿ, ಪಶ್ಚಿಮಾಭಿಮುಖವಾಗಿ ಸುಮಾರು ನೂರೈವತ್ತು ಗಜ ಹೋದರೆ ಎಡಕ್ಕೆ ಒಂದು ಕಾಲುಹಾದಿ ಸಿಕ್ಕುವುದು. ಅದು

ನಮ್ಮ ಸಾಲಿನ ಹಿಂಭಾಗದಲ್ಲಿ ಹರಿಯುವ ನದಿಯ ಸೋಪಾನಕ್ಕೆ ಹೋಗುತ್ತದೆ. ಸೋಪಾನ ಒರಟು ಒರಟಾಗಿದ್ದರೂ ಅದರಿಂದ ನಮ್ಮ ಹಳ್ಳಿಗೆ ಬಹಳ ಪ್ರಯೋಜನ. ಆ ಸೋಪಾನದ ಹತ್ತಿರದಲ್ಲೇ ನದಿಯ ದಡದ ಮೇಲೆ ಒಂದು ತೋಪು. ಅದರ ನೆರಳಿನಲ್ಲಿ ಒಂದು ಚಿಕ್ಕದಾದ ಪುರಾತನಕಾಲದ ದೇವಸ್ಥಾನ; ನರಸಿಂಹಸ್ವಾಮಿ ದೇವರದು. ಒಟ್ಟಿನಲ್ಲಿ ನಮ್ಮ ಹಳ್ಳಿ ಬಹು ರಮ್ಯವಾದ ಸ್ಥಳ. ಈ ನನ್ನ ಮಾತಿನ ನಿಜತ್ವವನ್ನು, ಹಳ್ಳಿಯಲ್ಲಿದ್ದು ಅದರ ಸುಖವನ್ನು ಸವಿದವರು ಮಾತ್ರ ತಿಳಿಯಬಲ್ಲರು. ನಾನು ನಮ್ಮ ಹಳ್ಳಿಯಲ್ಲಿ ಐದು ರೂಪಾಯಿ ಪರೀಕ್ಷೆ ಮುಗಿಸಿಕೊಂಡು, ಮುಂದೆ ಓದುವುದಕ್ಕೆ ಬೆಂಗಳೂರಿಗೆ ಹೋಗಿ ನಮ್ಮ ಸೋದರಮಾವನ ಮನೆಯಲ್ಲಿದ್ದೆ. ಹಳ್ಳಿಯಲ್ಲಿರುವ ತನಕ ನನ್ನ ಮನಸ್ಸಿನಲ್ಲಿದ್ದ ಆನಂದ, ಗೆಲುವು— ಇವು, ನಾನು ಬೆಂಗಳೂರಿಗೆ ಬಂದೊಡನೆಯೇ ಮಾಯವಾದವು. ಬೆಂಗಳೂರಿಗೆ ಬಂದಮೇಲೆ ನಮ್ಮ ಹಳ್ಳಿಯ ಸುಖದ ಆಳ ಎಷ್ಟು ಎಂದು ಗೊತ್ತಾಯಿತು. ಎಷ್ಟು ?—ಎಂದು ಕೇಳುವಿರೋ? ಅದಕ್ಕೆ ಆಳವೇ ಇಲ್ಲ! ಬೆಂಗಳೂರಿನಲ್ಲಿ ನಾಲ್ಕು ದಿನ ಇರುವುದರಲ್ಲಿಯೆ ನನಗೆ ಹುಚ್ಚು ಹಿಡಿದಂತಾಯಿತು! ಹುಚ್ಚು ಹಿಡಿಯದೆ ಮತ್ತೇನು ? ಆ ಮೋಟಾರುಗಳೋ! ಆ ಬೈಸಿಕಲ್ಲುಗಳೋ! ಆ ಧೂಳೋ! ಇವೆಲ್ಲವನ್ನೂ ಮೀರಿಸಿದ ಆ ಜಟಕಾ ಗಾಡಿಗಳೋ! ಅಬ್ಬಬ್ಬ! ಮನಸ್ಸಿನಲ್ಲೇ 'ನಮ್ಮ ಹಳ್ಳಿ ಬಿಟ್ಟರೆ ಇನ್ನು ಇಲ್ಲ!' ಅಂದುಕೊಂಡುಬಿಟ್ಟೆ. ಯಾವುದೇ ಆಗಲಿ, ಇದ್ದಾಗ ಅದರ ಗುಣ ಚೆನ್ನಾಗಿ ಗೊತ್ತಾಗುವುದಿಲ್ಲ; ಅಥವಾ ನಾವು ಗೊತ್ತುಮಾಡಿಕೊಳ್ಳಲು ಪ್ರಯತ್ನಿಸುವುದಿಲ್ಲ! ಇಲ್ಲದಾಗ—ಅಯ್ಯೋ, ಇಲ್ಲವಲ್ಲಾ! ಹಾಗಿತ್ತು! ಹೀಗಿತ್ತು—ಅಂದುಕೊಳ್ಳುತ್ತೇವೆ. ಇಲ್ಲಿ ಗೋಪಾಲಸ್ವಾಮಿಯ ಮಾತು ಜ್ಞಾಪಕಕ್ಕೆ ಬರುತ್ತದೆ. ಅವನು ದೊಡ್ಡ ಮನುಷ್ಯರ ಮಗ; ಹಾಸ್ಟೆಲಿನಲ್ಲಿದ್ದ. ಒಂದು ದಿನ ಅವನನ್ನು ನಮ್ಮ ಮನೆಗೆ ಊಟಕ್ಕೆ ಕರೆದುಕೊಂಡು ಹೋದೆ. ಊಟಕ್ಕೆ ಇತರ ಅಡಿಗೆಗಳ ಜೊತೆಗೆ ಮೆಂತ್ಯದ ಹಿಟ್ಟಿನ ಗೊಜ್ಜು ಮಾಡಿತ್ತು. ಗೋಪಾಲಸ್ವಾಮಿ ಊಟಕ್ಕೆ ಪ್ರಾರಂಭಿಸಿದ. ಮೊದಲಿನಿಂದ ಕೊನೆಯವರೆಗೂ ಆ ಹಿಟ್ಟಿನ ಗೊಜ್ಜಿನಲ್ಲೇ ಮುಗಿಸಿಬಿಟ್ಟ. ನಾನು ನಗುತ್ತ, "ಇದೇನೋ ಗೋಪು, ಎಲ್ಲಾ ಬಿಟ್ಟು ಬರೀ ಗೊಜ್ಜನ್ನೇ ಹಿಡಿದಿದ್ದೀಯಾ?" ಎಂದು ಕೇಳಿದೆ. ಅವನು ಅದಕ್ಕೆ ಉತ್ತರವಾಗಿ, "ಬೋ! ಬಿಡೋ! ಇನ್ನೆಲ್ಲಾ

ಯಾವಾಗಲೂ ಇದ್ದೇ ಇದೆ; ಈ ಗೊಜ್ಜು ನೋಡು, ಅಪರೂಪ. ಇದನ್ನು ತಿಂದು ಈಗ ಎರಡು ವರ್ಷಗಳಮೇಲೆ ಆಗಿತ್ತು. ನನಗೇನೋ ಅದು ಬಲು ರುಚಿ!" ಎಂದು ಹೇಳಿ, ನಾಲಗೆಯನ್ನು ಚಪ್ಪರಿಸಿದ. ನೋಡಿ, ಅವನಿಗೆ ಮೆಂಥ್ಯದ ಹಿಟ್ಟಿನ ಗೊಜ್ಜು ಹೇಗೋ ನನಗೆ ನಮ್ಮ ಹಳ್ಳಿ ಹಾಗೆ. ನೀವು ಏನಾದರೂ ಅಂದುಕೊಳ್ಳಿ! ನಮ್ಮ ಹಳ್ಳಿಯ ಮಾತನ್ನೆತ್ತಿದ್ದರಿಂದ ಇದನ್ನೆಲ್ಲಾ ಹೇಳಬೇಕಾಗಿ ಬಂತು. ಹಳ್ಳಿಯ ಮಾತು ಏಕೆ ಎಂದರೆ, ಸರಸಿ ನಮ್ಮ ಹಳ್ಳಿಯ ಹುಡುಗಿ. ಅಲ್ಲದೆ, ಇದರಲ್ಲಿ ನನ್ನ ವಿಷಯವೂ ಸ್ವಲ್ಪ ಸೇರಿದೆ. ಹೇಗೆ ಅನ್ನುವಿರೋ?—ಮಾರಿಗೆ ಹಾಲಿನಲ್ಲಿ ನೀರು ಬೆರತ ಹಾಗೆ! ಹಾಲು ಮಾರುವವರು ಅಪ್ಪಟವಾದ ಹಾಲನ್ನು ಕೊಡುವುದು ಅವರ ಕಸಬಿಗೆ ವಿರುದ್ಧ! ಇದುವರೆಗೆ ನಾನು ಹೇಳಿರುವುದೆಲ್ಲಾ ಅಪ್ಪಟ ನೀರು ಅನ್ನಬಹುದು. ಇನ್ನು, ಸರಸಿಯ ವಿಷಯ.

ಸರಸಿ ಎಳೆಯ ಮಗುವಾಗಿದ್ದಾಗಿನಿಂದಲೂ ನಾನು ಅವಳನ್ನು ಬಲ್ಲೆ. ನನಗೆ ಉಪನಯನವಾದ ಎಂಟು ದಿನಗಳಲ್ಲೆ ಅವಳು ಹುಟ್ಟಿದಳು. ಅವಳು ಹುಟ್ಟಿದ್ದೂ ನಮ್ಮ ಹಳ್ಳಿಯಲ್ಲಿ—ನನಗೆ ಉಪನಯನವಾಗಿದ್ದೂ ನಮ್ಮ ಹಳ್ಳಿಯಲ್ಲಿ. ಅವಳು ಹುಟ್ಟಿದಾಗ ನಾನು ಅವರ ಮನೆಗೆ ಹೋಗಿ ಕೊಬ್ಬರಿ–ಸಕ್ಕರೆ ತಿಂದುಕೊಂಡು ಬಂದುದೂ, ನಾಮಕರಣದ ದಿನ ಊಟಕ್ಕೆ ಹೋಗಿದ್ದುದೂ ಎಲ್ಲಾ ಜ್ಞಾಪಕವಿದೆ. ಎಷ್ಟೋ ದಿನ ನಾನು ಅವರ ಮನೆಗೆ ಹೋಗಿದ್ದಾಗ ಅವಳನ್ನು ಎತ್ತಿ ಮುದ್ದಾಡಿದ್ದೇನೆ; ತೊಟ್ಟಿಲಲ್ಲಿ ಇಟ್ಟು ತೂಗಿದ್ದೇನೆ. ಮಕ್ಕಳನ್ನು ಕಂಡರೆ ನನಗೆ ಏನೋ ಸುಖ. ಅದರಲ್ಲೂ, ಹೂವಿನ ಎಸಳಿನಂತಹ ಎಳೆಯ ಮಕ್ಕಳನ್ನು ಕಂಡರಂತೂ ಬಹಳ ಪ್ರೀತಿ. ಒಂದು ದಿನ ಅವರ ಮನೆಗೆ ಹೋಗಿದ್ದೆ. ಮಗು ತೊಟ್ಟಿಲಲ್ಲಿ ನಿದ್ರಿಸುತ್ತಿತ್ತು. ಹತ್ತಿರ ಯಾರೂ ಇರಲಿಲ್ಲ. ಎಲ್ಲರೂ ಒಳಗೆ ಎಲ್ಲೋ ಕೆಲಸದಲ್ಲಿದ್ದರು. ನಾನು ಸದ್ದುಮಾಡದೆ, ನಿದ್ರಿಸುತ್ತಿದ್ದ ಹಾಗೆಯೇ ಸರಸಿಯನ್ನು ಎತ್ತಿಕೊಂಡು, ಕಾಣದ ಹಾಗೆ ನಮ್ಮ ಮನೆಗೆ ಬಂದುಬಿಟ್ಟೆ! ಅವರ ಮನೆಯವರೆಲ್ಲಾ ಬಹಳ ಗಾಬರಿಯಾಗಿಬಿಟ್ಟಿದ್ದರು! ನೆನೆಸಿಕೊಂಡರೆ ಈಗಲೂ ನಗು ಬರುತ್ತೆ. ಈಗ ಸ್ವಲ್ಪ ದಿನಗಳ ಕೆಳಗೆ ನಾನು ಸರಸಿಯನ್ನು ಕಂಡಾಗ, ಯಾವುದೋ ಸಂದರ್ಭದಲ್ಲಿ ಅವಳಿಗೆ ಈ ವಿಷಯ ಹೇಳಿದೆ. ಅವಳು ಸುಳ್ಳುಸುಳ್ಳೆ ಸಿಟ್ಟು ತೋರಿಸಿ, ವಕ್ರವಾಗಿ ನನ್ನ ಕಡೆ ನೋಡಿ

ಮುಖವನ್ನು ಆ ಕಡೆ ತಿರುಗಿಸಿಕೊಂಡುಬಿಟ್ಟಳು. ಸರಸಿ ಮಗುವಿನಲ್ಲಿ ಎಷ್ಟು ಮುದ್ದಾಗಿದ್ದಳೋ ಬೆಳೆಯುತ್ತ ಬೆಳೆಯುತ್ತ ಅಷ್ಟೇ ಮುದ್ದುಮುದ್ದಾಗಿ ಬೆಳೆದಳು. ಐದಾರು ವರ್ಷಗಳ ಹುಡುಗಿಯಾಗಿದ್ದರೂ ಬಹಳ ಚುರುಕು. ಅವಳಿಗೆ ಇದ್ದ ಸ್ನೇಹಿತರಲ್ಲೆಲ್ಲಾ ನಾನೇ ಸ್ವಲ್ಪ ವಯಸ್ಸಾಗಿದ್ದವನು. ಉಳಿದವರೆಲ್ಲಾ ಹೆಚ್ಚುಕಡಿಮೆ ಅವಳ ಓರಗೆ. ಸಾಧಾರಣವಾಗಿ, ಅವಳ ಜೊತೆಗೆ ಆಡುವುದಕ್ಕೆ ಯಾರೂ ಸಿಕ್ಕದೆ ಹೋದರೆ ಆಗ ನನ್ನನ್ನು ಹುಡುಕಿಕೊಂಡು ಬರುತ್ತಿದ್ದಳು. ನನ್ನಲ್ಲಿ ಅವಳಿಗೆ ಹೆಚ್ಚು ಸಲಿಗೆ. ಏಕೆಂದರೆ, ಅವಳಿಗೆ ದೇವಸ್ಥಾನದ ತೋಪಿನಿಂದ ದೇವಗಣಗಲೆ ಹೂವು ತಂದುಕೊಡುತ್ತಿದ್ದೆ. ಹೊಳೆಮರಳಿಗೆ ಹೋಗಿ, ಅವಳ ಆಟಕ್ಕೆ ದುಂಡಾದ ಸಣ್ಣ ಸಣ್ಣ ಕಲ್ಲುಗಳನ್ನು ತಂದುಕೊಡುತ್ತಿದ್ದೆ. ಒಂದೊಂದು ದಿನ ಸಾಯಂಕಾಲ ನಮ್ಮ ತೋಟಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಏನಾದರೂ ಹಣ್ಣುಗಳನ್ನು ಕಿತ್ತುಕೊಡುತ್ತಿದ್ದೆ. ಇಷ್ಟಲ್ಲದೆ ನಮ್ಮ ಮನೆಗೆ ಯಾವಾಗಲಾದರೂ ಬಂದಾಗ ಏನಾದರೂ ತಿಂಡಿ ಕೊಡುತ್ತಿದ್ದೆ. ಇಷ್ಟೆಲ್ಲ ಮಾಡಿದಮೇಲೆ ಸ್ವಲ್ಪ ಸ್ನೇಹ ಇಲ್ಲದೆ ಇರುತ್ತದೆಯೆ? ನನಗೂ ಅವಳೊಂದಿಗೆ ವಿನೋದವಾಗಿ ಸ್ವಲ್ಪ ಕಾಲ ಕಳೆಯಬೇಕೆಂದು ಆಸೆ. ಅವಳಿಗೆ ಆಟದಮೇಲೆ ಮನಸ್ಸು. ನನಗೆ ಅವಳ ಪ್ರತಿ ಆಟ, ನೋಟ, ಮಾಟ—ಇವುಗಳಲ್ಲಿ ಅವಳ ಶುದ್ಧವಾದ ಎಳೆಯ ಮನಸ್ಸು ಹೇಗೆ ಹರಿಯುತ್ತದೆ ನೋಡಬೇಕು—ಅನ್ನುವ ಕುತೂಹಲ. ನೀವು ಮಕ್ಕಳೊಡನೆ ಮಕ್ಕಳಾಗಿ ಆಡಿದ್ದರೆ, ಆಗ ನಿಮಗೆ ಅದರ ಸುಖ-ಆನಂದಗಳು ಗೊತ್ತಾಗುತ್ತವೆ. 'ನನ್ನ ಬಳಿಗೆ ಬರುವ ಚಿಕ್ಕ ಮಕ್ಕಳನ್ನು ತಡೆಯಬೇಡಿ; ಏಕೆಂದರೆ, ಸ್ವರ್ಗವು ಅಂತಹ ಚಿಕ್ಕ ಮಕ್ಕಳಿಂದ ತುಂಬಿ ತುಳುಕುತ್ತಿದೆ' ಎಂದು ಹೇಳಿದ ಏಸುವಿನ ಮಾತು ಸತ್ಯದ ಸಾರ ಎಂದು ನನಗೆ ತೋರುತ್ತದೆ. ಅಂತಹ ಸ್ವರ್ಗದ ಬಾಗಿಲನ್ನು ತೆಗೆದು, ಸರಸಿ ಎಷ್ಟೋ ಸಾರಿ ನನ್ನನ್ನು ಕೈ ಹಿಡಿದು ಅದರ ಒಳಕ್ಕೆ ಕರೆದುಕೊಂಡು ಹೋಗಿದ್ದಾಳೆ. ನಾನು ಇಲ್ಲಿ ಬರೆಯುವುದೆಲ್ಲಾ ಅವಳಿಂದ ಕಲಿತ ವಿಷಯಗಳು. ನಾನು ಅವಳೊಡನೆ ಇರುತ್ತಿದ್ದಷ್ಟು ಹೊತ್ತೂ, ನನಗೆ ಹೊರಗಿನ ಪ್ರಪಂಚವೆಲ್ಲಾ ಮಾಯವಾಗಿ, ಅವಳದ್ದೇ ಆದ ಬೇರೆ ಒಂದು ವಿಚಿತ್ರವಾದ ಪ್ರಪಂಚದಲ್ಲಿ ತೇಲುತ್ತಿದ್ದ ಹಾಗೆ ಅನುಭವವಾಗುತ್ತಿತ್ತು. ಅಲ್ಲಿ ಇರುವವರೆಗೂ ಅವಳಿಗೂ ನನಗೂ ಇದ್ದ ವಯೋಭೇದವೇ ಕಾಣುತ್ತಿರಲಿಲ್ಲ. ಅವಳ

ಪ್ರಪಂಚದ ಧರ್ಮವೇ ಬೇರೆ. ಅಲ್ಲಿ ನಿರ್ಜೀವವಾದ ಅಥವಾ ಅನುಪಯುಕ್ತ ವಾದ ಪದಾರ್ಥ ಒಂದೂ ಇಲ್ಲ. ಅಲ್ಲಿ ಕಲ್ಲುಮಣ್ಣುಗಳೇ ತಿಂಡಿ ತೀರ್ಥ— ಭಕ್ಷ್ಯಭೋಜ್ಯ! ದುಡ್ಡುಕಾಸು! ಒಂದೊಂದು ಸಾರಿ ಅವಳು ಅಂಗಡಿ ಇಟ್ಟು ಕೊಂಡು ವ್ಯಾಪಾರದ ಆಟ ಆಡುತ್ತಿದ್ದಳು. ಸೊಪ್ಪು ಸದೆ ಇವೇ ಅವಳ ಸರಕು. ಸಣ್ಣ ಸಣ್ಣ ಕಲ್ಲುಗಳೇ ಕೊಳ್ಳುವುದಕ್ಕೆ ದುಡ್ಡು. ಕಲ್ಲುಗಳಿಗೆ ಅವುಗಳ ಗಾತ್ರಕ್ಕೆ ತಕ್ಕ ಬೆಲೆ! ಒಂದು ದಿನ ಅವಳೂ ಅವಳ ಸಂಗಾತಿಗಳೂ ಸೇರಿ ಗೊಂಬೆ ಮದುವೆ ಆಟ—ಎಂದು ಆಡುತ್ತಿದ್ದರು. ನಾನು ಅವರಿಗೆ ತಿಳಿಯದ ಹಾಗೆ ದೂರ ನಿಂತು ನೋಡುತ್ತಿದ್ದೆ. ನನಗೆ ಅದು ಕೇವಲ ಆಟ ಎಂದು ತೋರು ತ್ತಿತ್ತು. ಆದರೆ ಅವರಿಗೆ ಹಾಗೆ ತೋರುತ್ತಿತ್ತೇನು? ಎಂದಿಗೂ ಇಲ್ಲ. ಅವರ ಆಟದ ರೀತಿಯನ್ನು ನೋಡಿದರೆ ಆಗ ಅದು ಗೊತ್ತಾಗುತ್ತದೆ. ಅವರಿಗೆ ಆ ಗೊಂಬೆಗಳೆಲ್ಲಾ ನಮ್ಮ ಹಾಗೆಯೇ ಮನುಷ್ಯರು! ಚಿಕ್ಕ ಮಕ್ಕಳಿಗೆ ಅವು ಮಾತನಾಡಬಲ್ಲವು, ನಗಬಲ್ಲವು, ಅಳಬಲ್ಲವು, ಊಟಮಾಡಬಲ್ಲವು, ನಿದ್ದೆಮಾಡ ಬಲ್ಲವು. ಅವರಿಗೆ ಇರುವ ಕಲ್ಪನಾಶಕ್ತಿಗೆ ಮೇರೆ ಇದ್ದಂತೆ ನನಗೆ ತೋರುವು ದಿಲ್ಲ. ಅವರು ಎರಡು ಕಾಲುಗಳ ಮಧ್ಯದಲ್ಲಿ ಒಂದು ಉದ್ದವಾದ ಕೋಲನ್ನು ಇಟ್ಟುಕೊಂಡು ಕುದುರೆ ಆಟವಾಡುವುದನ್ನು ನಿಮ್ಮಲ್ಲಿ ಅನೇಕರು ನೋಡಿರು ವಿರಿ. ಬಾಲ್ಯದ ಮೇರೆ ದಾಟಿದ ನಮಗೆ ಅದು ಕಟ್ಟಿಗೆ! ಆದರೆ ಅವರ ಮುಖ ವನ್ನು ನೋಡಿ; ಯಾವ ಸವಾರನಿಗೂ ಇಲ್ಲದ ಹುಮ್ಮಸು ಇರುತ್ತದೆ! ನಮ್ಮ ದೇಹ ದೊಡ್ಡದಾದಹಾಗೆಲ್ಲ ನಮ್ಮ ಕಲ್ಪನಾಶಕ್ತಿ ಚಿಕ್ಕದಾಗುತ್ತ ಹೋಗುತ್ತದೆ ಎಂದು ತೋರುವುದು! ನೀವು ಸಮಯ ಬಿದ್ದಾಗ ಅವರಿಗೆ ಹುಣಿಸೆಯ ಮರ, ಬೇವಿನ ಮರದ ಕಥೆಯನ್ನು ಹೇಳಿ. ನಾಳೆ ಅವರು ಆ ಮರಗಳ ಹತ್ತಿರ ಹೋಗಿ, ಅವುಗಳೊಡನೆ ಮಾತನಾಡಿ, ಯೋಗಕ್ಷೇಮ ವಿಚಾರಿಸಿಕೊಂಡು ಬರುತ್ತಾರೆ. ತಾವು ನೋಡಿದ ಎಲ್ಲಾ ಪದಾರ್ಥಗಳಿಗೂ ಅವರು ಜೀವಕಳೆ ಯನ್ನು ತುಂಬಿ, ತಮ್ಮ ದಾರಿಗೆ ಎಳೆದುಕೊಂಡು, ತಮ್ಮ ಆಟಗಳಲ್ಲಿ ಭಾಗಿ ಗಳನ್ನಾಗಿ ಮಾಡಿಕೊಳ್ಳುತ್ತಾರೆ. ಇದು ಅವರ ಕಲ್ಪನಾಶಕ್ತಿ—ಅವರ ಅಪೂರ್ವ ವಾದ ಪ್ರಪಂಚದ ಧರ್ಮ. ಈಗಲೂ ಆ ದಿನಗಳನ್ನೆಲ್ಲ ನೆನೆಸಿಕೊಂಡರೆ ನನ್ನ ಪ್ರತಿ ರಕ್ತನಾಳದಲ್ಲೂ ಆನಂದದ ಪ್ರವಾಹ ಹರಿಯುತ್ತದೆ. ಆಗ ಸಾಕ್ಷಾ ತ್ತಾಗಿ ಅನುಭವಿಸುತ್ತಿದ್ದವನಿಗೆ ಈಗ ನೆನಪು ಮಾತ್ರ!—ದೊಡ್ಡ ನಿಧಿಯನ್ನು

ಕನಸಿನಲ್ಲಿ ಕಂಡು ಸುಖಪಟ್ಟ ಹಾಗೆ! ನಾನೇನೋ ಜ್ಞಾಪಿಸಿಕೊಳ್ಳುತ್ತಾ ಇರುತ್ತೇನೆ. ಆದರೆ ಸರಸಿ ಒಂದು ದಿನ ಒಂದು ಘಳಿಗೆಯಾದರೂ ಜ್ಞಾಪಿಸಿ ಕೊಳ್ಳುವಳೇ? ಜ್ಞಾಪಿಸಿಕೊಂಡಾಳು! ಅಥವಾ ಹೇಗೋ? ಹೇಳುವುದು ಹೇಗೆ?

ನಾನು ನನಗೆ ಬೇಸರವಾದಾಗಲೆಲ್ಲಾ, ಅಥವಾ ಅವಳಿಗೆ ಜೊತೆಗೆ ಆಡುವುದಕ್ಕೆ ಇನ್ನಾರೂ ಸಿಕ್ಕದೆ ಇದ್ದಾಗಲೆಲ್ಲಾ, ನಾವಿಬ್ಬರೂ ಒಟ್ಟಿಗೆ ಸ್ವಲ್ಪ ಹೊತ್ತು ಕಾಲಕಳೆಯುತ್ತಿದ್ದೆವು. ಅವಳಿಗೆ, ಭಕ್ತಿಯೋ ಪ್ರೀತಿಯೋ ಏನೋ ಹೇಳಲಾರೆ, ಅಂತು ಒಂದು ವಿಧವಾದ ಆದರಣೀಯವಾದ ಭಾವನೆ. ಆರು ವರ್ಷದ ಹುಡುಗಿಯಾಗಿದ್ದರೂ ಬಲು ಮಾತಿನ ಗಿಣಿ! ಇಷ್ಟರ ಮಧ್ಯೆ ನಾಚಿಕೆ ಬೇರೆ! ತನಗೆ ಗುರುತಿಲ್ಲದ ಗಂಡು ಹುಡುಗರು ಯಾರಾದರೂ ಎದುರಿಗೆ ಬಂದು ಬಿಟ್ಟರೆ, ಹೊಸದಾಗಿ ಮದುವೆಯಾದ ಹುಡುಗಿಯ ಹಾಗೆ ಅಡಿ, ಓಡಿಬಿಡುತ್ತಿದ್ದಳು. ಆದರೆ ನನ್ನ ಹತ್ತಿರ ಅದೆಲ್ಲಾ ಇಲ್ಲ; ಬಹಳ ಸಲಿಗೆ. ನಾನೆಲ್ಲಿಯಾದರೂ ಮಧ್ಯಾಹ್ನ ನಮ್ಮ ಮನೆಯಲ್ಲಿ ಮಲಗಿ ನಿದ್ದೆಮಾಡುತ್ತಿದ್ದರೆ, ಮೆಲ್ಲಗೆ ಸಪ್ಪಳಿಲ್ಲದೆ ಬಂದು ಕಿವಿಯಲ್ಲಿ ಕಿರ್ರನೆ ಊದಿಬಿಡುವಳು; ಅಥವಾ ಚಕ್ಕಳಗುಳಿ ಇಟ್ಟುಬಿಡುವಳು; ಇಲ್ಲವೆ, ಕಾಲು ಕೆರೆದುಬಿಡುವಳು. ಅಂತು ಏನಾದರೂ ಮಾಡಿ ನನ್ನನ್ನು ಎಬ್ಬಿಸಿಬಿಡಬೇಕು. ನಾನು ನಿದ್ರೆಯಿಂದ ಎಚ್ಚರವಾಗಿ ಗಾಬರಿಯಿಂದ ಕಣ್ಣುಬಿಟ್ಟರೆ, ಅವಳು ದೂರ ಮೂಲೆಗೆ ಹೋಗಿ ನಿಂತುಕೊಂಡು, ತನ್ನ ಪುಟ್ಟ ಎಳೆಯ ದೇಹವನ್ನು ಹಾಗೆ ಹೀಗೆ ಬಳುಕಿಸುತ್ತ, ಮುದ್ದಾಗಿ ಮಿಂಚುವ ಕಣ್ಣುಗಳನ್ನು ಇನ್ನಷ್ಟು ದೊಡ್ಡದಾಗಿ ಬಿಡುತ್ತ, ಚಪ್ಪಾಳೆ ತಟ್ಟಿ ಕಿಲಕಿಲನೆ ನಕ್ಕುಬಿಡುವಳು. ನನಗೆ ಆ ಚಿಕ್ಕ ರತಿಯನ್ನು ಕಂಡರೆ ಮನಸ್ಸಿಗೆ ಬಹಳ ಸುಖವಾಗುತ್ತಿತ್ತು. ಒಂದು ದಿನ ಹಾಗೆಯೇ ಮಲಗಿಕೊಂಡಿದ್ದೆ. ನಿದ್ದೆ ಬಂದಿರಲಿಲ್ಲ. ಹೊರಗೆ ಸರಸಿ ಬರುತ್ತಿರುವುದು ಗೊತ್ತಾಯಿತು. ತಕ್ಷಣೆ ಕಣ್ಣು ಮುಚ್ಚಿಕೊಂಡು ನಿದ್ದೆ ಬಂದ ಹಾಗೆ ನಟಿಸಿದೆ. ಸರಸಿ ಒಳಗೆ ಬಂದು ನನ್ನನ್ನು ನೋಡಿ—ಒಳ್ಳೇ ಸಮಯ ಅಂದುಕೊಂಡಿರಬೇಕು—ಕಿವಿಯಲ್ಲಿ ಊದುವುದಕ್ಕೆಂದು ಹತ್ತಿರ ಬಂದಳು. ನಾನು, ಹತ್ತಿರ ಬರುವವರೆಗೂ ಸುಮ್ಮನಿದ್ದು, ಆಮೇಲೆ ಸರ್ರನೆ ಅವಳನ್ನು ಹಿಡಿದು ಎಳೆದು ತಬ್ಬಿಕೊಂಡು, ಅವಳ ಮುಖಕ್ಕೆ ಚೆನ್ನಾಗಿ ಒಂದು ಮುತ್ತು ಕೊಟ್ಟೆ.

ಅವಳು ಬಿಡಿಸಿಕೊಂಡು ಹೋಗಲು ಪ್ರಯತ್ನಪಟ್ಟಳು; ಸಾಧ್ಯವಾಗಲಿಲ್ಲ. ನಾನು "ನನಗೆ ಒಂದು ಸಿಹಿಯಾದ ಮುತ್ತು ಕೊಟ್ಟರೆ ಬಿಡುತ್ತೇನೆ" ಎಂದೆ. ಕೂಡಲೆ ಅವಳು ನನ್ನ ಮುಖಕ್ಕೆ ತನ್ನ ಮುಖವನ್ನಿಟ್ಟು ಒಂದು ಮುತ್ತು ಕೊಟ್ಟಳು. ನನಗೆ ಅವಳ ಮುಖವನ್ನೂ ಆ ಕಣ್ಣುಗಳ ಸೊಬಗನ್ನೂ ನೋಡಿ, ಬಾಲಚಂದ್ರನು ಮಿರುಗುವ ಎರಡು ನಕ್ಷತ್ರಗಳೊಡನೆ ಭೂಮಿಗೆ ಇಳಿದಂತಾಯಿತು. ಸರಸಿ ಎಂತಹ ಮುತ್ತು ಕೊಟ್ಟಳು! ಅವಳ ಮಿತವಾದ ದೇಹದಲ್ಲಿ ಅಡಗಿದ್ದ ಅನಂತವಾದ ಹೃದಯದ, ಅಮಿತವಾದ ಪ್ರೇಮವೊ ಅಭಿಮಾನವೊ, ಅವಳ ಆ ಎಳಸಾದ ತುಟಿಗಳನ್ನು ಹಾಯ್ದುಬಂದು ನನ್ನ ಹೃದಯಕ್ಕೆ ಇಳಿದ ಹಾಗಾಯಿತು. ಗಭೀರವಾಗಿ ಅಡಗಿ, ಈ ವಿಶ್ವವನ್ನೇ ವ್ಯಾಪಿಸಿರುವ ಅನಂತವಾದ ದೈವಿಕಪ್ರೇಮದ ಮೇಲಿನ ಮಾಯೆಯೆಂಬ ಮುಸುಕನ್ನು, ಚಿಕ್ಕ ಮಕ್ಕಳು, ತಮ್ಮ ಚಿಗುರಿನಂತಹ ತುಟಿಗಳ ಅರ್ಥವಿಲ್ಲದ ಚುಂಬನದಿಂದ ಒಂದೇ ಸಲಕ್ಕೆ ಹಾರಿಸಿಬಿಡುತ್ತಾರೆ—ಎಂದು ನನಗೆ ಬೋಧೆಯಾಗುತ್ತದೆ. ಸರಸಿ ಮುತ್ತು ಕೊಟ್ಟು ನನ್ನ ಸಾಲವನ್ನು ತೀರಿಸಿದಮೇಲೆ, ನಾನು ಹಾಸ್ಯವಾಗಿ "ಸರಸಿ, ನೀನು ಹೀಗೆಯೇ ಮಾಡುತ್ತಿರು; ನಿನ್ನನ್ನು ನಿಮ್ಮಪ್ಪನಿಗೆ ಹೇಳಿ ಒಂದು ಕೋತಿ ತಿಮ್ಮಣ್ಣನಿಗೆ ಮದುವೆ ಮಾಡಿಸಿಬಿಡುತ್ತೇನೆ! ಆಗ ಹೀಗೆಲ್ಲಾ ಮಾಡು, ನಿನಗೆ ಚೆನ್ನಾಗಿ ಪರಚಿಬಿಡುತ್ತೆ!" ಅಂದೆ. ಅವಳಿಗೆ ಸ್ವಲ್ಪ ಸಿಟ್ಟು ಬಂದು, ಚಂದ್ರನಂತಹ ಮುಖವನ್ನು ಸೌತೇಕಾಯಿಯ ಹಾಗೆ ಮಾಡಿಕೊಂಡು ಕೊರಳನ್ನು ಒಂದು ವಿಧವಾಗಿ ಕೊಂಕಿಸಿ "ಊ್ಞ" ಎಂದಳು. ಅಷ್ಟಕ್ಕೇ ಸುಮ್ಮನಾಗಲಿಲ್ಲ. ನನ್ನ ಮಾತಿಗೆ ಸರಿಯಾಗಿ ಮಾತನಾಡಬೇಕೆಂದು "ನಿನ್ನ ಹೆಂಡತಿ ಯಾರು ಗೊತ್ತೇ?" ಎಂದು ಕೇಳಿದಳು. ನಾನು ತಮಾಷೆಗೆ "ನೀನು!" ಅಂದೆ. ಅವಳು ದೊಡ್ಡದಾಗಿ ನಕ್ಕು ಕೈತಟ್ಟುತ್ತ "ಹಾಗಾದರೆ ನೀನು ಕೋತಿ ತಿಮ್ಮಣ್ಣನಾಗಬೇಕಾಯಿತಲ್ಲ!" ಅಂದುಬಿಟ್ಟಳು! ಅಬ್ಬಾ! ಸರಿಯಾಗಿಯೇ ಮಾತನಾಡಿದಳು ಅಂದುಕೊಂಡು, "ಹೌದು! ಹೌದು! ಮರೆತಿದ್ದೆ. ನಾನು ನಿನ್ನ ಮದುವೆಯಾಗುವುದಿಲ್ಲ. ಹಾಗಾದರೆ ನನಗೆ ಯಾರನ್ನು ಗೊತ್ತುಮಾಡಿರುವೆ?" ಎಂದು ಕೇಳಿದೆ. ಅವಳು "ಬಿಟ್ಟರೆ ಹೇಳುತ್ತೇನೆ" ಎಂದಳು. ನಾನು ಬಿಟ್ಟೆ. ಅವಳು ದೂರ ಓಡಿ ಹೋಗಿ, ಬಾಗಿಲಿನ ಆಚೆ ನಿಂತುಕೊಂಡು ಬಗ್ಗಿ ನೋಡಿ "ಕಪ್ಪನೆ ಕರಡಿ!" ಎಂದು

ಹೇಳಿ ಸಿಲ್ಲದೆ ಓಟಕಿತ್ತಳು. ನನಗೆ ಅವಳ ಆಟ, ಅವಳ ಮಾತು--ಕೇಳಿ ಬಹಳ ಆನಂದವಾಯಿತು. ಸರಸಿ ಬಹಳ ಸರಸಿಯಾಗುತ್ತಾಳೆ ಅಂದುಕೊಂಡೆ. ಅವಳಿಗೆ ಒಳ್ಳೆಯ ತಕ್ಕ ಗಂಡ ಸಿಕ್ಕಲಿ—ಎಂದು ಮನಸ್ಸಿನಲ್ಲೇ ಹಾರೈಸಿದೆ.

೨

ಸರಸಿಗೆ ಅವಳ ಏಳನೆಯ ಹುಟ್ಟಿದ ಹಬ್ಬದ ದಿನ ಒಂದು ಗೊಂಬೆಯನ್ನು ಬಹುಮಾನವಾಗಿ ಕೊಟ್ಟೆ. ಅದು ಅರಗಿನ ಗೊಂಬೆ— ಬೆಣ್ಣೆಕೃಷ್ಣನ ವಿಗ್ರಹ. ನಾನು ಬೆಂಗಳೂರಿನಲ್ಲಿ ಯಾವುದೋ ಅಂಗಡಿಗೆ ಹೋಗಿದ್ದಾಗ ಅದನ್ನು ನೋಡಿದ್ದೆ. ಬಹಳ ಚೆನ್ನಾಗಿತ್ತು. ಸರಸಿಗೆ ಅದನ್ನು ತೆಗೆದುಕೊಂಡು ಹೋಗಿ ಕೊಟ್ಟರೆ ಚೆನ್ನಾಗಿರುತ್ತೆ ಅಂದುಕೊಂಡು ಅದನ್ನು ಕೊಂಡು ತಂದಿದ್ದೆ. ಸರಸಿಗೆ ಅವಳ ಹುಟ್ಟಿದ ಹಬ್ಬದ ದಿನ ಬಹಳ ಸಡಗರ. ಹಿಂದಿನ ರಾತ್ರಿಯೆಲ್ಲಾ ಬಹುಶಃ ಅವಳಿಗೆ ನಿದ್ದೆ ಬಂದಿರಲಾರದು. ಮೂರು ದಿನಗಳ ಹಿಂದೆಯೆ ಅವಳು ನನ್ನ ಹತ್ತಿರ ಬಂದು, ನನ್ನ ಹೆಸರು ಹಿಡಿದು ಕರೆದು “ ಉಣ್ಣಾ–ಉಣ್ಣಾ–ಮತ್ತೇ, ನಾಳೆ ಅಲ್ಲ—ಅದರ ನಾಳೆ ನನ್ನ ಹುಟ್ಟಿದ ಹಬ್ಬ—ನೀನೂ ಊಟಕ್ಕೆ ಬರಬೇಕು, ಮರೀಬೇಡಾ ಮತ್ತೆ, ನೋಡು ! ” ಎಂದು ಔತಣ ಹೇಳಿ ಹೋಗಿದ್ದಳು. ಹುಟ್ಟಿದ ಹಬ್ಬದ ದಿನ ಅವಳು ಎಲ್ಲರಿಗಿಂತಲೂ ಮುಂಚೆಯೇ ಎದ್ದು ಎರೆದುಕೊಂಡು ಚೆನ್ನಾಗಿ ಶೃಂಗಾರ ಮಾಡಿಕೊಂಡು ಬಂದು, ನನಗೆ ತೋರಿಸಿದಳು. ಅವಳು ಹೊಸದಾಗಿ ಏನು ಉಡಿಗೆತೊಡಿಗೆ ಹಾಕಿಕೊಂಡರೂ ನನಗೆ ಮೊದಲು ಬಂದು ತೋರಿಸಬೇಕು ; ನಾನು, ಬಹಳ ಚೆನ್ನಾಗಿದೆ—ಎಂದು ತಲೆಯನ್ನು ತೂಗಬೇಕು ; ಅಲ್ಲಿಯವರೆಗೂ ಅವಳಿಗೆ ಸಮಾಧಾನವಿರುವುದಿಲ್ಲ. ಊಟಕ್ಕೆ ಕುಳಿತುಕೊಳ್ಳುವಾಗಲಂತೂ ಅವಳ ಮಾತೇ ಮಾತು ! ನನ್ನ ಹತ್ತಿರ ಕುಳಿತುಕೊಳ್ಳಬೇಕೆಂದು ಅವಳ ಇಷ್ಟ. ಹೆಂಗಸರ ಮಧ್ಯೇ ಕುಳಿತುಕೊಳ್ಳಲಿ —ಎಂದು ಅವಳ ತಾಯಿ ಹೇಳಿದರು. “ ನೀನು ಈ ದಿನ ಹೆಂಗಸರ ಮಧ್ಯೆ ಕುಳಿತುಕೋಬೇಕಮ್ಮ ” ಎಂದು ನಾನೂ ಹೇಳಿದೆ. ಅವಳು ಕೇಳಳು. ಕೊನೆಗೆ “ ನೀನೂ ಅಲ್ಲೇ ಬಾ ” ಎಂದಳು. ನನಗೆ ವಿಪರೀತ ನಗು ಬಂತು ! “ ಸರಿ ಚೆನ್ನಾಯ್ತು ! ನಾನೇನು ನಿನ್ನ ಹಾಗೆ ಹೆಂಗಸೆ ? ” ಎಂದೆ. ಕೊನೆಯಲ್ಲಿ,

ಅವಳು ಹೆಂಗಸರ ಮಧ್ಯೆ ಕುಳಿತುಕೊಳ್ಳತಕ್ಕದ್ದೆಂದೂ, ನಾನು ಅವಳಿಗೆ ಕಾಣುವ ಹಾಗೆ ಗಂಡಸರ ಮಧ್ಯೆ ಕುಳಿತುಕೊಳ್ಳತಕ್ಕದ್ದೆಂದೂ ತೀರ್ಮಾನವಾಗಿ ಚರ್ಚೆ ಮುಗಿಯಿತು.

ಊಟವಾಯಿತು. ಗಂಡಸರೆಲ್ಲಾ ತಾಂಬೂಲಕ್ಕೆ ಕುಳಿತರು. ನಾನೂ ಅವರ ಮಧ್ಯೆ ಕುಳಿತಿದ್ದೆ. ಸರಸಿ ಹಿಂದಿನಿಂದ ಓಡಿಬಂದು ನನ್ನ ಬೆನ್ನು ಬಾಚಿ ತಬ್ಬಿಕೊಂಡು, ಸಾಯಂಕಾಲ ಆರತಿಗೆ ಬರಬೇಕೆಂದು ಕಿವಿಯಲ್ಲಿ ಊದಿ ಹೇಳಿದಳು. ನಾನು ' ಉಹು ' ಎಂದರೆ ನನಗೆ ಗೊತ್ತು—ಸಾಯಂಕಾಲ ಆರತಿ ಚೆನ್ನಾಗಿ ನಡೆಯುವುದಿಲ್ಲ—ಎಂದು. ಅಲ್ಲದೆ ನನಗೂ ಆ ಬಾಲಸುಂದರಿ ಹಸೆಯ ಮೇಲೆ ಕುಳಿತಿರುವುದನ್ನು ನೋಡಬೇಕೆಂದು ಆಸೆಯಾಯಿತು. ಆಗಲಿ, ಎಂದು ಒಪ್ಪಿಕೊಂಡೆ.

ಸಾಯಂಕಾಲ ಅವರ ಮನೆಗೆ ಹೋದೆ. ಹೋಗುವಾಗ ಜೊತೆಯಲ್ಲಿ ಬೆಂಗಳೂರಿಂದ ತಂದಿದ್ದ ಬೆಣ್ಣೆ ಕೃಷ್ಣನ ಗೊಂಬೆಯನ್ನು ತೆಗೆದುಕೊಂಡು ಹೋದೆ. ಒಳಗಡೆ ದೊಡ್ಡ ಹಜಾರದಲ್ಲಿ ಆರತಿಯಾಗುವುದಕ್ಕೆ ಏರ್ಪಾಡಾಗಿತ್ತು. ನಾನು ಜಗುಲಿಯ ಮೇಲೆ ಹೋಗಿ, ಕಿಟಕಿಗೆ ಸ್ವಲ್ಪ ಓರೆಯಾಗಿ ನಿಂತುಕೊಂಡೆ. ಒಳಗೆ ಕಿಟಕಿಗೆ ಎದುರಾಗಿ ಹಸೆಯ ಮೇಲೆ, ಸರಸಿ, ಅವಳ ಇಬ್ಬರು ತಂಗಿಯರು ಮತ್ತು ಒಂದು ಗಂಡು ಮಗು ಕುಳಿತಿದ್ದರು. ನನಗೆ ನೋಡಿ ಬಹಳ ಆನಂದವಾಯಿತು. ಕ್ಷಣಕಾಲ ನನ್ನ ಹೃದಯವು ಎಲ್ಲವನ್ನೂ ಮರೆತು ಆ ಆನಂದವನ್ನು ಮಾತ್ರ ಅನುಭವಮಾಡಿತು. ಅವಳು ಕೈಕಾಲುಗಳನ್ನು ಮುದುರಿಕೊಂಡು ಕುಳಿತಿದ್ದ ಆ ಸೊಗಸೋ, ಆ ಎಳೆಯ ಸುಂದರವಾದ ಮುಖವೋ, ಅದರ ತುಂಬಾ ಆ ವಿಶಾಲವಾದ ಎಳೆ ಮಿಂಚಿನ ಕಣ್ಣುಗಳೋ, ಹಸೆಯ ನಿಯಮವನ್ನನುಸರಿಸಿ ಸ್ವಲ್ಪ ಬಾಗಿದ ಅವಳ ಕೊರಳ ಕೊಂಕೋ, ಇವು ಒಂದೊಂದರಲ್ಲಿಯೂ ಒಟ್ಟಿನಲ್ಲಿಯೂ ಕಾಣಬರುತ್ತಿದ್ದ ಆ ಗಾಂಭೀರ್ಯವೋ!—ನನ್ನ ಕಣ್ದಣಿಯೆ ನೋಡಿದೆ. ನನ್ನ ಮನಸ್ಸಿಗೆ, ಆ ಕ್ಷಣವೇ ತಕ್ಕ ಗಂಡು ಸಿಕ್ಕಿಬಿಟ್ಟರೆ ಆ ಪುಟ್ಟ ವಧುವಿಗೆ ಅಲ್ಲಿಯೇ ಮದುವೆ ಮಾಡಿಬಿಡಬಹುದಲ್ಲಾ, ಅನ್ನಿಸಿತು. ಯೋಗ್ಯನೂ ತಕ್ಕವನೂ ಆದ ಗಂಡು ಸಿಕ್ಕಲಿ—ಎಂದು ಪುನಃ ಪುನಃ ಹಾರೈಸಿದೆ. ಇನ್ನೂ ಆರತಿ ಆಗಿರಲಿಲ್ಲ. ಬಂದಿದ್ದ ಮುತ್ತೈದೆಯರೆಲ್ಲಾ ಒಬ್ಬೊಬ್ಬರಾಗಿ ತಮತಮಗೆ ಬಂದ ಹಾಡುಗಳನ್ನು ಹೇಳುತ್ತಿದ್ದರು. ಸರಸಿ ಹಸೆಯ ಮೇಲೆ ಕುಳಿತು ಬಹಳ

ಜೋತ್ತಾಗಿತ್ತೆಂದು ತೋರುತ್ತದೆ. ಎಷ್ಟು ಹೊತ್ತು ಸುಮ್ಮನೆ ಕಲ್ಲಿನ ಗೊಂಬೆಯ ಹಾಗೆ ಕುಳಿತಿರುವುದಕ್ಕಾಗುತ್ತದೆ? ಅವಳಿಗೆ ಬಹಳ ಹೊತ್ತು ಗಂಭೀರವಾಗಿ ಕುಳಿತು ಅಭ್ಯಾಸವಿಲ್ಲ! ಸ್ವಲ್ಪ ಸ್ವಲ್ಪವಾಗಿ ಕೈಕಾಲು ಅಲ್ಲಾಡಿಸುವುದು, ಸೆರಗು ಸರಿಯಾಗಿದ್ದರೂ ಪುನಃ ಪುನಃ ಸರಿಮಾಡಿಕೊಳ್ಳುವುದು—ಹೀಗೆ ಪ್ರಾರಂಭಿಸಿ, ಬರಬರುತ್ತ ತಲೆಯನ್ನು ಪೂರ್ತಿಯಾಗಿ ಎತ್ತಿ, ಕಿಟಕಿಯ ಹೊರಗೆ ನಾನು ನಿಂತಿದ್ದುದನ್ನು ನೋಡಿದಳು. ನೋಡಿದಳೋ ಇಲ್ಲವೋ, ಕಣ್ಣುಗಳು ಅಗಲವಾದುವು. ಅವುಗಳ ತುಂಬ ಮಿಂಚು! ತಾನು ಹಸೆಯ ಮೇಲೆ ಕುಳಿತಿದ್ದುದನ್ನು ಮರೆತುಬಿಟ್ಟಳು! ನನಗೆ 'ಇನ್ನೇನು ಗತಿ! ಎದ್ದು ಓಡಿ ಬಂದುಬಿಡುತ್ತಾಳೊ ಏನೋ!' ಎಂದು ಭಯವಾಯಿತು. ಓಡಿ ಬರಲಿಲ್ಲ. ಆದರೆ ಏನು! ಥಟ್ಟನೆ ಹಸೆಮಣೆಯ ಮೇಲೆ ಎದ್ದು ನಿಂತುಕೊಂಡು ಕೈ ತಟ್ಟುತ್ತ, ನನ್ನ ಹೆಸರು ಹಿಡಿದು ಕೂಗಿ "ಬಾ! ಬಾ! ಒಳಗೆ ಬಂದು ಕೂತುಕೋ" ಎಂದು ಕೂಗಿಬಿಟ್ಟಳು! ಶುದ್ಧ ಹುಡುಗಿ! ಸ್ವಲ್ಪವೂ ಗೊತ್ತಿಲ್ಲ. ಅಲ್ಲಿದ್ದ ಹೆಂಗಸರೆಲ್ಲಾ ಕಿಟಕಿಯ ಕಡೆ ನೋಡಿದರು. ಅವರೆಲ್ಲಾ ನನ್ನ ಕಡೆ ನೋಡುವ ಹಾಗೆ ಮಾಡಿಬಿಟ್ಟಳಲ್ಲಾ—ಎಂದು ನನಗೆ ಬಹಳ ನಾಚಿಕೆಯಾಯಿತು. ಕಿಟಕಿಯಿಂದ ಸ್ವಲ್ಪ ಪಕ್ಕಕ್ಕೆ ಹೋಗಿ 'ಸುಮ್ಮನಿರು!—ಬರುತ್ತೇನೆ' ಎಂದು ಹೇಳುವ ಹಾಗೆ ಕೈಸನ್ನೆ ಮಾಡಿದೆ. ಆಗ ಪುನಃ ಹಸೆಯ ಮೇಲೆ ಕುಳಿತುಕೊಂಡಳು. ಆರತಿಯಾಗುವುದಕ್ಕೆ ಮುಂಚೆ ಸರಸಿಯ ತಾಯಿಯನ್ನು ಕರೆದು, ನಾನು ತೆಗೆದುಕೊಂಡು ಹೋಗಿದ್ದ ಗೊಂಬೆಯನ್ನು ಅವರ ಕೈಲಿಟ್ಟು, "ಇದು ಸರಸಿಗೆ, ಅವಳ ಹುಟ್ಟಿದ ಹಬ್ಬದ ಉಡುಗೊರೆ" ಎಂದು ಹೇಳಿ ಕೊಟ್ಟೆ. ನಾನು ನೋಡುತ್ತಿದ್ದ ಹಾಗೆಯೇ ಅವರು ಅದನ್ನು ತೆಗೆದುಕೊಂಡು ಹೋಗಿ, ಅವಳ ಹಣೆಗೆ ಕುಂಕುಮವನ್ನಿಟ್ಟು, ಆ ಗೊಂಬೆಯನ್ನು ಅವಳಿಗೆ ಕೊಟ್ಟರು. ಅವಳಿಗೆ ಎಷ್ಟು ಸಂತೋಷವಾಯಿತೋ ಅದನ್ನು ನಾನು ಹೇಳಲಾರೆ. ಅವಳ ಮುಖ ಅರಳಿಹೋಯಿತು. ಅದನ್ನು ಕೈಲಿ ಹಿಡಿದುಕೊಂಡು ಬೆರಗಣ್ಣಿನಿಂದ ನೋಡುತ್ತ, ತೊಡೆಯ ಮೇಲೆ ಇಟ್ಟುಕೊಂಡಳು—ತಾಯಿ ತನ್ನ ಮಗುವಿಗೆ ನಾಮಕರಣವಾಗುವಾಗ ಅದನ್ನು ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಾಳಲ್ಲಾ ಹಾಗೆ. ಇದುವರೆಗೂ ಇದ್ದ ಆವಳ ಗಾಂಭೀರ್ಯ ಹಾರಿಹೋಯಿತು. ನಿಮಿಷಕ್ಕೆ ನಾಲ್ಕು ಸಾರಿ ನನ್ನ ಕಡೆ ನೋಡುವುದಕ್ಕೆ ಪ್ರಾರಂಭಿಸಿದಳು. ತನಗೆ ಆರತಿ

ಅನ್ನುವುದನ್ನು ಮರೆತುಬಿಟ್ಟಳು! ಬಂದವರಿಗೆಲ್ಲಾ ಅವಳ ಆಟವನ್ನು ನೋಡಿ ನಗು! ಸರಸಿ ಅದನ್ನು ತನ್ನ ಪುಟ್ಟ ಎದೆಗಪ್ಪಿಕೊಂಡು ಮುತ್ತಿಡುವುದಕ್ಕೆ ಪ್ರಾರಂಭಿಸಿದಳು! ಅವಳ ತಾಯಿ "ಸರಸು! ಇದೇನು? ಗಂಭೀರವಾಗಿ ಕುಳಿತುಕೊ! ಅದನ್ನು ಪಕ್ಕದಲ್ಲಿಡು!" ಎಂದು ಸ್ವಲ್ಪ ಗದರಿಸಿದರು. ನನಗೆ 'ಅಯ್ಯೋ, ಯಾಕೆ ಗದರಿಸಿದರೋ?' ಅನ್ನಿಸಿತು. ಸರಸಿ ಮನಸ್ಸಿಲ್ಲದ ಮನಸ್ಸಿನಿಂದ ಅದನ್ನು ಪಕ್ಕದಲ್ಲಿಟ್ಟುಕೊಂಡು, ಗಂಭೀರವಾಗಿ ಕುಳಿತುಕೊಳ್ಳಲು ಪ್ರಯತ್ನ ಮಾಡಿದಳು. ಬಹಳ ಕಷ್ಟವಾಯಿತು. ಆದರೂ ಕ್ಷಣಕ್ಕೆ ಒಂದು ಸಲ ಅದರ ಕಡೆಗೆ ಓರೆಗಣ್ಣಿನಿಂದ ನೋಡುವಳು. ಮೆಲ್ಲನೆ ಬಲಗೈಯನ್ನು ಪಕ್ಕಕ್ಕೆ ಎಳೆದುಕೊಂಡು ಅದನ್ನು ನಿಧಾನವಾಗಿ ಸವರುವಳು. ಅದರ ಮುಖ, ಕೈ, ಕಾಲು, ಹೊಟ್ಟೆ ಎಲ್ಲವನ್ನೂ ತಡವರಿಸಿ ನೋಡುವಳು. ಅವಳ ತಾಯಿ, ಇದನ್ನು ಕಂಡು ಒಂದು ಸಲ "ಸರಸಾ!" ಎಂದು ಕಣ್ಣುಬಿಟ್ಟರು. ಸರಸಿ ಸರ್ರನೆ ಕೈಯೆಳೆದುಕೊಂಡು ಮುಖದ ಮೇಲೆ ಗಂಭೀರ ಮುದ್ರೆ ಹಾಕಿಕೊಂಡಳು! ನನಗೆ ತಡೆಯಲಾರದಷ್ಟು ನಗು ಬಂತು. ಅವಳ ತಾಯಿಯೂ ಬಂದವರಲ್ಲಿ ಒಬ್ಬರೂ ಸೇರಿ ಆರತಿ ಎತ್ತಿದರು. ಎತ್ತುವುದಕ್ಕೆ ಮುಂಚೆ ಹಸೆಯ ಮೇಲೆ ಇದ್ದವರಿಗೆಲ್ಲಾ ಹಣೆಗೆ ಕುಂಕುಮವನ್ನಿಟ್ಟು ತಾಂಬೂಲ ಕೊಟ್ಟರು. ಸರಸಿಯ ಮನಸ್ಸಿನಲ್ಲಿ, ಆ ಗೊಂಬೆಗೂ ಕುಂಕುಮವನ್ನು ಹಚ್ಚಿಸಬೇಕು, ತಾಂಬೂಲ ಕೊಡಿಸಬೇಕು—ಎಂದು. ಆದುದರಿಂದ ಅವರು ತನಗೆ ಕುಂಕುಮ ಹಚ್ಚಿ ತಾಂಬೂಲ ಕೊಡುವಾಗ, ಪಕ್ಕದಲ್ಲಿದ್ದ ಆ ಗೊಂಬೆಯನ್ನು ಕೈಗೆ ತೆಗೆದುಕೊಂಡು ಪುನಃ ತೊಡೆಯ ಮೇಲೆ ಮಲಗಿಸಿಕೊಂಡಿದ್ದಳು. ತಮಗೆಲ್ಲಾ ಹಚ್ಚಿ ಅದಮೇಲೆ ಗೊಂಬೆಗೂ ಹಚ್ಚುತ್ತಾರೆ—ಅಂದುಕೊಂಡಿದ್ದಳು ಎಂದು ಕಾಣುತ್ತೆ. ಆದರೆ ಅವರು ಹಚ್ಚಲಿಲ್ಲ. ಸರಸಿಗೆ ಸ್ವಲ್ಪ ರೇಗಿರಬೇಕು! ಅವಳು ನಿರ್ಭಯವಾಗಿ ಆ ಗೊಂಬೆಯನ್ನು ಕೈಲಿ ತೆಗೆದುಕೊಂಡು ಮುಂದಕ್ಕೆ ಚಾಚಿ "ಅಜ್ಜಿ! ಅಜ್ಜಿ! ಇದಕ್ಕೂ ಕುಂಕ್ಮ ಎಲೇ ಅಡಿಕೆ?" ಎಂದಳು; ಅವರು ನಕ್ಕು ಅದಕ್ಕೂ ಕುಂಕುಮ ಹಚ್ಚಿ, ತಾಂಬೂಲ ಕೊಟ್ಟರು. ಆರತಿಗೆ ಬಂದಿದ್ದವರಿಗೆಲ್ಲಾ ಅರಿಶಿನ, ಕುಂಕುಮ, ತಾಂಬೂಲ, ಬಾಗಿನ ಕೊಟ್ಟು ಆಯಿತು; ಅವಳಿಕ್ಕೆ ಉಂಡೆ, ಬಾಳೇಹಣ್ಣಿನ ಬಾಗಿನ. ಸರಸಿ ಯಥಾರೀತಿಯಾಗಿ ಆ ಗೊಂಬೆಗೂ ಬಾಗಿನ ಕೊಡಿಸಿದಳು. ನಾನು ಮನಸ್ಸಿನಲ್ಲೇ 'ಭೇಷ್!' ಅಂದುಕೊಂಡೆ.

ಸರಸಿಗೆ, ಎಷ್ಟು ಹೊತ್ತಿಗೆ ಬಂದಿದ್ದವರೆಲ್ಲಾ ಹೊರಟುಹೋಗುತ್ತಾರೋ —ಅನ್ನಿಸಿರಬೇಕು. ಅವರೆಲ್ಲಾ ಹೊರಡುವುದಕ್ಕೆ ಏಳಲು ನಾನು ಜಗುಲಿಯ ಮೇಲಿದ್ದ ಕೊಠಡಿಯೊಳಕ್ಕೆ ಹೋದೆ! ಅವರು ಹೊರಟದ್ದೇ ತಡ, ಸರಸಿ ನಾನಿದ್ದ ಕೊಠಡಿಯೊಳಕ್ಕೆ ಚಿಗರಿಮರಿ ಹಾರಿ ಬಂದಹಾಗೆ ಬಂದಳು. ನಾನು ಅವಳನ್ನು ಕೂರಿಸಿಕೊಂಡು ಮೃದುವಾದ ಅವಳ ಗಲ್ಲವನ್ನು ಸವರುತ್ತ "ಎಲ್ಲಿ! ಸರು, ಒಂದು ಮುತ್ತು ಕೊಡು—ನೋಡೋಣ!" ಎಂದೆ. ಸರಸಿ ಒಂದಕ್ಕೆ ಹತ್ತಾಗಿ ನನ್ನ ಮುಖವನ್ನೆಲ್ಲಾ ಮುತ್ತಿನಿಂದ ತುಂಬಿಬಿಟ್ಟಳು. ನನಗೆ ಜೋಡಿ ಬಾಗಿನ; ಸರಸಿಯ ತಾಯಿ ಕೊಟ್ಟದು ಒಂದು, ಅವಳು ಖುದ್ದಾಗಿ ಕೊಟ್ಟದ್ದು ಒಂದು. ನಾನು ಬಾಗಿನವನ್ನೆಲ್ಲಾ ತುಂಬಿಕೊಂಡು ಹೊರಡೋಣವೆಂದು ಎದ್ದರೆ ಸರಸಿ ಬಿಡಳು. ನಾನು ಅಲ್ಲೇ ಊಟ ಮಾಡಿಕೊಂಡು ಹೋಗಬೇಕು —ಎಂದು ಅವಳ ಇಷ್ಟ. ಅವಳ ಇಷ್ಟಪ್ರಕಾರ ಅಲ್ಲಿಯೇ ಊಟ ಮಾಡಿ ಮನೆಗೆ ಹೊರಟೆ. ಸ್ವಲ್ಪ ದೂರ ಬಂದಿದ್ದೆ. ಅಷ್ಟರಲ್ಲೇ ಸರಸಿ ನನ್ನ ಹೆಸರು ಹಿಡಿದು ಕೂಗಿದಳು. ನಾನು ತಿರುಗಿ ನೋಡಿದೆ. ಸರಸಿ ಅವರ ಮನೆಯ ಮೆಟ್ಟಲಿನ ಮೇಲೆ ನಿಂತಿದ್ದಳು. ನಾನು ಕೊಟ್ಟಿದ್ದ ಕೈಗೊಂಬೆಯನ್ನು ಎಡಗೈಯಿಂದ ತನ್ನ ಹೃದಯಕ್ಕೆ ಅವಚಿಕೊಂಡಿದ್ದಳು. ನಾನು ತಿರುಗಿದುದನ್ನು ನೋಡಿ ಅವಳು ಮೆಲ್ಲಮೆಲ್ಲನೆ ಬಳುಕುತ್ತ ಕಂಬವನ್ನು ಒರಗಿಕೊಂಡು, ನಗುತ್ತ "ನಾಳೇನೂ ಬರ್ತೀಯಾ?" ಎಂದು ಕೇಳಿದಳು. "ಆಗಲಿ" ಎಂದು ಕೂಗಿ ಹೇಳಿ, ತಿರುಗಿ ಮನೆಯ ಕಡೆ ಹೊರಟೆ. ಹೋಗುತ್ತಾ, ಸ್ವಲ್ಪ ಹೊತ್ತಿಗೆ ಮುಂಚೆ ನೋಡಿದ್ದೆಲ್ಲಾ ಮನಸ್ಸಿಗೆ ಬಂದು ಕಣ್ಣಿಗೆ ಕಟ್ಟಿದಂತಾಯಿತು. ಅಷ್ಟು ಪುಟ್ಟ ದೇಹದಲ್ಲಿ ಎಷ್ಟು ಅಭಿಮಾನ! ಎಷ್ಟು ಪ್ರೇಮ!!—ಅಂದುಕೊಂಡೆ. ದೇವರು ಪ್ರಪಂಚದಲ್ಲಿನ ತಾಯ್ತನವನ್ನೆಲ್ಲಾ ಈ ಪುಟ್ಟ ಶರೀರದಲ್ಲಿ ಎರಕಹೊಯ್ದಿ ದ್ದಾನೆ—ಎಂದು ತೋರಿತು. ಅವಳಿಗೆ ಯಾವಾಗಲೂ ಸುಖವೇ ಇರಲಿ—ಎಂದು ಅತ್ಯಂತ ಗೂಢವಾಗಿ ಹಾರೈಸಿದೆ. ಅಷ್ಟರಲ್ಲೇ ಮನೆ ಸಿಕ್ಕಿತು.

೩

ಮೂರನೆಯ ದಿನ ಬೆಳಿಗ್ಗೆ ನಾನಿನ್ನೂ ಎದ್ದೇ ಇರಲಿಲ್ಲ; ಅಷ್ಟು ಹೊತ್ತಿಗೇ ಸರಸಿ ನಮ್ಮ ಮನೆಗೆ ಬಂದುಬಿಟ್ಟಿದ್ದಳು. ಅವಳ ಕೈಯಲ್ಲಿ ನಾನು

ಕೊಟ್ಟಿದ್ದ ಗೊಂಬೆ ಇತ್ತು. ನಾನು "ಸರಸಿ" ಎಂದು ಕೂಗಿ, ಅವಳ ಕಡೆಗೆ ಮಗ್ಗುಲು ತಿರುಗಿದೆ. ಸರಸಿ ಬಂದು ನನ್ನ ಪಕ್ಕದಲ್ಲಿ ಹಾಸಿಗೆಯ ಮೇಲೆ ಕುಳಿತುಕೊಂಡಳು. ನಾನು ಯೋಚಿಸಿದ್ದರಲ್ಲಿ, ಅವಳು ಬಹುಶಃ ರಾತ್ರಿಯೆಲ್ಲಾ ನಿದ್ದೆ ಮಾಡಿರಲಾರಳು ಎಂದು ತೋರಿತು. "ಏನು ಸರಸಿ, ಇಷ್ಟು ಬೇಗ ಬಂದುಬಿಟ್ಟೆ! ರಾತ್ರಿ ನಿದ್ದೆಮಾಡಿದೆಯಾ?" ಎಂದು ಕೇಳಿದೆ. ಅದಕ್ಕೆ ಅವಳು "ಇಲ್ಲ, ನನ್ಮಗು ಭಾಳ ಅಳ್ತಿತ್ತು; ನಿದ್ದೆಮಾಡೋಕೆ ಬಿಡಲೇ ಇಲ್ಲ" ಎಂದು ಹೇಳಿ, ಆ ಅರಗಿನ ಗೊಂಬೆಯನ್ನು ತೊಡೆಯ ಮೇಲೆ ಇಟ್ಟುಕೊಂಡು ತಟ್ಟ ತೊಡಗಿದಳು. ನನಗೆ ನಗು ಬರುವ ಹಾಗಾಯಿತು. ನಕ್ಕರೆ ಕೆಲಸ ಕೆಟ್ಟು ಹೋಗಿಬಿಡುತ್ತೆ ಅಂದುಕೊಂಡು, ನಗುವನ್ನು ತಡೆದು, ಬಹು ವಾತ್ಸಲ್ಯದಿಂದ "ಯಾಕೆ?" ಎಂದು ಕೇಳಿದೆ.

"ಅದಕ್ಕೇ—ಮತ್ತೇ ಜ್ವರಾ ಬಂದಿತ್ತು."

"ಅಯ್ಯೋ! ಪಾಪ! ಯಾಕೆ ಬಂತು?—ಜ್ವರಾ!"

"ರಾತ್ರೆ ಬಾಳೇ ಹಣ್ಣು-ಅವಲಕ್ಕಿ ಉಂಡೆ—ಎಲ್ಲಾ ತಿಂದ್ಬಿಡ್ತು—ಅದಕ್ಕೇ ಬಂತು."

ಮಕ್ಕಳದು ಎಂತಹ ಕಲ್ಪನಾಶಕ್ತಿ! ನೋಡಿ, ಸರಸಿಗೆ ಅದು ಅರಗಿನ ಗೊಂಬೆಯಾಗಿರಲಿಲ್ಲ. ಅದು ಜೀವವುಳ್ಳ, ಮುದ್ದಾದ, ಅವಲಕ್ಕಿಯ ಉಂಡೆ-ಬಾಳೇಹಣ್ಣು, ಎಲ್ಲಾ ತಿಂದುಬಿಟ್ಟರೆ ಜ್ವರಾ ಬರುವಂತಹ—ಮಗುವಾಗಿ ಬಿಟ್ಟಿದ್ದಿತು!

ನಾನು "ಹೋಗಲಿ ಬಿಡು, ಸರಸು—ಆಸ್ಪತ್ರೆಗೆ ಹೋಗಿ ಔಷಧಿ ತಂದುಕೊಡೋಣ" ಎಂದು ಹೇಳಿ, ಸ್ವಲ್ಪ ಹೊತ್ತು ಸುಮ್ಮನಿದ್ದೆ. ಸರಸಿ ತನ್ನ ತೊಡೆಯನ್ನು ಮೆಲ್ಲಗೆ ಅಲುಗಿಸುತ್ತ ಆ 'ಮಗು'ವಿಗೆ ನಿದ್ದೆ ಬರುವ ಹಾಗೆ ಮಾಡುತ್ತಿದ್ದಳು. ನಾನು ಪುನಃ "ಸರಸೀ" ಎಂದು ಕರೆದೆ. ಅವಳು ಫಕ್ಕನೆ ನನ್ನ ಕಡೆಗೆ ತಿರುಗಿ, ದೊಡ್ಡದಾಗಿ ಕಣ್ಣು ಬಿಟ್ಟು, ತುಟಿಯ ಮೇಲೆ ಬೆರಳನ್ನಿಟ್ಟು "ನಿದ್ದೆ ಮಾಡ್ತಾ ಇದೆ! ಸದ್ಮಾಡ್ಬೇಡ!" ಎಂದು ಮೆಲ್ಲನೆ ಉಸುರಿದಳು. ನಾನು ಬಾಯಿ ಭದ್ರವಾಗಿ ಹಿಡಿದುಕೊಂಡು ನಗು ತಡೆದೆ. ಇನ್ನು ನಗು ಬರುವುದಿಲ್ಲ ಅನ್ನುವ ಹಾಗಾದಮೇಲೆ, ಪಿಸುಮಾತಿನಲ್ಲಿ "ಸರಸಿ" ಎಂದು ಕರೆದೆ. ಸರಸಿ ನನ್ನ ಕಡೆಗೆ ತಿರುಗಿದಳು.

" ಈ ಮಗುವಿನ ತಾಯಿ ಯಾರೆ, ಸರಸ ? " ಎಂದು ಕೇಳಿದೆ.

' ನಾನು ' ಎಂದು ಹೇಳುತ್ತಾಳೆ ಎಂದು ಗೊತ್ತಿದ್ದರೂ, ತಮಾಷೆಗೆ ಪುನಃ ಕೇಳಿದೆ.

" ನಾನು " ಎಂದು ಅವಳಿಂದ ಉತ್ತರ ಬಂತು.

" ತಂದೆ ಯಾರು ? "

ಈ ಪ್ರಶ್ನೆಗೆ ಉತ್ತರ ಬರಲಿಲ್ಲ. ಏನು ಹೇಳಬೇಕೆಂದು ತೋರದೆ ಅವಳ ಮನಸ್ಸಿನಲ್ಲುಂಟಾಗಿದ್ದ ಗಲಿಬಿಲಿ ಭಾವ ಮುಖದಲ್ಲಿ ತೋರಿತು. ನಾನು,

" ನಿನ್ನ ತಾಯಿ ಯಾರೆ ? " ಎಂದು ಕೇಳಿದೆ.

" ಅಜ್ಜಿ."

" ತಂದೆ ? "

" ಅಪ್ಪ."

(ಅವಳು ತಂದೆಯನ್ನು ' ಅಪ್ಪ ' ಎಂದು ಕರೆಯುವಳು.)

" ಈಗ ಹೇಳು ; ಈ ಮಗುವಿನ ತಾಯಿ ಯಾರು ? "

"—ನಾನು "

" ಸರಿ. ನೀನು ತಾಯಿಯಾದರೆ ಅಪ್ಪನೂ ಒಬ್ಬರು ಇರಬೇಕಾಯಿತಲ್ಲ, ಅವರು ಯಾರು ? "

ಪುನಃ ಉತ್ತರವಿಲ್ಲ. ಸ್ವಲ್ಪ ಹೊತ್ತು ಯೋಚಿಸಿ, ಆಮೇಲೆ ಮನಸ್ಸಿಗೆ ಏನೇನೋ ಹೊಳೆದಿರಬಹುದು, ಥಟ್ಟನೆ ನನ್ನ ಕಡೆ ತಿರುಗಿ " ನೀನು ! " ಅಂದು ಬಿಟ್ಟಳು ! ಶುದ್ಧ ಹುಡುಗಿ ! ನನಗೋ ನಗು, ಮಳೆಗಾಲದಲ್ಲಿ ಕನ್ನಂಬಾಡಿಕಟ್ಟೆ ತುಂಬಿದ ಹಾಗೆ ತುಂಬಿಕೊಂಡು ಬಂತು. ಗಟ್ಟಿಯಾಗಿ ನಕ್ಕುಬಿಟ್ಟೆ ! ಅವಳು " ಅಯ್ಯೋ ! ಹೋಗು ! ಮಗೂನ ಎಬ್ಬಿಸ್ಬಿಟ್ಟೆ ! " ಎಂದು ಹೇಳಿ ಹುಬ್ಬು ಗಂಟಿಕ್ಕಿ, ನನ್ನ ಕಡೆಗೆ ನೋಡಿದಳು. ನಾನು " ಅದನ್ನು ಇಲ್ಲಿ—ನನ್ನ ಹಾಸಿಗೆಯ ಮೇಲೆ ಮಲಗಿಸು ; ನಾನು ತಟ್ಟಿ ಮತ್ತೆ ನಿದ್ದೆ ಬರಸ್ತೀನಿ " ಎಂದು ಹೇಳಿ, ಅದನ್ನು ನನ್ನ ಪಕ್ಕದಲ್ಲಿ ಹಾಸಿಗೆಯ ಮೇಲೆ ಇಟ್ಟುಕೊಂಡು ತಟ್ಟುತ್ತಾ, ಅವಳನ್ನು ಕುರಿತು, " ಅಲ್ವೇ ಸರಸಿ, ನಾನು ಹ್ಯಾಗೆ ಅದರ ತಂದೆ ? " ಎಂದು ಕೇಳಿದೆ.

" ಶೀನೇ ಅಪ್ಪೇನು ತಂದ್ಕೊಟ್ಟಿದ್ದು ಅದನ್ನ ? "

ನಾನು ಏನು ಹೇಳುವುದು? ಒಪ್ಪಿಕೊಳ್ಳಬೇಕಾಗಿ ಬಂತು. ಎಷ್ಟು ಸುಲಭವಾಗಿ ನನ್ನನ್ನು ಒಬ್ಬ ತಂದೆಯನ್ನಾಗಿ ಮಾಡಿಬಿಟ್ಟಳು—ಸರಸಿ! ದೊಡ್ಡವಳಾದಮೇಲೆ ಒಳ್ಳೆಯ ತಾಯಿಯಾಗುತ್ತಾಳೆ ಅಂದುಕೊಂಡೆ. ಸರಸಿ ನನ್ನ ಕಡೆಗೇ ನೋಡುತ್ತಿದ್ದಳು. ನಾನು ರಾಗವಾಗಿ "ಸರಸೀ" ಎಂದು ಕರೆದು, ಅವಳನ್ನು ಹತ್ತಿರಕ್ಕೆ ಎಳೆದುಕೊಂಡು, ಅವಳ ಮುಖವನ್ನೇ ನೋಡುತ್ತಿದ್ದೆ. ಅವಳಿಗೆ ಅರ್ಥವಾಯಿತು. ಬಗ್ಗಿ ನನಗೊಂದು ಮುತ್ತು ಕೊಟ್ಟಳು. ನಾನು ಎದ್ದು ಅವಳನ್ನು ಅಲ್ಲಿಯೇ ಬಿಟ್ಟು ಮುಖ ತೊಳೆದುಕೊಳ್ಳುವುದಕ್ಕೆ ಹೊರಟೆ.

೪

ಸರಸಿಗೆ ನಾನು ಗೊಂಬೆ ಕೊಟ್ಟು ಐದಾರು ದಿನಗಳಾದಮೇಲೆ ಒಂದು ದಿನ ಬೆಳಿಗ್ಗೆ ಸುಮಾರು ಏಳೂವರೆ–ಎಂಟು ಗಂಟೆಯ ಸಮಯವಿರಬಹುದು; ನಾನು ನಮ್ಮ ಜಗುಲಿಯ ಮೇಲೆ ಕುಳಿತುಕೊಂಡು 'ರಾಜಶೇಖರವಿಲಾಸ' ವನ್ನು ಓದುತ್ತಿದ್ದೆ. ಅಷ್ಟು ಹೊತ್ತಿಗೆ ಸರಸಿ ನಮ್ಮ ಮನೆಯ ಕಡೆ ಬರುತ್ತಿದ್ದುದು ಕಾಣಿಸಿತು. ನೋಡಿದುದರಲ್ಲಿ ಅಳುತ್ತಿದ್ದ ಹಾಗೆ ತೋರಿತು. ಅಡಿಗಡಿಗೆ ಕೈ ಕಣ್ಣಿನ ಹತ್ತಿರ ಹೋಗುತ್ತಿತ್ತು. ನಮ್ಮ ಮನೆಯ ಹತ್ತಿರ ಬಂದಳು. ನಿಜವಾಗಿಯೂ ಅಳುತ್ತಿದ್ದಳು. 'ಯಾಕೆ ಅಳುತ್ತಿದ್ದಾಳೆ! ಏನು ತಂಟೆ ಮಾಡಿ ಅವರ ಅಮ್ಮನ ಕೈಲಿ ಏಟು ತಿಂದಿದ್ದಾಳೋ' ಅನ್ನಿಸಿತು. ಸರಸಿ ಬಂದು, ನನ್ನ ಮುಂದೆ ಕಂಬವನ್ನು ಒರಗಿಕೊಂಡು ನಿಂತು, ಮೆಲ್ಲಗೆ ಬಿಕ್ಕಳಿಸಿ ಅಳಲಾರಂಭಿಸಿದಳು. ನನಗೆ ಆ ಮಗುವಿನ ಅಳುವನ್ನು ನೋಡಿ ಮನಸ್ಸು ತಲ್ಲಣಿಸಿತು. ಪುಸ್ತಕವನ್ನು ಮುಚ್ಚಿಟ್ಟು ಎದ್ದು, ಅವಳ ಕೈಹಿಡಿದು ನನ್ನ ಕೊಠಡಿಗೆ ಕರೆದುಕೊಂಡು ಹೋಗಿ, ಹತ್ತಿರ ಕೂರಿಸಿಕೊಂಡು "ಯಾಕೆ ಸರಸು, ಬೆಳಗಾಗುತ್ತಲೆ ಅಳ್ತಿದ್ದೀಯಾ?" ಎಂದು ಕೇಳಿದೆ.

ನನ್ನ ಪ್ರಶ್ನೆಗೆ ಉತ್ತರ ಹೇಳದೆ ಅಳುವನ್ನು ಹೆಚ್ಚುಮಾಡಿದಳು.

"ಯಾಕೆ ಹೇಳು—ಅಜ್ಜಿ ಏನಾದರೂ ಹೊಡೆದರೆ?"

ಮಾತೇ ಇಲ್ಲ! ಬರೀ ಅಳು! ನಾನು ಅವಳನ್ನು ಇನ್ನೂ ಹತ್ತಿರಕ್ಕೆ ಎಳೆದು ತಬ್ಬಿಕೊಂಡು, ಅವಳ ಮುಂದಲೆಯನ್ನೂ, ಕಣ್ಣೀರಿನಿಂದ ತೊಯ್ದಿ

—ಎಳಸಾದ ಕೆನ್ನೆಗಳನ್ನೂ ಸವರುತ್ತ, “ ನೋಡು, ಸರಸಿ, ನೀನು ಒಳ್ಳೇ ಹುಡುಗಿ ; ನನ್ನ ಹತ್ತಿರ ಹೇಳುವದಿಲ್ವೊ ? ಮರೆತುಬಿಟ್ಟೆಯಾ, ತೋಟದಿಂದ ಚಕ್ಕೋತನಹಣ್ಣು ತಂದ್ಕೊಟ್ಟಿದ್ದು ? ಇನ್ನೂ ಬೇಕಾದಷ್ಟು ತಂದ್ಕೊಡ್ತೀನಿ, ನೀನು ಹೇಳಿದ್ರೆ ” ಎಂದು ಹೇಳಿದೆ. ‘ ಚಕ್ಕೋತನ ಹಣ್ಣು ’—ಅಂದೊಡನೆಯೇ ಸರಸಿ ಬಾಯಿ ಬಿಡುವುದಕ್ಕೆ ಪ್ರಯತ್ನಿಸಿದಳು :

“ ಊ–ಊ–ಊ–ಮತ್ತೇ–ನನ್ಮಗು–ಊ–ಊ— ”

“ ಏನೇ ?—ನಿನ್ಮಗು ಏನಾಯ್ತು ? ಹೇಳು ; ಅದಕ್ಕೆ ಮತ್ತೆ ಜ್ವರ ಬಂತೆ ? ”

“ ಊ-ಊ-ನನ್ಮಗೂ-ಊ-ಕೆಟ್ಹೋಯ್ತು-ಊ-ಊ-ಊ-ಊ. ”

ಅವಳ ಗೊಂಬೆ ಏನೋ ಆಗಿರಬೇಕು ಎಂದು ಊಹಿಸಿದೆ. ಅವಳನ್ನೂ ಕರೆದುಕೊಂಡು ಅವಳ ಮನೆಗೆ ಹೋಗಿ ವಿಚಾರಿಸಲಾಗಿ, ನಡೆದ ಸಮಾಚಾರ ಗೊತ್ತಾಯಿತು. ಹಿಂದಿನ ರಾತ್ರೆ ಗೊಂಬೆಯನ್ನೂ ಹತ್ತಿರದಲ್ಲೇ ಇಟ್ಟುಕೊಂಡು ಮಲಗಿದ್ದಳಂತೆ. ಬೆಳಿಗ್ಗೆ ಎದ್ದು ಮುಖ ತೊಳೆದುಕೊಳ್ಳುವುದಕ್ಕೆ ಹೋಗುವಾಗ ಅದನ್ನೂ ಕೈಲಿ ಹಿಡಿದುಕೊಂಡು ಹೋದಳಂತೆ. ಬೆಳಿಗ್ಗೆ ಸ್ವಲ್ಪ ಚಳಿಯಾಗಿತ್ತು. ಆದ್ದರಿಂದ ‘ ಮಗು ’ ಬೆಂಕಿ ಕಾಯಿಸಿಕೊಳ್ಳಲಿ—ಎಂದು, ಅದನ್ನು ಒಲೆಯ ಮುಂದಿಟ್ಟು, ತಾನು ಮುಖ ತೊಳೆದುಕೊಳ್ಳುವುದಕ್ಕೆ ಹೋದಳಂತೆ. ಸರಿ, ಮುಖ ತೊಳೆದುಕೊಂಡು ಬಂದು ನೋಡಿದಾಗ, ಆ ಗೊಂಬೆ ಬೆಂಕಿಯ ಕಾವಿಗೆ ಕರಗಿ ಮುದ್ದೆಯಾಗಿ, ವಿಕಾರವಾಗಿ, ಗುರ್ತು ಸಿಕ್ಕದ ಹಾಗಾಗಿಬಿಟ್ಟದ್ದಿತು. ನನಗೆ ನೋಡಿ, ಅಯ್ಯೋ ಪಾಪ !—ಅನ್ನುವ ಹಾಗಾಯಿತು.

ಸರಸಿಯನ್ನು ಸಮಾಧಾನಮಾಡುವುದು ಬಹಳ ಕಷ್ಟವಾಯಿತು. ಅವಳ ತಾಯಿ ಒಳ್ಳೇ ಮಾತಿನಿಂದ ಹೇಳಿದರು, ಗದರಿಸಿ ಹೇಳಿದರು. ಏನು ಮಾಡಿದರೂ ಅವಳ ದುಃಖ ಕಡಿಮೆಯಾಗಲಿಲ್ಲ. ನನಗೆ ಒಂದು ಉಪಾಯ ತೋರಿತು. ಅವಳನ್ನು ಪುನಃ ನಮ್ಮ ಮನೆಗೆ ಕರೆದುಕೊಂಡು ಹೋಗಿ, ಅದೇ ದಿನವೇ ಬೆಂಗಳೂರಿಗೆ, ನನ್ನ ಸೋದರಮಾವನಿಗೆ ಬರೆದು, ಅದಕ್ಕಿಂತ ಚೆನ್ನಾಗಿರುವ ‘ ಮಗು ’ವನ್ನು ಕಳಿಸಿಕೊಡುವುದಾಗಿ ಹೇಳಿ, ಅವಳ ಎದುರಿಗೆ ಕಾಗದ ಪೇನ ತೆಗೆದುಕೊಂಡು ಕಾಗದ ಬರೆದ ಹಾಗೆ ನಟಿಸಿದೆ. ಆಗ ಅವಳ ದುಃಖ ಸ್ವಲ್ಪ

ಮಟ್ಟಿಗೆ ಇಳಿಯಿತು. ಕಣ್ಣೀರು ಒರಸಿಕೊಳ್ಳುತ್ತ, "ಎಷ್ಟು ದಿನ ಆಗುತ್ತೆ ಬರೋದು?" ಎಂದು ಕೇಳಿದಳು. ನಾನು "ಅದೇನು! ನಾಲ್ಕೈದು ದಿನಗಳಲ್ಲಿ ಬಂದುಬಿಡುತ್ತೆ! ಏನೂ ಯೋಚನೆ ಮಾಡಬೇಡ" ಎಂದು ಸಮಾಧಾನ ಹೇಳಿ, ನಮ್ಮ ಮನೆಯಲ್ಲೇ ಕಾಫಿ ತಿಂಡಿ ಕೊಟ್ಟು ಕಳಿಸಿದೆ.

ನಾಲ್ಕು ದಿನ ಆದ ಮೇಲೆ ಸರಸಿ "ಎಲ್ಲಿ—ಬರ್ಲಿಲ್ಲ?" ಎಂದು ಕೇಳಿದಳು. "ಬರುತ್ತೆ—ಬರುತ್ತೆ; ನೋಡು, ಕಾಗದ ಬಂದಿದೆ. 'ಒಳ್ಳೇ ಮಗು ಹುಡುಕ್ತಾ ಇದೀನಿ. ಸಿಕ್ಕ್ಯೊತ್ಲೂ ಕಳಿಸ್ತೀನಿ' ಅಂತ ಬರೆದಿದ್ದಾರೆ ನೋಡು" ಎಂದು ಹೇಳಿ ಯಾವುದೋ ಒಂದು ಕಾಗದವನ್ನು ತೋರಿಸಿದೆ. ಅವಳು ಅದೂ ನಿಜವೇನೋ ಅಂದುಕೊಂಡು, ಸುಮ್ಮನಾಗಿ ದಿನವೂ ನಿರೀಕ್ಷೆಯಲ್ಲೇ ಇದ್ದಳು. ಆ ಅರಿಯದ ಮಗುವಿಗೆ ಸುಳ್ಳು ಹೇಳುವಂತಾಯಿತಲ್ಲಾ!—ಎಂದು ಸಂಕಟವಾಯಿತು. ಆದರೆ ಏನು ಮಾಡುವುದು? ನಿರ್ವಾಹವಿಲ್ಲ. ಹಾಗೆ ಹೇಳದೆ ಇದ್ದರೆ ಪುನಃ ರಗಳೆಗೆ ಪ್ರಾರಂಭಿಸಿಬಿಡುತ್ತಾಳೆ—ಎಂಬ ಭಯ. ಇವತ್ತು-ನಾಳೆ-ಕಳ್ಸಿದಾರಂತೆ-ರೈಲಿನಲ್ಲಿ ಬರ್‍ತಾ ಇದೆ—ಎಂದು ಹೇಳುತ್ತಾ ದಿನಗಳನ್ನು ಕಳೆದೆ. ಅಷ್ಟರಲ್ಲೇ ನನ್ನ ರಜ ಮುಗಿದು ನಾನು ಬೆಂಗಳೂರಿಗೆ ಹೊರಡಬೇಕಾಗಿ ಬಂತು. ಆಗ ನಾನು ಹೆಬ್ಬಾಳಿನಲ್ಲಿ ಅಗ್ರಿಕಲ್ಚರಲ್ ಸ್ಕೂಲಿನಲ್ಲಿ ಓದುತ್ತಾ ಇದ್ದೆ. ಅಲ್ಲಿ ವ್ಯಾಸಂಗ ಮುಗಿಸಿಕೊಂಡು, ಹಳ್ಳಿಯಲ್ಲಿ ನಮ್ಮ ಭೂಮಿಕಾಣಿ ನೋಡಿಕೊಂಡಿರಬೇಕೆಂಬ ಅಭಿಪ್ರಾಯವಿತ್ತು.

ನಮ್ಮ ಹಳ್ಳಿಯಿಂದ —ಗೆ ಬಂದು, ರೈಲು ಹತ್ತಿ ಬೆಂಗಳೂರು ಸೇರಿದೆ.

೨೪

ರಜ ಮುಗಿದು ನಾನು ಹೆಬ್ಬಾಳು ತಲುಪಿ ಆರೇಳು ದಿನಗಳಾಗಿದ್ದವು. ಒಂದು ದಿನ ಸಾಯಂಕಾಲ ನಾನು, ಹೆಬ್ಬಾಳು ಕೆರೆಯನ್ನು ಬಳಸಿಕೊಂಡು ಹೋಗಿ, ಅದರ ಆಚೆ ಕಡೆಯಲ್ಲಿದ್ದ ಒಂದು ಎತ್ತರವಾದ ಬಂಡೆಯ ಮೇಲೆ ಕುಳಿತು, ಸುಖವಾಗಿ ಬೀಸಿಬರುತ್ತಿದ್ದ ತಂಗಾಳಿಯನ್ನು ಸೇವಿಸುತ್ತಿದ್ದೆ.

ಪ್ರೇಯಸಿಯನ್ನು ಬಹಳ ಹೊತ್ತು ಕಾಯಿಸಿ ಆಮೇಲೆ ಅವಳ ಮನೆಗೆ ಹೋಗುವ ನಾಯಕನು, ಅವಳ ಮನೆಯ ಹತ್ತಿರ ಹತ್ತಿರ ಹೋದ ಹಾಗೆಲ್ಲಾ 'ಛೆ! ಎಷ್ಟು ಹೊತ್ತು ಕಾಯಿಸಿಬಿಟ್ಟೆ! ಏನು ಅನ್ನುವಳೋ! ಎಷ್ಟು ಸಿಟ್ಟು

ಮಾಡುವಳೋ!' ಎಂಬ ಮನಸ್ಸಿಗೆ ಸುಖವನ್ನುಂಟುಮಾಡುವ ಭೀತಿಯಿಂದ ಹೆಜ್ಜೆಗಳನ್ನು ಮೆಲ್ಲಮೆಲ್ಲಗೆ ಇಡುವಂತೆ, ಸೂರ್ಯನು ಪಶ್ಚಿಮಾಕಾಶದಲ್ಲಿ ತಡೆತಡೆದು ಇಳಿಯುತ್ತಿದ್ದ. ಅನೇಕ ಜಾತಿಯ ಪಕ್ಷಿಗಳು ತಮ್ಮ ತಮ್ಮ ರಾಗಗಳನ್ನು ಹಾಡುತ್ತ, ಸೂರ್ಯನ ಚಿನ್ನದ ಕಿರಣಗಳಲ್ಲಿ ತೂರಿ ತೂರಿ ಹಾರಾಡುತ್ತಿದ್ದವು. ಕೆರೆಯ ಮೈದಾನದಲ್ಲಿ ಆ ಹಳ್ಳಿಯ ದನಕರುಗಳು ಹುಲ್ಲು ಮೇಯುತ್ತಿದ್ದುವು. ಏರಿಯ ತಡಿಯಲ್ಲಿ ಕೆಲವು ಹಳ್ಳಿಯ ಹೆಂಗಸರು, ಕೊಡಗಳಲ್ಲಿ ನೀರು ತುಂಬಿಕೊಳ್ಳುತ್ತಾ ಇದ್ದರು. ಇನ್ನು ಕೆಲವರು, ತುಂಬಿದ ಕೊಡಗಳನ್ನು ತಲೆಯ ಮೇಲೆ ಇಟ್ಟುಕೊಂಡು, ಆ ಭಾರಕ್ಕೆ ಬಳುಕುತ್ತ, ಒಯ್ಯಾರದಿಂದ ಗುಂಪುಗುಂಪಾಗಿ ಏರಿಯ ಮೇಲೆ ನಡೆದುಹೋಗುತ್ತಿದ್ದರು. ನಾನು ಕುಳಿತಿದ್ದ ಸ್ಥಳಕ್ಕೆ ಹಿಂಭಾಗದಲ್ಲಿದ್ದ ತೋಪಿನೊಳಗಿನಿಂದ ಯಾರೋ ಗಟ್ಟಿಯಾಗಿ ಲಾವಣಿ ಹೇಳುತ್ತಿದ್ದುದು ಕೇಳಿಬರುತ್ತಿತ್ತು. ಗೊಲ್ಲರ ಹುಡುಗನಿದ್ದಿರಬಹುದು. ಇದನ್ನೆಲ್ಲಾ ನೋಡುತ್ತಿದ್ದ ಹಾಗೆಯೇ ಗೋಲ್ಡ್‌ಸ್ಮಿತ್ ಕವಿಯ 'Deserted Village' ಜ್ಞಾಪಕಕ್ಕೆ ಬಂತು. ಗೋಲ್ಡ್‌ಸ್ಮಿತ್ ಕವಿ—ಪ್ರತಿಭಾಶಾಲಿ. ಈ ಸಮಯದಲ್ಲಿ ಅವನು ನನ್ನ ಜೊತೆಯಲ್ಲಿ ಈ ಬಂಡೆಯ ಮೇಲೆ ಕುಳಿತಿದ್ದಿದ್ದರೆ!—ಅನ್ನಿಸಿತು. ದೇವರು ನನಗೂ ಕವಿಯ ಹೃದಯವನ್ನೂ, ಕವಿಯ ಕಣ್ಣುಗಳನ್ನೂ ಕೊಟ್ಟಿದ್ದಿದ್ದರೆ, ನಾನೂ ಆಗಿನ ಸನ್ನಿವೇಶವನ್ನು ವರ್ಣಿಸಿ ಸೊಗಸಾದ ಒಂದು ಕಾವ್ಯವನ್ನು ಬರೆದಿಡುತ್ತಿದ್ದೆ. ಆದರೆ ಎಲ್ಲಾ 'ರೆ' ಮೇಲಿನ ಮಾತು! ನಮ್ಮ ಆಸೆಯೇ ಒಂದು, ನಮ್ಮ ಪಾಲಿಗೆ ಬರುವುದೇ ಒಂದು. ಇದರಲ್ಲಿ ಅರ್ಥವಿಲ್ಲ ಎಂದು ಕೆಲವರು ಗೊಣಗುಟ್ಟುತ್ತಾರೆ. ಆದರೆ ನಾವು ಆ ದೇವದೇವನ ಕಾರ್ಯಕಲಾಪಗಳಿಗೆ ಅರ್ಥವನ್ನು ಕಟ್ಟುವಷ್ಟು ಶಕ್ತರೆ?........ಹೀಗೆಯೇ ಯೋಚಿಸುತ್ತ ಯೋಚಿಸುತ್ತ ನಮ್ಮ ಹಳ್ಳಿಯ ವಿಷಯವೂ ಅದರ ಸುಖ ಸಂತೋಷಗಳೂ ಮನಸ್ಸಿಗೆ ಬಂದವು. ನಮ್ಮ ಹಳ್ಳಿ ನನ್ನೆದುರಿಗೆ ಮೂಡಿ ಕಾಣಿಸಿದಂತಾಗಿ, ಅಲ್ಲಿ, ಬೀದಿಯಲ್ಲಿ, ಕುಣಿಕುಣಿದು ನಲಿಯುತ್ತ, ಸರಸಿ ಬರುತ್ತಿದ್ದ ಹಾಗೆ ತೋರಿತು. ಬರಬರುತ್ತ, ಹಳ್ಳಿ ಮಾಯವಾಗಿ, ಸರಸಿ ಮಾತ್ರ ನನ್ನ ಮನಸ್ಸಿನಲ್ಲಿ ಉಳಿದುಕೊಂಡಳು. ಇನ್ನೊಂದು ಯೋಚನಾತರಂಗ ಹೊರಟಿತು. ಆ ತರಂಗದ ತುದಿಯಲ್ಲಿ ಸರಸಿ....ನಮ್ಮ ಹಳ್ಳಿಗೆಲ್ಲಾ ಅವಳು ಬಹಳ ಸುಂದರಿಯಾದ ಹುಡುಗಿಯಾಗುತ್ತಾಳೆ. ಈಗಾಗಲೇ ಅವಳಿಗೆ ಏಳು

ವರ್ಷ. ಇನ್ನೆಷ್ಟು ದಿನ? ಅಬ್ಬಬ್ಬಾ ಅಂದರೆ, ಇನ್ನು ನಾಲ್ಕು ವರ್ಷ—ಆಮೇಲೆ ಮದುವೆಯಾಗುತ್ತಾಳೆ. ಅವಳಿಗೆ ಒಳ್ಳೇ ಗಂಡ ಸಿಕ್ಕಬೇಕು. ಹೌದು, ದೇವಾ! ಅವಳಿಗೆ ಇಷ್ಟು ರೂಪು, ಇಷ್ಟು ಗುಣ ಕೊಟ್ಟು—ಆ ರೂಪ, ಆ ಗುಣಗಳಿಗೆ ತಕ್ಕ ಗಂಡನನ್ನು ಕೊಡಲಾರೆಯಾ? ಭಗವಂತಾ, ನೀನು ಅವಳ ಹಣೆಯಲ್ಲಿ ಏನು ಬರೆದಿರುವೆಯೋ? ಅಷ್ಟು ಮುದ್ದಾದ ಹಣೆಯಲ್ಲಿ ಏನು ಕಷ್ಟವನ್ನು, ಏನು ದುಃಖವನ್ನು ತುಂಬಿದ್ದೀಯೋ?....ಬಹುಶಃ ಬೇರೆ ಊರಿಗೆ ಕೊಡುತ್ತಾರೆ. ಆಮೇಲೆ?—ಆಮೇಲೆ ಅವಳು ಗಂಡನ ಮನೆಗೆ ಹೋಗುತ್ತಾಳೆ. ಆಮೇಲೆ ನಮ್ಮ ಹಳ್ಳಿಗೆ ಸರಸಿ ಇಲ್ಲದ ಹಾಗಾಗುತ್ತದೆ. ನನಗೂ ಇಲ್ಲದ ಹಾಗಾಗುತ್ತದೆ. ಅವಳು ಮದುವೆಯಾಗುವವರೆಗೂ ಒಂದು ತರಹ—ಸರಸಿ; ಆಮೇಲೆ ಬೇರೆ. ಜೊತೆಯಲ್ಲಿ ಹುಟ್ಟಿದ ಅಕ್ಕತಂಗಿಯರೇ ಬೇರೆಯಾಗುತ್ತಾರೆ; ಇನ್ನು ಅವಳ ಮಾತೇನು? ಮೊದಲಿನ ಹಾಗೆ ನನ್ನೊಡನೆ ಸಲಿಗೆಯಾಗಿ ಬಂದು ಆಡುತ್ತಾಳೇನು? ಎಂದಿಗೂ ಇಲ್ಲ! ಅದು ಹೇಗಾದೀತು? ಮೊದಲು, ನನ್ನನ್ನು ಕಂಡೊಡನೆಯೇ ಓಡಿ ಬಂದು, ನನ್ನ ಹೆಗಲ ಮೇಲೆ ಹಾರಿ ಕುಳಿತುಕೊಳ್ಳುತ್ತಿದ್ದವಳು, ಮದುವೆಯಾದ ಮೇಲೆ ನನ್ನೆದುರಿಗೇ ನಿಲ್ಲುವುದಿಲ್ಲ; ಓಡಿಬಿಡುತ್ತಾಳೆ. ಇದುವರೆಗೂ ನನ್ನ ಹೃದಯಕ್ಕೆ ಅಂಟಿಕೊಂಡಿದ್ದ ಸರಸಿ, ಲಗ್ನವಾದಮೇಲೆ ಇದ್ದಕ್ಕಿದ್ದ ಹಾಗೆಯೇ ದೂರವಾಗಿಬಿಡುತ್ತಾಳೆ. ಜೀವನದ ಧರ್ಮ! ಯಾರು ಏನು ಮಾಡಲಾದೀತು? ಅಯ್ಯೋ! ಸರಸಿ ಯಾಕೆ ದೊಡ್ಡವಳಾಗುತ್ತಿದ್ದಾಳೆಯೋ! ಅವಳು ಎಂದೆಂದಿಗೂ, ಈಗ ಇರುವ ಹಾಗೆಯೇ, ಏಳು ವರ್ಷದ ಹುಡುಗಿಯಾಗಿಯೇ ಇರಬಾರದೇ! ಕಾಲದ ಪರಿವರ್ತನೆಗೆ ಯಾರೂ ಹೊರತಲ್ಲ, ನಿಜ. ಆದರೂ ಸರಸಿ ಮಾತ್ರ ಕಾಲದ ಪ್ರವಾಹಕ್ಕೆ ಸಿಕ್ಕದೆ, ಈಗಿನ ಏಳು ವರ್ಷವೇ ಅವಳಿಗೆ ಸ್ಥಿರವಾದರೆ! ಓ! ಆಗ ಅವಳು ಯಾವಾಗಲೂ ನಮ್ಮ ಹಳ್ಳಿಯಲ್ಲೇ ಇರುತ್ತಾಳೆ! ನನ್ನೊಡನೆ ಆಟಪಾಟ, ಸಲಿಗೆ, ಎಲ್ಲಾ ಮೊದಲಿನ ಹಾಗೆಯೇ! ನಾನು ಪ್ರತಿದಿನವೂ ಅವಳನ್ನು ನೋಡಬಹುದು....ಹುಂ! ಇವೆಲ್ಲಾ ನನ್ನ ಬಣ ಹಂಬಲು! ಅವಳು ದೊಡ್ಡವಳಾಗದೆ ಇರುತ್ತಾಳೆಯೆ? ಮದುವೆಯಾಗದೆ ಇರುತ್ತದೆಯೆ? ಮೊಗ್ಗು ಅರಳಿ ಹೂವಾಗದೆ ಇರುತ್ತದೆಯೆ? ಆಮೇಲೆ ಯಾರೋ—ಅದೃಷ್ಟಶಾಲಿ—ಆ ಹೂವನ್ನು ಕೊಯ್ದುಕೊಂಡು ಹೋಗುತ್ತಾನೆ.

ಆಮೇಲೆ ನಮ್ಮ ಹಳ್ಳಿ ಬರಿದಾಗುತ್ತೆ. ಆದರೆ ಅದಕ್ಕೆ ಏನು ನಷ್ಟ? ಇದಕ್ಕೆ ಮೊದಲು, ಎಷ್ಟು ಜನ ನಮ್ಮ ಹಳ್ಳಿಯ ಹುಡುಗಿಯರು, ಮದುವೆಯಾಗಿ ಹಳ್ಳಿಯನ್ನು ಬಿಟ್ಟು, ತಮ್ಮ ತಮ್ಮ ಗಂಡಂದಿರ ಮನೆಗಳಿಗೆ ಹೋಗಿಲ್ಲ? ಹಾಗಾದರೆ ನಷ್ಟ ಯಾರಿಗೆ?.... ಯಾರಿಗೆ?.... ಇವೆಲ್ಲಾ ಆಗಲೇಬೇಕು; ಬೇರೆ ಮಾರ್ಗವಿಲ್ಲ. ಬೇರೆ ಮಾರ್ಗವಿಲ್ಲವೆ? ಇರಬಹುದು! ಇದೆ! ಇದೆ!! ದೇವರು ಇಷ್ಟಪಟ್ಟರೆ ಬೇಕಾದ ಹಾಗೆ ಇದೆ!.... ಹೌದು, ಯಾಕಾಗಬಾರದು? ....ಆಗ? ಆಗ ಸರಸಿ ನಮ್ಮ ಹಳ್ಳಿಯಲ್ಲೇ ಇರುತ್ತಾಳೆ. ನಾನು ದಿನವೂ ಅವಳನ್ನು ನೋಡಬಹುದು. ಸರಸಿ! ಸರಸಿ!—ನನ್ನ ಸರಸಿಯಾಗುತ್ತಾಳೆ. ನನ್ನ ಹೃದಯಕ್ಕೆ ಅಂಟಿಕೊಂಡಿರುವವಳು, ಆಗ ನನ್ನ ಹೃದಯದಲ್ಲಿ ಸೇರಿ, ನನ್ನ ಒಂದೊಂದು ರಕ್ತನಾಳದಲ್ಲಿ ಓಡುತ್ತಾಳೆ!........ಆಹಾ! ಆ ದಿನ ಬರಬಾರದೇ! ಆಗ ನಾನೂ ಅವಳೂ ಒಟ್ಟಿಗೆ ನಮ್ಮ ನದಿಯ ಮರಳಿನಲ್ಲಿ ಓಡಾಡಬಹುದು, ದೇವಸ್ಥಾನದ ತೋಪಿನಲ್ಲಿ ಮನಸ್ಸು ಬಂದ ಹಾಗೆ ಸುತ್ತಾಡಬಹುದು. ನಮ್ಮದೊಂದು ಸೊಗಸಾದ ತೋಟ ಇದೆ. ಅದರಲ್ಲಿ ಅನೇಕ ತರಹ ಹಣ್ಣಿನ ಗಿಡಗಳಿವೆ. ತೋಟದ ಮಧ್ಯದಲ್ಲಿ ಒಂದು ಸೋಪಾನದ ಕೊಳ ಇದೆ. ಮೆಟ್ಟಲುಗಳ ಮೇಲೆ ಕುಳಿತುಕೊಂಡು, ಬಹಳ ಹೊತ್ತು, ಮನಸ್ಸಿಗೆ ತೋರಿದುದನ್ನೆಲ್ಲಾ ಮಾತನಾಡಬಹುದು. ನಾನೇ ಹಣ್ಣುಗಳನ್ನು ಕಿತ್ತು ತರುತ್ತೇನೆ. ಇಬ್ಬರೂ ಮನಸ್ಸು ತಣಿಯುವ ಹಾಗೆ ತಿನ್ನಬಹುದು. ಅಲ್ಲಿ ಬಗೆಬಗೆಯ ಹೂವಿನ ಗಿಡಗಳಿವೆ. ಅವಳು ಹಣ್ಣು ತಿನ್ನುತ್ತಿರುವಾಗ, ನಾನು ಅವುಗಳನ್ನೆಲ್ಲಾ ಕಿತ್ತು ತಂದು, ಅವಳ ಮುಂದೆ ರಾಶಿ ಹಾಕುತ್ತೇನೆ. ನಾರು ಇದ್ದರೆ ಮಾಲೆ ಕಟ್ಟಬಹುದು—ಎಂದು ಅವಳು ಹೇಳುತ್ತಾಳೆ. ನಾನು ಬಾಳೇ ಮರದಿಂದ ನಾರು ತಂದುಕೊಡುತ್ತೇನೆ. ಮಾತನಾಡುತ್ತ ಆಡುತ್ತ, ಅವಳು ಆ ಹೂಗಳನ್ನೆಲ್ಲಾ ಮಾಲೆಯಾಗಿ ಕಟ್ಟುತ್ತಾಳೆ. ನಾನು "ಬಹಳ ಚೆನ್ನಾಗಿದೆ!" ಅನ್ನುತ್ತೇನೆ. ಅವಳು ಆ ಮಾಲೆಯನ್ನು ನನ್ನ ಕೊರಳಿಗೆ ಹಾಕುತ್ತಾಳೆ. ನಾನು ಅದನ್ನು ತೆಗೆದು, ಅವಳನ್ನು ಹತ್ತಿರಕ್ಕೆ ಎಳೆದುಕೊಂಡು, ಅವಳ ತುರುಬಿಗೆ ಸುತ್ತುತ್ತೇನೆ. ಅವಳು ನಗುತ್ತಾಳೆ. ನಾನೂ ನಗುತ್ತೇನೆ. "ಎಲ್ಲಿ, ಸರಸಿ—ಒಂದು ಮುತ್ತು?" ಅನ್ನುತ್ತೇನೆ. ಅವಳು "ಊ್ಞ! ಮುತ್ತು!" ಎಂದು ಹೇಳಿ, ಹಿಂದಕ್ಕೆ ಸರಿದು, ಮಿಕ್ಕ ಹೂಗಳನ್ನೆಲ್ಲಾ ಬಾಚಿ ತೆಗೆದುಕೊಂಡು

ನನ್ನ ಮೇಲೆ ಎರಚುತ್ತಾಳೆ. ನಾನು ಇದ್ದಕ್ಕಿದ್ದ ಹಾಗೆಯೇ "ಚೇಳು! ಚೇಳು!" ಎಂದು ಕೂಗುತ್ತೇನೆ. ಅವಳು ಬೆಚ್ಚಿಬಿದ್ದು, ನನ್ನ ಪಕ್ಕಕ್ಕೆ ಥಟ್ಟನೆ ಸರಿದು, ನನ್ನನ್ನು ಬಲವಾಗಿ ತಬ್ಬಿಕೊಳ್ಳುತ್ತಾಳೆ. ಆಗ ನಾನು "ಸಿಕ್ಕಿದೆಯಲ್ಲ ಈಗ! ಏನ್ಮಾಡ್ತಿ?" ಎಂದು ಕೇಳುತ್ತೇನೆ "ಸೋತೆ, ಬಿಡಿ" ಅನ್ನುತ್ತಾಳೆ. "ಸುಮ್ಮನೆ 'ಸೋತೆ' ಅಂದರೆ ಬಿಡೊಲ್ಲ" ಎಂದು ಹೇಳುತ್ತೇನೆ. "ಇನ್ನೇ ನ್ಮಾಡಬೇಕು" ಎಂದು ಕೇಳುತ್ತಾಳೆ. "ನಿನಗೆ ತಿಳಿಯದೆ?" ಎಂದು ಕೇಳುತ್ತೇನೆ. "ತಿಳಿಯದು" ಅನ್ನುತ್ತಾಳೆ. ನಾನು "ಹೇಳಿಕೊಡುತ್ತೇ...." ಅಂದುಕೊಳ್ಳುವಷ್ಟರಲ್ಲಿ, ಈ ತಿರುಕನ ಕನಸಿಗೆ ಭಂಗವಾಯಿತು. ಏರಿ ಆಚೆ ಯಲ್ಲಿದ್ದ ಹಳ್ಳಿಯಲ್ಲಿ, ಯಾವುದೋ ಹುಲ್ಲು ಗುಡಿಸಲಿಗೆ ಬೆಂಕಿಹತ್ತಿ, ಹಳ್ಳಿಯ ಜನಗಳೆಲ್ಲಾ ಬೊಬ್ಬಿಡುವುದು ಕೇಳಿಬಂತು. ನಾನೂ ತಟ್ಟನೆ ಎದ್ದು ಆ ಕಡೆಗೆ ಓಡಿದೆ.

೭

ಇನ್ನು ನಾಲ್ಕು ವರ್ಷಗಳು ಕಳೆದುವು. ಈ ನಾಲ್ಕು ವರ್ಷಗಳಲ್ಲಿ ಬಿಡಿಸಿ ಹೇಳಬೇಕಾದ ಹೆಚ್ಚು ಸಂಗತಿಗಳೇನೂ ನಡೆಯಲಿಲ್ಲ. ನಾನು ಹೆಬ್ಬಾಳಿ ನಲ್ಲಿ ನನ್ನ ವ್ಯಾಸಂಗವನ್ನು ಮುಗಿಸಿಕೊಂಡು ಬಂದು, ನಮ್ಮ ಹಳ್ಳಿಯಲ್ಲಿ ನೆಲಸಿದೆ. ನಿಧಾನವಾಗಿ ನಮ್ಮ ಜಮೀನಿನ ಆಡಳಿತವನ್ನು ನಾನೇ ವಹಿಸ ಲಾರಂಭಿಸಿದೆ. ನನ್ನ ಕೆಲಸವೇನೂ ಅಷ್ಟು ಹೆಚ್ಚಾಗಿರಲಿಲ್ಲ. ಬೇಕಾದ ಹಾಗೆ ವಿರಾಮ ಸಿಕ್ಕುತ್ತಿತ್ತು. ನಾನು ಆ ಕಾಲವನ್ನೆಲ್ಲಾ ಒಂದು ಕನಸಿನಿಂದ ತುಂಬುತ್ತಿದ್ದೆ. ಪ್ರತಿಯೊಂದು ಸಲವೂ ಆ ಒಂದೇ ಕನಸು ನನ್ನ ಜೀವವನ್ನು ಆವರಿಸುತ್ತಿತ್ತು. ಒಂದೊಂದು ಸಲವೂ ನಾನು, ಆ ಕನಸನ್ನು ಹೆಚ್ಚು ಹೆಚ್ಚು ನಯವಾಗಿ ನೇಯುತ್ತ, ಅದನ್ನು ನನ್ನ ಹೃದಯದ ಅಂತರಾಳದಲ್ಲಿ ಭದ್ರಪಡಿಸಿ, ಈ ನಾಲ್ಕು ವರ್ಷಗಳ ಕಾಲ ಪೋಷಿಸಿದೆ. ನಾನು ಹೀಗೆ ಮಾಡಿದುದು ಸರಿಯೋ, ತಪ್ಪೋ ಕಾಣೆ. ಫಲಿತಾಂಶದಿಂದ, ಒಂದು ವಿಷಯಪ್ರಾರಂಭದ ಔಚಿತ್ಯಾನೌಚಿತ್ಯಗಳನ್ನು ನಿರ್ಧರಿಸುವುದಾದರೆ, ನಾನು ಹಾಗೆ ಮಾಡಿದುದು ಬಹಳ ಅನುಚಿತವಾದ ಕೆಲಸವಾಯಿತೆಂದು ನನಗೆ ಈಗ ತೋರುತ್ತಿದೆ. ಮೇಲೆ ಹೋದಷ್ಟೂ ಬೀಳುವ ಆಳ ಹೆಚ್ಚಾಗುವುದೆಂದು ಅರಿಯದೆ, ನಾನು ನಿರ್ಯೋ ಚನೆಯಿಂದ ನನ್ನ ಕನಸಿನ ಶಿಖರವನ್ನೇರಿದೆ. ಒಂದು ವೇಳೆ ಅಲ್ಲಿಂದ ಜಾರಿದರೆ

ಏನು ಗತಿ?—ಎಂದು ಮನಸ್ಸಿಗೆ ಆಗಾಗ ತೋರಿದರೂ, ಆ ಪರಿಣಾಮದ ವಿಷಯವಾಗಿ ನನ್ನ ಮನಸ್ಸು ಯೋಚಿಸಲೊಲ್ಲದೆ ಹೋಯಿತು. ಈ ಆತ್ಮ ವಂಚನೆಯಿಂದ ನನ್ನ ಹೃದಯ ಬಹಳ ದುಃಖಕ್ಕೆ ಗುರಿಯಾಯಿತು. ಇದರಿಂದ ಎಲ್ಲಾ ನನಗೆ ಈಗ ತೋರುವುದೇನೆಂದರೆ, (ಅನೇಕ ವೇಳೆ ಆಸೆಯೇ ನಮ್ಮ ದುಃಖಕ್ಕೆ ಕಾರಣ—ಎಂದು. ಹುಟ್ಟುವುದು ನಮ್ಮ ನಮ್ಮ ಆಸೆಯಲ್ಲ; ಸಾಯುವುದೂ ನಮ್ಮ ಆಸೆಯಲ್ಲ. ಹೀಗಿರುವಲ್ಲಿ, ಇವೆರಡರ ಮಧ್ಯೆ, ನಮ್ಮ ಆಸೆ ಪ್ರಬಲವಾಗಲೇಕೆ?)

ಸರಸಿ ಮೆಲ್ಲಮೆಲ್ಲಗೆ ವಧೂವೇಷವನ್ನು ತಾಳುತ್ತಿದ್ದಳು. ಅವಳು ಬೆಳೆದ ಹಾಗೆಲ್ಲಾ ನಾನು ನೇಯ್ದುಕೊಂಡಿದ್ದ ಕನಸಿನ ಬಣ್ಣ ಮಾಸುತ್ತ ಬಂತು. ಅದರ ಒಂದೊಂದು ಎಳೆಯೂ ಛಿನ್ನಛಿದ್ರವಾಗತೊಡಗಿತು. ಒಂದು ದಿನ ಅದು ನನ್ನ ಹೃದಯದಿಂದ ಸಂಪೂರ್ಣವಾಗಿ ಅಳಿಸಿ ಹೋಗುವಂತಾಯಿತು. ಆ ದಿನ ಹೇಗೆ ಬಂತು—ಅನ್ನುವುದನ್ನು ನಾನು ಇಲ್ಲಿ ವಿವರಿಸಲಾರೆ. ಅದರಿಂದ ನನಗೆ ಬಹಳ ಯಾತನೆಯಾಗುತ್ತದೆ. ಅಂತೂ ಆ ದಿನ ಬಂತು. ಸರಸಿಯನ್ನು ಬೇರೆ ಕಡೆಗೆ ಕೊಟ್ಟು ಲಗ್ನಮಾಡಿದರು.

ನನ್ನ ಪ್ರೇಮದ ಬೆಳಕು, ಇದ್ದಕ್ಕಿದ್ದ ಹಾಗೆಯೇ, ದುಃಖದ ಜ್ವಾಲೆಯಾಯಿತು.

೭

ಸರಸಿಯ ವಿಷಯದಲ್ಲಿ ನನ್ನ ಬಲವತ್ತರವಾದ ಆಸೆ ಕೈಗೂಡದಿದ್ದರೂ ಅವಳ ಪರ ನನ್ನ ನಿರಂತರವಾದ ಒಂದು ಹಾರೈಕೆ ನೆರವೇರಿತು. ಅವಳನ್ನು ಅನುರೂಪನೂ, ಯೋಗ್ಯನೂ ಆದ ವರನಿಗೆ ಕೊಟ್ಟು ಲಗ್ನಮಾಡಿದರು. ಅವಳ ಗಂಡನ ಊರು ಕೋಲಾರ. ಮೈಸೂರು ಕಾಲೇಜಿನಲ್ಲಿ ಓದುತ್ತಿದ್ದ. ಕೇಳಿದುದರಲ್ಲಿ ಅವರಿಗೆ ಬೇಕಾದ ಹಾಗೆ ಇದೆಯೆಂದೂ, ಅವನು ತನ್ನ ತಾಯಿತಂದೆಗಳಿಗೆ ಒಬ್ಬನೇ ಮಗನೆಂದೂ ತಿಳಿಯಬಂತು. ನನ್ನ ವಿಷಯ ಹೇಗಾದರೂ ಇರಲಿ, ಸರಸಿಗೆ ಯಾವುದರಲ್ಲೂ ಏನೂ ಕೊರತೆಯಿಲ್ಲದಂತಾಯಿತಲ್ಲಾ, ಅಷ್ಟೇ ನನಗೆ ಸಂತೋಷ. ನನ್ನ ದುಃಖದ ಜ್ವಾಲೆಯ ಮೇಲೆ ಈ ಸಂತೋಷವನ್ನು ಚಿಮುಕಿಸಿ ಆರಿಸಲು ಪ್ರಯತ್ನಪಡುತ್ತಿದ್ದೆ.

ಮದುವೆಯಾದಮೇಲೂ ಸರಸಿಯನ್ನು ಆಗಾಗ ನೋಡುತ್ತಿದ್ದೆ. ಆದರೆ ಎಷ್ಟು ವ್ಯತ್ಯಾಸ! ಆ ಸಲಿಗೆ, ಆಟಪಾಟ ಎಲ್ಲ ಮರೆತುಬಿಟ್ಟಳೆಂದು ತೋರು ತ್ತದೆ. ಅವಳು ಮದುವೆಯಾದಮೇಲೆ ನನ್ನನ್ನು "ಅಣ್ಣಯ್ಯಾ" ಎಂದು ಕರೆಯಲು ಪ್ರಾರಂಭಿಸಿದಳು. ನಾನೂ ಅವಳನ್ನು "ಸರಸಮ್ಮ" ಎಂದು ಕರೆಯಬೇಕಾಯಿತು. ಸರಸಿಯನ್ನು ನಾನು ಕಳೆದುಕೊಂಡೆನೆಂಬ ಭಾವನೆ ನನ್ನ ಹೃದಯದಲ್ಲಿ ನಿಂತಿತ್ತು. ಆದರೆ ಅವಳಿಗೆ ಆ ಭಾವನೆ ಇರಲಿಲ್ಲ. ಏಕೆಂದರೆ ಅವಳು ಯಾವ ಆಸೆಯನ್ನೂ ಇಟ್ಟುಕೊಂಡಿರಲಿಲ್ಲ, ಇಟ್ಟುಕೊಳ್ಳುವ ವಯಸ್ಸೂ ಆಗಿರಲಿಲ್ಲ. ಆದಕಾರಣ ಅವಳ ಮದುವೆಯಿಂದ ದುಃಖಕ್ಕೆ ಈಡಾದವನು ನಾನೊಬ್ಬನೇ. ಅವಳಿಗೆ ಈ ದುಃಖವನ್ನು ದೇವರು ತಪ್ಪಿಸಿದನಲ್ಲಾ—ಅಷ್ಟೇ ನನ್ನ ತೃಪ್ತಿ.

ಮದುವೆಯಾದ ಎರಡು ವರ್ಷಗಳಲ್ಲಿಯೇ ಸರಸಿ ಗಂಡನ ಮನೆಗೆ ಹೋದಳು. ಅವಳು ಹೊರಡುವ ದಿನ ನಾನು ಮನೆಯಲ್ಲಿರಲಿಲ್ಲ. ನಮ್ಮ ತೋಟಕ್ಕೆ ಹೋಗಿ, ಅಲ್ಲಿ ಕೊಳದ ಸೋಪಾನದ ಮೇಲೆ ಕುಳಿತು, ಬೇಕಾದಷ್ಟು ಕಣ್ಣೀರು ಸುರಿಸಿದೆ; ಬೇಕಾದಷ್ಟು ನಿಟ್ಟುಸಿರು ಬಿಟ್ಟೆ. ಅಲ್ಲಿ ಸುತ್ತಮುತ್ತಲು ಗಿಡಗಳ ತುಂಬ ಅನೇಕ ಜಾತಿಯ ಹೂಗಳು ಅರಳಿ ಜಗ್ಗುತ್ತಿದ್ದುವು. ಅವುಗಳನ್ನೆಲ್ಲಾ ನೋಡಿ, ಅಯ್ಯೋ!—ಅನ್ನಿಸಿತು. ಒಂದು ರೀತಿಯಾಗಿ ಆಗಿದ್ದಿದ್ದರೆ ಅವುಗಳ ಜನ್ಮ ಸಾರ್ಥಕವಾಗುತ್ತಿತ್ತು. ಆದರೆ ಅವುಗಳಿಗೇನು? ಯಾರು ಇದ್ದರೂ ಇಲ್ಲದಿದ್ದರೂ ಅವು ಅರಳದೆ ಇರುತ್ತವೆಯೇ? ಅದು ದೇವರ ನಿಯಮ— ಎಲ್ಲವೂ ದೇವರ ನಿಯಮ!....

ಸಾಯಂಕಾಲ ಹೊತ್ತು ಮಾಡಿಕೊಂಡು ಮನೆಗೆ ಬಂದೆ. ಅಷ್ಟು ಹೊತ್ತಿಗೆ ಸರಸಿ ನಮ್ಮ ಹಳ್ಳಿ ಬಿಟ್ಟು ಹೊರಟುಹೋಗಿದ್ದಳು.

ರಾತ್ರೆ ಹಸಿವು ತೋರಲಿಲ್ಲ. ಆದರೂ ಸ್ವಲ್ಪ ಊಟಮಾಡಿ ಕೊಠಡಿಗೆ ಹೋಗಿ ಮಲಗಿಕೊಂಡುಬಿಟ್ಟೆ. ಬೇಗ ನಿದ್ದೆ ಹತ್ತುವ ಹಾಗೆ ಕಾಣಲಿಲ್ಲ.

ತೋಟದಲ್ಲಿ ಕುಳಿತಿದ್ದಾಗ 'ಎಲ್ಲವೂ ದೇವರ ನಿಯಮ' ಅಂದಿದ್ದು ಪುನಃ ಈಗ ಜಾಗೃತವಾಯಿತು.

* * * *

ಸರಸಿ ಪುನಃ ನಮ್ಮ ಹಳ್ಳಿಗೆ ಬಂದುದು ಎರಡು ವರ್ಷಗಳಮೇಲೆ. ಅದಕ್ಕೆ ಮುಂಚೆ ಒಂದು ಬಾರಿಯೂ ಅವಳು ತೌರುಮನೆಗೆ ಬರಲಿಲ್ಲ. ಅವಳಿಗೆ ಶ್ರಾವಣಮಾಸದ ವ್ರತ, ಗೌರಿಹಬ್ಬ—ಎಲ್ಲವೂ ಅಲ್ಲೇ ನಡೆಯಿತಂತೆ. ಅಂತಹ ಸೊಸೆಯನ್ನು ಯಾವ ಅತ್ತೆ ತಾನೆ ಬಿಟ್ಟಿರಬಲ್ಲಳು ? ಕೊನೆಗೆ ಅವಳ ಹೆರಿಗೆ, ಬಾಣಂತನ ಕೂಡ ಅಲ್ಲೇ ಆಯಿತು. ನಮ್ಮ ಹಳ್ಳಿಗೆ, ಗಂಡು ಮಗು—ಎಂದು ವರ್ತಮಾನ ಮಾತ್ರ ಬಂತು. ಅವಳು ಗಂಡನ ಮನೆಗೆ ಹೋದಮೇಲೆ, ಮೊದಲನೆಯ ಸಲ ತೌರುಮನೆಗೆ ಬಂದುದು, ಆರು ತಿಂಗಳ ಮಗುವಿನೊಡನೆ.

ಅವಳು ಗಾಡಿಯಲ್ಲಿ ಬರುತ್ತಿದ್ದಾಗ ನಾನು ನಮ್ಮ ಮನೆಯ ಜಗುಲಿಯ ಮೇಲೆ ನಿಂತಿದ್ದೆ. ಅವಳು ದೂರದಲ್ಲೇ ನಮ್ಮನ್ನು ಕಂಡು ಗುರ್ತಿಸಿ, ಗಾಡಿ ನಮ್ಮ ಮನೆಯ ಮುಂದೆ ಬಂದೊಡನೆಯೆ ನಿಲ್ಲಿಸಹೇಳಿ, ನನ್ನನ್ನು ಕುರಿತು "ಅಣ್ಣಯ್ಯಾ, ಕ್ಷೇಮವಾಗಿದ್ದೀಯಾ ?" ಎಂದು ಕೇಳಿ, ಕೈಲಿ ಎತ್ತಿಕೊಂಡಿದ್ದ ಮಗುವನ್ನು ನನ್ನ ಕಡೆಗೆ ತಿರುಗಿಸಿ, "ಪುಟ್ಟ ! ಪುಟ್ಟ ! ನೋಡು—ಮಾವನ್ನ" ಎಂದಳು. ಆಮೇಲೆ ನನ್ನನ್ನು ಕುರಿತು "ಮನೆಗೆ ಬರ್ತೀಯಾ ?" ಎಂದು ಹೇಳಿ, ಗಾಡಿಯನ್ನು ಮುಂದಕ್ಕೆ ಹೊಡೆಸಿದಳು.

ನಾನು ಅವರ ಮನೆಗೆ ಹೋದಾಗ ಮಧ್ಯಾಹ್ನ ಸುಮಾರು ಮೂರು ಗಂಟೆ ಇರಬಹುದು. ಸರಸಿಯನ್ನು ನೋಡಿದೆ. ಈಗ ಅವಳು ಚಿಕ್ಕ ಹೆಂಗಸು ; ಅದಕ್ಕೂ ಹೆಚ್ಚಾಗಿ—ಪುಟ್ಟ ತಾಯಿ. ಅವಳನ್ನು ನೋಡಿದುದರಲ್ಲಿ, ಬಹಳ ಸುಖವಾಗಿದ್ದಾಳೆ ಎಂದು ತೋರಿತು. ತನ್ನ ಮಗುವನ್ನು ತಂದು ತೋರಿಸಿ ನನ್ನ ಕೈಲಿಟ್ಟಳು. ಮಗು ಬಹಳ ಮುದ್ದಾಗಿದ್ದಿತು. ಆರೇ ತಿಂಗಳಾಗಿದ್ದರೂ ವರ್ಷದ ಮಗು ಅನ್ನುವ ಹಾಗಿತ್ತು.

ಸರಸಿ ತನ್ನ ಗಂಡನ ಮನೆಯಿಂದ ತಂದಿದ್ದ ತಿಂಡಿ ಸ್ವಲ್ಪ ಕೊಟ್ಟಳು. ಅವನ್ನು ತಿನ್ನುತ್ತ, ಯೋಗಕ್ಷೇಮ—ಅದು ಇದು ವಿಚಾರ ಮಾತನಾಡುತ್ತ, ಹಿಂದಿನ ವಿಷಯಗಳನ್ನೆಲ್ಲ ಜ್ಞಾಪಿಸಿಕೊಳ್ಳುತ್ತ, ಆಗಿನ ಗೊಂಬೆ ಪ್ರಸ್ತಾಪ ವನ್ನೆತ್ತಿ, ಅದು ಬೆಂಕಿಯ ಕಾವಿಗೆ ಕರಗಿ ಕೆಟ್ಟುಹೋದುದೂ, ಅವಳು ಅದಕ್ಕಾಗಿ ಅತ್ತುದೂ, ನಾನು ಇನ್ನೊಂದು ಗೊಂಬೆ ತರಿಸಿಕೊಡುವುದಾಗಿ ಹೇಳಿ ಸಮಾಧಾನ ಮಾಡಿದುದೂ, ಆಮೇಲೆ ಅದೆಲ್ಲಾ ಮರೆತುಹೋದದ್ದೂ—ಎಲ್ಲಾ ಹೇಳಿ, ಆಮೇಲೆ—

("ಏನಮ್ಮ ಸರಸಮ್ಮ, ಗೊಂಬೆ ತರಿಸಿಕೊಡುತ್ತೇನೆ—ಎಂದು ಹೇಳಿ ಆಗ ಮರೆತುಬಿಟ್ಟೆ. ಈಗಲಾದರೂ ಹೇಳು, ನೀನು ಆಗಿನ ಹಾಗೆಯೇ ಅತ್ತು ಹಟಮಾಡಿದರೆ, ಈಗಲೂ ಇನ್ನೊಂದು ಗೊಂಬೆ ತರಿಸಿಕೊಡಲು ಸಿದ್ಧನಾಗಿದ್ದೇನೆ" ಎಂದು ಹಾಸ್ಯವಾಗಿ ಹೇಳಿದೆ.)

ಅದಕ್ಕೆ ಅವಳು ಉತ್ತರವಾಗಿ, ತನ್ನ ಮಗನನ್ನು ಎತ್ತಿ ತಬ್ಬಿಕೊಂಡು, ಒಂದು ಮುತ್ತು ಕೊಟ್ಟು, ನನ್ನ ಕಡೆಗೆ ನೋಡುತ್ತ,

"ಅಣ್ಣಯ್ಯಾ, ನಮ್ಮ ಪುಟ್ಟನನ್ನು ನೋಡು! ಇದಕ್ಕಿಂತ ಹೆಚ್ಚಿನ ಗೊಂಬೆ ನನಗೆ ಇನ್ಯಾವುದು?" ಎಂದು ಹೇಳಿ, ಪುಟ್ಟನನ್ನು ತನ್ನ ತೋಳ್ಗಳ ಮೇಲೆ ಕುಣಿಸುತ್ತ "ಅಲ್ವೇನೋ, ಪುಟ್ಟ?" ಎಂದು ಕೇಳಿದಳು. ಆ ನೋಟವನ್ನು ನೋಡಿ ನನ್ನ ಕಣ್ಣು ಸಾರ್ಥಕವಾಯಿತು! ಬಹಳ ದಿನಗಳ ಹಿಂದೆಯೇ ಕೇವಲ ಅವಳ ಬಾಲ್ಯದಲ್ಲಿ, ನಾನು ಕಂಡಿದ್ದ ಅವಳ ತಾಯ್ತನದ ಮೊಳಕೆ ಈಗ ಕೋಮಲವಾದ ಲತೆಯಾಗಿ ಬೆಳೆದು, ತನ್ನ ಮೊದಲನೆಯ ಮೊಗ್ಗನ್ನು ಧರಿಸಿ, ನನ್ನೆದುರಿಗೆ ನಿಂತಿದ್ದುದನ್ನು ನೋಡಿ, ನನಗೆ ಮಿತಿಮೀರಿದ ಆನಂದವಾಯಿತು. ಆಗ ನನಗೆ '**ಶ್ರೀ ರಾಮಾಶ್ವಮೇಧ**'ದಲ್ಲಿ ಸೀತಾದೇವಿ ತನ್ನ ಸಖಿಯನ್ನು ಕುರಿತು,

'ಎಳವರೆಯದೊಳ್ ಸಲ್ಲಾಪಂ ಪೆತ್ತು, ಬಾಲಕೇಳಿಯಂ ಕಣ್ದಣಿಯೆ ಕಂಡು, ಸಂಸಾರದ ಸಾರಮಿದೆನುತೆ ಸಂತಸಂಬಡುವ ಪೆಣ್ಗಳೇ ಧನ್ಯೆಯರಲ್ತೆ!' ಎಂದು ಉದ್ಗಾರದಿಂದ ಹೇಳಿದ ಮಾತು ಜ್ಞಾಪಕಕ್ಕೆ ಬಂತು.

---

# ದೂರದ ಆಸೆ

೧

ರಾಮಚಂದ್ರ: "ಏನು ಯೋಚಿಸುತ್ತಿದ್ದೆ, ಶ್ರೀಕಂಠ?"

ಶ್ರೀಕಂಠ: "ಏನು ಯೋಚಿಸಲಿ, ರಾಮು! ನನಗೆ ಇರುವುದು ಒಂದೇ ಯೋಚನೆ."

"ಅದೇನು?"

"ನಿನಗೆ ಗೊತ್ತಿಲ್ವೆ?"

"ಏನು?"

"ನನ್ನ ತಂಗಿ ಮದುವೆ ನಿಂತುಹೋದದ್ದು."

"ಗೊತ್ತು."

"ಅದಕ್ಕೆ ಕಾರಣವೂ ಗೊತ್ತಿರಬಹುದು?"

"ಕಣ್ಣು ಏನೋ ಸ್ವಲ್ಪ........"

"ಹ್ಾದು. ಅದು ದಿನದಿನಕ್ಕೆ ಹೆಚ್ಚಿ, ಈಗ ಅವಳು ಶುದ್ಧ ಕುರುಡಿಯಾಗಿಬಿಟ್ಟಿದ್ದಾಳೆ, ರಾಮು. ಅವಳ ಸಂಕಟ ಹೇಳಲಾರೆ. ಅಮ್ಮ ಒಂದು ಕಡೆ ಕೊರಗುತ್ತಿದ್ದಾಳೆ. ವಿಶಾಲಾಕ್ಷಿಗೆ ಈಗಾಗಲೇ ಹನ್ನೆರಡು ತುಂಬಿ ಹದಿಮೂರನೆಯ ವರ್ಷ. ಇನ್ನೂ ಮದುವೆಯಿಲ್ಲ. ಹೇಗೆ ಆಗುತ್ತೋ, ನಾನು ಕಾಣೆ. ಮದುವೆಗೆ ಗಂಡು ಗೊತ್ತಾಗಿ, ಎಲ್ಲವೂ ನಿಶ್ಚಯವಾಗಿ, ಲಗ್ನಕ್ಕೆ ದಿನವನ್ನೂ ಗೊತ್ತುಮಾಡಿದ್ದರು. ಅಷ್ಟರಲ್ಲೇ ದೇವರು ನಮಗೆ ಈ ಸಂಕಟ ತಂದಿಟ್ಟ. ಅಪ್ಪ ಬದುಕಿದ್ದಿದ್ದರೆ ಎಷ್ಟೋ ಧೈರ್ಯವಿರುತ್ತಿತ್ತು. ದೇವರು ಅವನನ್ನು ಕರೆದುಕೊಂಡ, ರಾಮು! ಈಗ ನಮ್ಮ ಪಾಡು—ನಾಯಿಯ ಪಾಡಾಗಿದೆ! ಅವಳಿಗೆ ಮದುವೆಯಾಗಲೇಬೇಕು. ಆದರೆ ಹೇಗೆ ಆಗಬೇಕು? ಈಗ ಆ ನಿರ್ಭಾಗ್ಯಳನ್ನು ಯಾರು ಮದುವೆಯಾಗುತ್ತಾರೆ? ರಾಮು, ಅವಳದ್ದು ಎಂತಹ ಕರ್ಮ! ಮನೆಯ ಕೆಲಸಕಾರ್ಯಗಳಲ್ಲಿ ಅವಳಿಗೆ ಎಷ್ಟು ಚಟುವಟಿಕೆ! ಒಂದು ದಿನವೂ ಗಟ್ಟಿಯಾಗಿ ಮಾತನಾಡಿದವಳಲ್ಲ. ಎಷ್ಟು ಪುಸ್ತಕಗಳನ್ನು ಓದುತ್ತಿದ್ದಳು! ಎಷ್ಟು ಹಾಡುಗಳನ್ನು ಕಲಿತಿದ್ದಾಳೆ! ಈಗ ಅವಳಿಗೆ ಹಾಡು

ಗೀಡು ಒಂದೂ ಬೇಡ; ಮೂಲೆಯಲ್ಲಿ ಕುಳಿತು ಅಳುವುದು ಒಂದೇ ಹಾಡು! ಇನ್ನುಮುಂದೆ ಅವಳಿಗೆ ಎಂತಹ ಜೀವನ! ಅಯ್ಯೋ ಕರ್ಮವೇ!"

ಶ್ರೀಕಂಠನ ಕಣ್ಣುಗಳ ಅಂಚಿನಲ್ಲಿ ನೀರು ತುಂಬಿಕೊಂಡಿತು. ಅವನಿಗೆ ಮುಂದೆ ಮಾತನಾಡಲಾಗಲಿಲ್ಲ. ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡು, ಕಣ್ಣೀರನ್ನು ಒರಸಿಕೊಳ್ಳುತ್ತ, ಮೌನವಾಗಿ ಅಳುತ್ತಿದ್ದ. ರಾಮಚಂದ್ರನೂ ಮಾತಿಲ್ಲದೆ ಕುಳಿತಿದ್ದ. ರಜನಿಯ ನೀಲಿ ಸೀರೆಯ ಸೆರಗಿನಲ್ಲಿ ಸೇರಿಸಿ ನೇಯ್ದ ವಜ್ರದ ಕಿಡಿಗಳಂತೆ, ಆಕಾಶದಲ್ಲಿ ಅಲ್ಲಲ್ಲಿ ನಕ್ಷತ್ರಗಳು ತಲೆದೋರುತ್ತಿದ್ದವು. ಯಾರನ್ನೋ ಹುಡುಕಿಕೊಂಡು ಸುತ್ತಾಡುತ್ತಿದ್ದಂತೆ, ತಣ್ಣನೆಯ ಗಾಳಿ ಅಲ್ಲಿ ಸುಳಿದು ಇಲ್ಲಿ ಸುಳಿದು, ಮೆಲ್ಲಗೆ ಬೀಸಿಬರುತ್ತಿತ್ತು. ರಾಮಚಂದ್ರ ಏನೋ ಯೋಚಿಸುತ್ತಿದ್ದವನು, ಹಾಗೆಯೇ ಹಿಂದಕ್ಕೆ ಒರಗಿಕೊಂಡು ಆಕಾಶದ ಕಡೆ ನೋಡತೊಡಗಿದ. ಬರಬರುತ್ತ ಅವನ ಹೊರಗಿನ ದೃಷ್ಟಿ ಮಂಕಾಯಿತು. ನಿಧಾನವಾಗಿ ಅವನ ಕಣ್ಣು ರೆಪ್ಪೆಗಳು ಮುಚ್ಚಿಕೊಂಡವು. ಹುಬ್ಬುಗಂಟಾಯಿತು. ಶ್ರೀಕಂಠನ ಗೋಳಿನ ಕಥೆಯನ್ನು ಕೇಳಿ, ಅವನ ಮನಸ್ಸು ನೀರು ಹೊಯ್ದ ಸುಣ್ಣಕಲ್ಲಿನಂತೆ ಆಗಿತ್ತು. ರಾಮಚಂದ್ರ ಬಹಳ ಹೊತ್ತು ಹಾಗೆಯೇ ಇದ್ದು ಆಮೇಲೆ ದೊಡ್ಡದಾಗಿ ನಿಟ್ಟುಸಿರು ಬಿಟ್ಟು, ಶ್ರೀಕಂಠನ ಕಡೆಗೆ ತಿರುಗಿದ. ಶ್ರೀಕಂಠ ತಲೆ ಬಗ್ಗಿಸಿಕೊಂಡು ಕುಳಿತಿದ್ದ. ಅಷ್ಟು ಹೊತ್ತಿಗೆ ಅಠಾರಾ ಕಚೇರಿಯಲ್ಲಿ ಏಳು ಗಂಟೆ ಹೊಡೆಯಿತು. ರಾಮಚಂದ್ರ "ಹೋಗೋಣವೆ?" ಎಂದು ನಿಂತುಕೊಂಡ. ಶ್ರೀಕಂಠನೂ ನಿಧಾನವಾಗಿ ಎದ್ದು, ಪಂಚೆಯ ತುದಿಯಿಂದ ಕಣ್ಣೀರನ್ನು ಒರಸಿಕೊಂಡ. ಇಬ್ಬರೂ ಹೊರಟರು.

೨

ಮಾರನೆಯ ದಿನ ಸಾಯಂಕಾಲ ಶ್ರೀಕಂಠನಿಗೆ ಒಂದು ಕಾಗದ ಬಂತು —ಕವರು. ಅವನಿಗೆ ಆಶ್ಚರ್ಯವಾಯಿತು. ಕಾಗದಪತ್ರ ಬರೆಯುವ ವಾಡಿಕೆಯೇ ಅವನಲ್ಲಿರಲಿಲ್ಲ. ಟಪಾಲು ಮುದ್ರೆ ನೋಡಿದ; ಅದೇ ಊರಿನದೆ! ಅವನಿಗೆ ಕುತೂಹಲ ಹೆಚ್ಚಿತು. ಕವರನ್ನು ಹರಿದು ನೋಡಿದರೆ, ಒಳಗೆ ಕನ್ನಡದಲ್ಲಿ ಒಂದು ಕಾಗದ. ಯಾರು ಬರೆದಿರಬಹುದು—ಎಂದು ಕುತೂಹಲದಿಂದ ಕಾಗದದ ಕೆಳಗೆ ಮೊದಲು ನೋಡಿದ. 'ರಾಮಚಂದ್ರ' ಎಂದು ಇತ್ತು. ಆತುರ

ದಿಂದ ಕಾಗದವನ್ನು ಓದಿದ. ಓದುತ್ತ ಓದುತ್ತ, ಅವನ ಕಣ್ಣುಗಳಲ್ಲಿ ನೀರು ತುಂಬಿ ಜಾರಿತು. "ರಾಮು! ರಾಮು!" ಎಂದು ಮೆಲ್ಲಗೆ ಹೇಳುತ್ತ, ಆ ಕಾಗದವನ್ನು ತನ್ನ ಎದೆಗೆ ಒತ್ತಿಕೊಂಡ. ರಾಮಚಂದ್ರ ದೊಡ್ಡ ಕಾಗದವನ್ನು ಬರೆದಿದ್ದ. ಅದರಲ್ಲಿ ಮುಖ್ಯವಾದ ವಿಷಯ ಈ ರೀತಿಯಾಗಿತ್ತು :

ಬೆಂಗಳೂರು

ತಾ|| ೩-೨-೧೯೨—

....ನೆನ್ನೆ ನೀನು ಹೇಳಿದ ವಿಚಾರವಾಗಿ, ಆಗಿನಿಂದ ಇದುವರೆಗೂ ಬಹಳ ಯೋಚಿಸಿದ್ದೇನೆ. ಯಾವ ರೀತಿಯಲ್ಲಿ ಯೋಚಿಸಿದರೂ ನನಗೆ ಒಂದೇ ಒಂದು ದಾರಿ ತೋರುವುದು. ನೆನ್ನೆ ನೀನು 'ಆ ನಿರ್ಭಾಗ್ಯ ಳನ್ನು ಯಾರು ಮದುವೆಯಾಗುತ್ತಾರೆ?' ಎಂದು ಕೇಳಿದೆ. ಅದಕ್ಕೆ ಉತ್ತರ ನೆನ್ನೆ ರಾತ್ರಿಯೇ ನನ್ನ ಮನಸ್ಸಿಗೆ ಹೊಳೆಯಿತು. ಉತ್ತರ.... 'ನಾನು!'—ನಾನು ಅವಳನ್ನು ಮದುವೆಯಾಗುತ್ತೇನೆ. ನಾನು ನಿಮ್ಮ ಪಂಗಡಕ್ಕೆ ಸೇರಿದವನಲ್ಲ; ಆದರೆ ನೀನು ಎಷ್ಟರಮಟ್ಟಿಗೆ ಬ್ರಾಹ್ಮಣನೋ ನಾನೂ ಅಷ್ಟರ ಮಟ್ಟಿಗೇ ಬ್ರಾಹ್ಮಣ. ನನಗೆ ಒಂದು ಕುರುಡುಕಾಸಿನ ಆಸೆಯೂ ಇಲ್ಲ. ಈ ವಿಷಯವನ್ನು ನಿನ್ನ ತಾಯಿಯವರೊಡನೆ ಆಲೋಚನೆ ಮಾಡಿ ನೋಡು. ನಿನ್ನ ತಂಗಿಯ ಅಭಿಪ್ರಾಯವೂ ಆವಶ್ಯಕ. ನೀವೆಲ್ಲರೂ ಒಪ್ಪುವುದಾದರೆ, ನನ್ನ ಪರೀಕ್ಷೆ ಮುಗಿದ ಕೂಡಲೆ ಮದುವೆಯಾಗಲು ಸಿದ್ಧನಾಗಿದ್ದೇನೆ. ಈ ಕಾಗದದಲ್ಲಿ ಸಂಕ್ಷೇಪವಾಗಿ ಬರೆದಿದ್ದೇನೆ. ಸಾಧ್ಯವಾದರೆ ನಾಳೆ ಸಾಯಂಕಾಲ ನನ್ನ ಕೊಠಡಿಯ ಹತ್ತಿರ ಬಾ. ಇಬ್ಬರೂ ಹೆಚ್ಚು ವಿಶದವಾಗಿ ಮಾತನಾಡಬಹುದು.

ಇತಿ,

**ರಾಮಚಂದ್ರ**

ರಾಮಚಂದ್ರನ ಕಾಗದ ಬಂದು ಶ್ರೀಕಂಠನ ಮನಸ್ಸಿಗೆ ಬಹಳ ಶಾಂತಿ ಯನ್ನು ತಂದಿತು. ದಾರಿ ತಪ್ಪಿದ ಕುರುಡನಿಗೆ ಯಾರೋ ಕೈಹಿಡಿದು ನಡೆಸಿ ದಂತಾಯಿತು. ಶ್ರೀಕಂಠ ಹೆಚ್ಚು ಕಾಲವಿಳಂಬ ಮಾಡದೆ ರಾಮಚಂದ್ರ ಬರೆದ ವಿಷಯವಾಗಿ, ತನ್ನ ತಾಯಿಯೊಡನೆ ಪ್ರಸ್ತಾಪ ಮಾಡಿದ. ಲಕ್ಷ್ಮಮ್ಮನವರು ಮೊದಲು ಒಪ್ಪಲಿಲ್ಲ. "ಅವನು ಬೇರೆ ಪಂಗಡಕ್ಕೆ ಸೇರಿದವನು. ಹೇಗೆ

ಅವನಿಗೆ ಹುಡುಗಿಯನ್ನು ಕೊಡುವುದು? ಜನ ಏನೆಂದಾರು!" ಎಂದು ಮುಂತಾಗಿ ಆಕ್ಷೇಪಣೆ ತಂದರು. ಶ್ರೀಕಂಠನಿಗೆ ಸ್ವಲ್ಪ ಸಿಟ್ಟು ಬಂತು. ಅವನು ಹೇಳತೊಡಗಿದ: "ಅಮ್ಮ, ಇಲ್ಲಿ ಕೇಳು. 'ಜನ ಏನೆಂದಾರು?' ಎನ್ನುವೆ. ಈಗ ಮೀನಾಕ್ಷಿಯ ಮದುವೆ ನಿಂತುಹೋಯಿತಲ್ಲ, 'ಜನ' ನಮ್ಮ ಸಹಾಯಕ್ಕೆ ಬರುತ್ತಾರೇನು? ಅಪ್ಪ ಕಷ್ಟಪಟ್ಟಿದ್ದು ನಿನಗೆ ಗೊತ್ತಿಲ್ಲವೆ? ಆಗ 'ಜನ' ಏನು ಸಹಾಯಮಾಡಿದರು? 'ಜನ'ರ ಮನೆ ಹಾಳಾಯಿತು! ನೀನು ತಲೆಕೆಳಗಾದರೂ ನಮ್ಮ 'ಜನ' ಎನ್ನಿಸಿಕೊಂಡವರಲ್ಲಿ ಯಾವ ವರನೂ ಸಿಕ್ಕುವುದಿಲ್ಲ. ಹುಡುಗಿ ಸರಿಯಾಗಿದ್ದಾಗಲೇ ಆ ಗತಿ. ಈಗ ಹೇಳುವುದೇನಿದೆ? ನೀನೇ ಯೋಚಿಸಿ ನೋಡು. ನಮ್ಮ ಪಂಗಡದಲ್ಲಿ ಅಲ್ಲ—ಇನ್ನು ಯಾವ ಪಂಗಡದಲ್ಲಿಯಾದರೂ, ನಾವು ಕಾಲಿಗೆ ಬಿದ್ದರೂ, ಒಪ್ಪುವ ಗಂಡು ಒಬ್ಬನೂ ಇಲ್ಲ. ಹೀಗಿರುವಾಗ (ಕಣ್ಣುಗಳಲ್ಲಿ ಚಿಮ್ಮಿ ಬಂದ ನೀರನ್ನು ಒರಸಿಕೊಳ್ಳುತ್ತ)—ನಾನು ಹೇಳಿದುದನ್ನೆಲ್ಲಾ ಕೇಳಿ, ರಾಮಚಂದ್ರ ತಾನಾಗಿ ಮೀನಾಕ್ಷಿಯನ್ನು ಮದುವೆಯಾಗಲು ಒಪ್ಪಿ ಬರೆದಿರುತ್ತಾನೆ. ಅವನು ನಮ್ಮ ಪಂಗಡಕ್ಕೆ ಸೇರದ ಮಾತ್ರಕ್ಕೆ ಬ್ರಾಹ್ಮಣನಲ್ಲವೆ? ನಮ್ಮ ಪಂಗಡದವರೇ ನಮ್ಮ ಕೈಬಿಟ್ಟಮೇಲೆ ಇನ್ನು ಆ ಪಂಗಡದಲ್ಲಿ ಏಕೆ ಇರಬೇಕು? ಅವನು ಈ ವರ್ಷ ಪರೀಕ್ಷೆಗೆ ಹೋಗಿದ್ದಾನೆ. ಖಂಡಿತವಾಗಿಯೂ ಪ್ಯಾಸುಮಾಡುತ್ತಾನೆ. ಕೊನೆಗೆ ಒಂದು ಐವತ್ತು ರೂಪಾಯಿ ಸಂಬಳ ಸಿಕ್ಕಿದರೂ ಅವರು ಗಂಡ-ಹೆಂಡತಿ ಸುಖವಾಗಿರಬಹುದು. ನೋಡು, 'ಒಂದು ಕುರುಡುಕಾಸಿನ ಆಸೆಯೂ ಇಲ್ಲ' ಎಂದು ಬರೆದಿದ್ದಾನೆ. ಆ ಬ್ರಹ್ಮರಾಕ್ಷಸ—ವರದಕ್ಷಿಣೆಯ ಕಾಟವಂತೂ ಇಲ್ಲ. ಅಪ್ಪ ಮದುವೆಗಾಗಿ ಸೇರಿಸಿದ ದುಡ್ಡು ಹಾಗೆಯೇ ಇದೆಯಲ್ಲ. ಅದರಲ್ಲಿ ಅವನು ಮಾಡಿರುವ ಸಾಲವನ್ನೆಲ್ಲಾ ತೀರಿಸಿ, ಉಳಿದ ಅಲ್ಪಸ್ವಲ್ಪದರಲ್ಲಿ ಹೇಗೋ ಹಾಗೆ ಮದುವೆ ಮಾಡಬಹುದು. ಅವನ 'ಲೈಫ್ ಇನ್‌ಶೂರೆನ್ಸ್' ಹಣ ಸ್ವಲ್ಪ ಬರುವುದಿದೆ. ಬಂದರೆ ಎಷ್ಟೋ ಸಹಾಯವಾಗುತ್ತದೆ. ನೀನು ಇದನ್ನೆಲ್ಲಾ ಯೋಚನೆ ಮಾಡದೆ, ಸುಮ್ಮನೆ 'ಆಗುವುದಿಲ್ಲ' ಎಂದರೆ ಚೆನ್ನಾಗಿರುತ್ತದೆಯೆ?"

ಈ ಉಪನ್ಯಾಸವನ್ನು ಕೇಳಿದಮೇಲೆ ಲಕ್ಷ್ಮಮ್ಮನವರಿಗೆ ಜ್ಞಾನೋದಯವಾಯಿತು. "ಆಗಲಪ್ಪ. ಆದರೆ...." ಎಂದು ಹೇಳಿ ಸ್ವಲ್ಪ ನಿಲ್ಲಿಸಿದರು. ಶ್ರೀಕಂಠ ಹುಬ್ಬುಗಂಟಿಕ್ಕಿ, "ಪುನಃ ಇದೇನು?—ಆದರೆ" ಎಂದು ಕೇಳಿದ.

"ಮೀನಾಕ್ಷಿ ಏನು ಹೇಳುವಳೋ?"

"ಅದರ ವಿಷಯ ನನಗೆ ಬಿಡು."

ಶ್ರೀಕಂಠ ಪಕ್ಕದ ಕೊಠಡಿಗೆ ಹೋದ. ಒಳಗೆ ಬಾಗಿಲ ಹಿಂದೆ ಮೀನಾಕ್ಷಿ ಕುಳಿತಿದ್ದಳು. ತಲೆ ಬಾಚಿಕೊಂಡಿದ್ದಳು. ಬಲಗೈಯ ತೋರಬೆರಳಿನ ತುದಿಯಲ್ಲಿ ಒಂದು ಕುಂಕುಮದ ಬೊಟ್ಟು; ಕುಂಕುಮವನ್ನು ಇಟ್ಟುಕೊಳ್ಳುವುದರಲ್ಲಿದ್ದಳು. ಅಣ್ಣ–ತಾಯಿಯರ ಮಾತುಗಳನ್ನೆಲ್ಲಾ ಕೇಳುತ್ತಿದ್ದವಳು, ಕುಂಕುಮ ಇಟ್ಟುಕೊಳ್ಳುವುದನ್ನು ಮರೆತು, ಹಾಗೆಯೇ ಕೈಯನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದಳು. ಕಂಬನಿಗಳನ್ನು ಆಗತಾನೇ ಒರಸಿಕೊಂಡಿದ್ದಳು. ಮುಖದ ಮೇಲೆ, ಒಳಗಿನಿಂದ ಹರಿದುಬಂದ ಮುಗುಳ್ನಗೆಯ ಚಿಕ್ಕದೊಂದು ತರಂಗ ಆಡುತ್ತಿತ್ತು. ಶ್ರೀಕಂಠ ಇದನ್ನೆಲ್ಲಾ ನೋಡಿ, ಮಾತನಾಡದೆ ಹೊರಗೆ ಬಂದು, "ಅಮ್ಮಾ, ಮೀನಾಕ್ಷಿ ಒಪ್ಪಿದಳು" ಎಂದ.

೩

ಮರುದಿನ ಸಾಯಂಕಾಲ ರಾಮಚಂದ್ರ ಬರೆದಿದ್ದ ಪ್ರಕಾರ ಶ್ರೀಕಂಠ ಅವನ ಕೊಠಡಿಯ ಹತ್ತಿರ ಹೋದ. ರಾಮಚಂದ್ರ ಇವನಿಗಾಗಿ ಕಾದುಕೊಂಡಿದ್ದ. ಇಬ್ಬರೂ ಲಾಲ್‌ಬಾಗ್ ಕಡೆಗೆ ಹೊರಟರು. ಸ್ವಲ್ಪ ದೂರ ಯಾರೂ ಮಾತನಾಡಲಿಲ್ಲ. ಶ್ರೀಕಂಠನ ಮನಸ್ಸಿನಲ್ಲಿ 'ಹೇಗೆ ಮಾತನ್ನು ಪ್ರಾರಂಭಿಸುವುದು?' ಎಂದು ಯೋಚನೆ. ರಾಮಚಂದ್ರನ ಮನಸ್ಸಿನಲ್ಲಿ 'ನನ್ನ ಕಾಗದ ಏನೇನು ಕಾರುಭಾರು ಮಾಡಿದೆಯೋ?' ಎಂದು ಯೋಚನೆ. ಹೀಗೆ ಇಬ್ಬರೂ ಯೋಚನಾಪರರಾಗಿದ್ದುದರಿಂದ ಒಬ್ಬರೊಡನೊಬ್ಬರು ಮಾತನಾಡಲು ಅವಕಾಶವಾಗಲಿಲ್ಲ. ಇಬ್ಬರೂ ಮೌನವಾಗಿಯೇ ಲಾಲ್‌ಬಾಗ್ ತೋಟವನ್ನು ಸೇರಿದರು. ಅಲ್ಲಿ ಸಾಂದ್ರವಾಗಿ ಬೆಳೆದಿದ್ದ ಮರಗಳ ಮಧ್ಯೆ ಹಾಕಿರುವ ಒಂದು ಶಿಲಾಸನದ ಮೇಲೆ ಕುಳಿತುಕೊಂಡರು. ರಾಮಚಂದ್ರನೇ ಮೊದಲು ಮೌನವನ್ನು ಭೇದಿಸಿ, "ನನ್ನ ಮನಸ್ಸಿಗೆ ಹೊಳೆದ ಉತ್ತರ ಸರಿಯೆ—ಶ್ರೀಕಂಠಾ?" ಎಂದು ಕೇಳಿದ.

ಶ್ರೀಕಂಠನಿಗೆ ಮಾತಿಲ್ಲ; ಇದ್ದರೂ ನಾಲಗೆ ಹೇಳಲಾರದಂತಾಯಿತು. ಅವನ ಕಣ್ಣುಗಳಲ್ಲಿ ನೀರು ಜಳಜಳನೆ ಸುರಿಯಿತು. ಮೆಲ್ಲನೆ ತಲೆಯನ್ನು

ಎತ್ತಿ ರಾಮುಚಂದ್ರನ ಮುಖವನ್ನು ನೋಡಿದ. ಏನನ್ನೋ ಹೇಳಬೇಕೆಂದು ಪ್ರಯತ್ನಪಟ್ಟ; ಆಗಲಿಲ್ಲ ಇದನ್ನು ನೋಡಿ ರಾಮುಚಂದ್ರ ಮೃದುವಾದ ದನಿಯಿಂದ, "ಶ್ರೀಕಂಠ, ಏಕೆ ಹೀಗೆ? ನಾನು ಕಾಗದ ಬರೆದದ್ದು ತಪ್ಪು ಆಯಿತೆ?" ಎಂದು ಕೇಳಿದ. ಬಹಳ ಹೊತ್ತಾದಮೇಲೆ ಶ್ರೀಕಂಠ ರಾಮುಚಂದ್ರನ ಕಡೆಗೆ ತಿರುಗಿ, "ರಾಮು, ರಾಮು, ನಿನ್ನದು—" ಎಂದು ಅಷ್ಟಕ್ಕೇ ನಿಲ್ಲಿಸಿದ. ರಾಮುಚಂದ್ರನ ಮನಸ್ಸು ಸ್ವಲ್ಪ ಅಸ್ಥಿರವಾಯಿತು. "ಏನು—ನನ್ನದು?" ಎಂದು ಕೇಳಿದ.

"ಬಹಳ ದೊಡ್ಡ ಮನಸ್ಸು. ನೀನು ನಮ್ಮ ಭಾಗದ—"

"ಓ! ಅಷ್ಟೇ ತಾನೆ!"

"ನಾನು ಮುಖಸ್ತು—"

"ನನ್ನ ಉತ್ತರ ಸರಿಯಾಗಿತ್ತೆ? ಹೇಳು."

"ರಾಮು, ನನ್ನ ತಂಗಿ ಕುರುಡಿ—ಶುದ್ಧ ಕುರುಡಿ! ಸ್ವಲ್ಪವೂ ಕಣ್ಣು ಕಾಣಿಸುವುದಿಲ್ಲ. ಈ ವಿಷಯ ನಿನ್ನ ಮನಸ್ಸನ್ನು ಸ್ವಲ್ಪವೂ ಹಿಂದೆಳೆಯಲಿಲ್ಲವೆ? ನಿನ್ನ ಕಾಗದದಿಂದ ನಮಗೆ ಎಷ್ಟು ಸಂತೋಷವಾಯಿತೋ ಅದನ್ನು ಹೇಳಲಾರೆ. ಆದರೆ ಈ ವಿಷಯದಲ್ಲಿ ಇಬ್ಬರೂ ಸುಖವಾಗಿರುವುದು ಮುಖ್ಯ. ಮುಂದೆ ನೀನು 'ಹೀಗೆ ಮಾಡಬಾರದಾಗಿತ್ತು' ಎಂದು ಅನ್ನುವ ಹಾಗಾಗಬಾರದು."

"ಶ್ರೀಕಂಠ, ಹಾಗಾದರೆ ನನ್ನ ಮನಸ್ಸನ್ನು ನೀನಿನ್ನೂ ಅರಿಯೆ. ನಾನು ಆ ಕಾಗದವನ್ನು ಬಹಳ ಸಂತೋಷದಿಂದ ಬರೆದೆ."

"ಆದರೆ ನಿನ್ನದು ಎಂತಹ ಆತ್ಮನಿರಾಕರಣೆ, ರಾಮು!"

"ಆತ್ಮನಿರಾಕರಣೆ ಎಲ್ಲಿ ಬಂತು!"

"ಹೌದು, ನೀನು ಎಲ್ಲಾ ಸರಿಯಾಗಿರುವ ಕಡೆ ಮದುವೆಯಾಗಿ, ಸುಖವಾಗಿರು...."

"ಅಯ್ಯೋ! ಹುಚ್ಚ! ಹೆಂಡತಿ ಕುರುಡಳಾದ ಮಾತ್ರಕ್ಕೆ ಸುಖವಾಗಿರಲಾರೆನೆ? ಹೌದು, ಸ್ವಲ್ಪ ಕಷ್ಟವಾಗುತ್ತದೆ. ಆದರೆ ಹಾಗೆ ಕಷ್ಟಪಡುವುದರಲ್ಲಿ ಎಷ್ಟು ಸುಖವಿದೆ, ನಿನಗೆ ಗೊತ್ತೆ! ಯಾರಿಗೋಸ್ಕರ ನಮ್ಮ ಹೃದಯ—ಕರುಳು ಎದ್ದು ಬರುತ್ತದೆಯೋ ಅವರಿಗೋಸ್ಕರ ಸಾಯುವುದೂ ಸುಖವಾಗಿರು

ತ್ತದೆ!—ಕಂಠಿ. ಇಲ್ಲಿ ಆತ್ಮನಿರಾಕರಣೆ ಎಲ್ಲಿ?"

"ನಿನ್ನ ಮನಸ್ಸು ದೊಡ್ಡದು. ಅದಕ್ಕೆ ಹಾಗೆ ತೋರದಿರಬಹುದು. ಆದರೆ—ನಮಗೆ—"

"ಮೀನಾಕ್ಷಿ ಏನು ಹೇಳಿದಳು?"

"ಏನೂ ಇಲ್ಲ."

"ಹಾಗಾದರೆ?—"

"ನಿನ್ನ ಕಾಗದವನ್ನು ಅಮ್ಮನಿಗೆ ಓದಿ ಹೇಳಿ, ಅದರ ವಿಷಯವಾಗಿ ಮಾತನಾಡುತ್ತಿದ್ದಾಗ, ಮೀನಾಕ್ಷಿ ಪಕ್ಕದ ಕೊಠಡಿಯಲ್ಲಿ ಕುಳಿತು ಕೇಳುತ್ತಿದ್ದಳು. ಅಮ್ಮನ ಕೈಲಿ 'ಆಗಲಿ' ಅನ್ನಿಸಿಕೊಂಡು, ಮೀನಾಕ್ಷಿ ಏನು ಹೇಳುವಳೋ—ಎಂದು, ಅವಳಿದ್ದ ಕೊಠಡಿಗೆ ಹೋದೆ. ನಾನು ಹೋದದ್ದು ಅವಳಿಗೆ ಗೊತ್ತಾಗಲಿಲ್ಲ. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು. ತನ್ನಷ್ಟಕ್ಕೆ ತಾನೇ ಮೆಲ್ಲನೆ ಮುಗುಳ್ನಗೆ ನಗುತ್ತಿದ್ದಳು. ಇನ್ನೇನಾಗಬೇಕು!"

"ಓ! ಬೇಕಾದಷ್ಟಾಯಿತು! ಬಾ, ಹೊತ್ತಾಯಿತು, ಹೋಗೋಣ."

೪

ರಾಮರಾಯರು ಮಗಳ ಮದುವೆಗಾಗಿ ಗಳಿಸಿಟ್ಟಿದ್ದ ಹಣ ಹಾಗೆಯೇ ಇತ್ತು. ಶ್ರೀಕಂಠ ಅವರ ಕಾಗದಪತ್ರಗಳನ್ನೆಲ್ಲಾ ಹುಡುಕಿ ತೆಗೆದು, ಅವರು ಮಾಡಿದ್ದ ಸಾಲವನ್ನೆಲ್ಲಾ ಗಡುವು ಮುಗಿಯುವುದಕ್ಕೆ ಮುಂಚೆಯೇ ತೀರಿಸಿ, ಉಳಿದುದನ್ನು ತನ್ನಲ್ಲಿಯೇ ಇಟ್ಟುಕೊಂಡಿದ್ದ. ತಂದೆಯ ಜೀವವಿಮೆ ಹಣ ಸುಮಾರು ಎರಡು ಸಾವಿರ ರೂಪಾಯಿ ಕೈಗೆ ಬಂತು.

ರಾಮಚಂದ್ರನ ಪರೀಕ್ಷೆ ಮುಗಿದು ರಜ ಬಂತು. ರಜದಲ್ಲಿ ಮೀನಾಕ್ಷಿಗೂ ರಾಮಚಂದ್ರನಿಗೂ ಮದುವೆಯಾಯಿತು. ರಾಮಚಂದ್ರ ಕುರುಡಿಯನ್ನು ಮದುವೆಯಾದ. ಕಾರ್ಯ ವಿದುರಾಶ್ವತ್ಥದಲ್ಲಿ ನೆರವೇರಿತು. ಬಡತನದ ಮದುವೆ. ಸುಲಿಗೆ ಇಲ್ಲ! ಸಂಕ್ಷೇಪದಲ್ಲಿ ಮುಗಿಯಿತು. ಅದರ ವರ್ಣನೆ ಅನಾವಶ್ಯಕ. ಧಾರೆಯಾಯಿತು. ಹೋಗಿದ್ದವರೆಲ್ಲರೂ ಹಿಂತಿರುಗಿ ಊರಿಗೆ ಬಂದರು.

ರಾಮಚಂದ್ರ ಮದುವೆಯಾದಮೇಲೆ ಕೆಲವು ದಿನಗಳು ಶ್ರೀಕಂಠನ ಮನೆಯಲ್ಲಿಯೇ ಇದ್ದು, ತನಗೆ ಬರುತ್ತಿದ್ದ 'ಸ್ಕಾಲರ್‌ಷಿಪ್' ಹಣದಲ್ಲಿ ಸ್ವಲ್ಪ

ವನ್ನು ಗಳಿಸಿಟ್ಟಿದ್ದ. ಅದನ್ನು ಅವರ ಮನೆಯ ಖರ್ಚಿಗೆ ಕೊಟ್ಟುಬಿಟ್ಟ.

ಪರೀಕ್ಷೆಯ ಫಲಿತಾಂಶ ಬಂತು. ರಾಮಚಂದ್ರ ಉತ್ತಮ ತರಗತಿಯಲ್ಲಿ ಉತ್ತೀರ್ಣನಾಗಿದ್ದ. ಕೆಲವು ದಿನಗಳಲ್ಲಿಯೇ ಅವನಿಗೆ ಎಪ್ಪತ್ತೈದು ರೂಪಾಯಿ ಸಂಬಳದ ಒಂದು ಉಪಾಧ್ಯಾಯ ವೃತ್ತಿ ದೊರೆಯಿತು. ಕೆಲಸವಾದ ಐದಾರು ದಿನಗಳಲ್ಲಿಯೇ ಒಂದು ಸಣ್ಣ—ಅನುಕೂಲವಾದ—ಮನೆಯನ್ನು ಗೊತ್ತುಮಾಡಿ, ಹೆಂಡತಿ, ಅತ್ತೆ, ಭಾವಮೈದುನ—ಎಲ್ಲರನ್ನೂ ಬರಮಾಡಿಕೊಂಡ. ಸಂಸಾರ ಸುಖವಾಗಿ ಸಾಗುತ್ತಿತ್ತು.

ಹೀಗೆಯೇ ಕೆಲವು ದಿನಗಳು ಕಳೆದುವು. ಒಂದು ದಿನ ರಾಮಚಂದ್ರ ಒಬ್ಬನೇ ತನ್ನ ಕೊಠಡಿಯಲ್ಲಿ ಕುಳಿತು, ಏನೋ ಯೋಚಿಸುತ್ತ, ಕೊನೆಗೆ ಹೀಗೆ ಅಂದುಕೊಂಡ: " ದೇವರು ನನ್ನ ಮೀನಾಕ್ಷಿಯನ್ನು ನಾನು ಕಣ್ಣು ತುಂಬಾ ನೋಡುವ ಅದೃಷ್ಟವನ್ನು ನನಗೆ ಕೊಟ್ಟಿದ್ದಾನೆ; ಆದರೆ ಅದು ಅವಳಿಗೆ ಎಂದೆಂದಿಗೂ ಇಲ್ಲದಂತಾಯಿತಲ್ಲಾ! ಅಯ್ಯೋ! ಇದು ಮಾಯೆಯಂತೆ! ಇದು ಲೀಲೆಯಂತೆ!" ಅವನ ಮುಖ ಹಾಗೆಯೇ ಗಂಭೀರವಾಯಿತು. ಬರಬರುತ್ತ ತಿರಸ್ಕಾರ ಭಾವವನ್ನು ತಾಳಿತು. ದೊಡ್ಡದಾಗಿ ನಿಟ್ಟುಸಿರು ಬಿಟ್ಟ.

ಮೀನಾಕ್ಷಿಯೂ ಒಂದು ಕಡೆ ಕುಳಿತು ಯೋಚಿಸುವಳು. ಅವಳಿಗೆ ಏನು ಯೋಚನೆ ಅನ್ನುವಿರಾ? ಮೀನಾಕ್ಷಿ ಹದಿಮೂರು ವರ್ಷದ ಹುಡುಗಿ. ವಯಸ್ಸಿಗಿಂತ ತಿಳುವಳಿಕೆ ಹೆಚ್ಚು. ಸಂಸ್ಕಾರಹೊಂದಿದ ಜೀವ; ತಿದ್ದಿದ ಮನಸ್ಸು. ಅವಳು ಹೀಗೆ ಯೋಚಿಸುವಳು: " ಕಣ್ಣಿದ್ದವಳನ್ನು ಮದುವೆಯಾಗಿದ್ದರೆ ಎಷ್ಟು ಸುಖವಾಗಿರುತ್ತಿದ್ದರೊ! ಎಷ್ಟು ಸಂತೋಷವಿರುತ್ತಿತ್ತೋ! ಈಗ ಅವನ್ನೆಲ್ಲಾ ಬಿಟ್ಟು, ನನ್ನನ್ನು ಕಟ್ಟಿಕೊಂಡರಲ್ಲಾ!—ಅವರದ್ದು ಇನ್ನೆಂತಹ ದೊಡ್ಡ ಮನಸ್ಸು! ಅಂತಹ ದೇವರ ಕೈಹಿಡಿದೆನಲ್ಲಾ!" ಎಂಬ ಸಂತೋಷ. ಇದು ಒಂದು ಯೋಚನೆ. ಇನ್ನೊಂದು ಯೋಚನೆ: " ಅವರು ನನಗೆ ಎಷ್ಟು ಹತ್ತಿರದವರು! ಅಷ್ಟು ಹತ್ತಿರದವರನ್ನು ಕಣ್ಣುತುಂಬ ನೋಡುವ ಪುಣ್ಯವೇ ನನಗೆ ಇಲ್ಲವಾಯಿತಲ್ಲಾ! ಭಗವಂತಾ!" ಎಂಬುದು. ಇದು ಅವಳ ಜೀವವನ್ನೇ ಸುಡುತ್ತಿದ್ದ ಯೋಚನೆ.

ಒಂದು ದಿನ ರಾಮಚಂದ್ರನಿಗೆ ಮೀನಾಕ್ಷಿಯನ್ನು ಮಾತನಾಡಿಸಬೇಕು ಎಂದು ಮನಸ್ಸಾಯಿತು. ಮೀನಾಕ್ಷಿ ಒಳಗಿನ ಕೊಠಡಿಯಲ್ಲಿ ಒಬ್ಬಳೇ ಕುಳಿ

ತಿದ್ದಳು. ಆದಕ್ಕೆ ಮೊದಲು ಅವನು ಅವಳೊಡನೆ ಮಾತನಾಡಿರಲಿಲ್ಲ; ಇದೇ ಮೊದಲು. ಮೆಲ್ಲಗೆ ಅವಳಿದ್ದ ಕೊಠಡಿಯೊಳಕ್ಕೆ ಹೋದ. ಕಣ್ಣು ಕಾಣಿಸುವ ಹುಡುಗಿಯಾಗಿದ್ದಿದ್ದರೆ, ಅವನು ಬರುವ ಸುಳುವು ಕಂಡಿದ್ದರೂ ಓಡಿಹೋಗು ತ್ತಿದ್ದಳು. ಆದರೆ ಮೀನಾಕ್ಷಿ ಶುದ್ಧ ಕುರುಡಿ. ಕಾಲಿನ ಸಪ್ಪಳವನ್ನು ಕೇಳಿ, "ಯಾರು?" ಎಂದು ಮೃದುವಾಗಿ ಕೇಳಿದಳು. ರಾಮಚಂದ್ರನಿಗೆ ಆ ಎರಡು ಅಕ್ಷರ ಬಹಳ ಇಂಪಾಗಿ ಕೇಳಿಸಿತು. ಅವನು "ನಾನು" ಎಂದು ಮೆಲ್ಲಗೆ ಹೇಳಿದ. ಅವಳು ಧ್ವನಿಯನ್ನು ಗುರ್ತಿಸಿ, ಹೋಗಲು ಎದ್ದು ನಿಂತುಕೊಂಡಳು. ಆದರೆ ಹೇಗೆ ಹೋಗುವುದು? ಕುರುಡಿ! ಯಾರಾದರೂ ಕೈಹಿಡಿದು ದಾರಿ ತೋರಿಸಬೇಕು. ಆಗ ಕೊಠಡಿಯನ್ನು ಬಿಟ್ಟುಹೋಗಲು ಅಸಹಾಯಳಾಗಿ, ಇದ್ದಲ್ಲಿಯೇ ನಿಂತುಬಿಟ್ಟಳು. ಅವಳ ಮುಖವು ಕೆಂಪೇರಿ, ಅದರ ಮೇಲೆಲ್ಲಾ ಬೆವರು ಹನಿಗಳು ಮೂಡಿದುವು. ಭಯದಿಂದ ಶರೀರ ಸ್ವಲ್ಪ ನಡುಗುತ್ತಿತ್ತು. ಜೊತೆಗೆ ನಾಚಿಕೆ ಬೇರೆ. ಅವಳಿಗೆ ದೃಷ್ಟಿ ಮಾತ್ರ ಇದ್ದಿದ್ದರೆ, ಈ ಸಂದರ್ಭ ದಲ್ಲಿ, ಅವಳ ಕಣ್ಣುಗಳಲ್ಲಿ, ಭಯಪಟ್ಟ ಚಿಗರಿಮರಿಯ ಕಣ್ಣಿನ ಚಂಚಲತ್ವದ ಪ್ರತಿಛಾಯೆಯನ್ನು ನೋಡಬಹುದಾಗಿತ್ತು. ಅದೇ ಇಲ್ಲ. ರಾಮಚಂದ್ರನಿಗೆ ಇದುವರೆಗೂ ಅವಳ ಕುರುಡು, ವ್ಯಥೆಯನ್ನು ಕೊಟ್ಟಿರಲಿಲ್ಲ. ಆದರೆ ಇಂದು, ಬಳುಕಿ ನಿಂತಿದ್ದ ಆ ಚೆಲುವೆಯನ್ನು ನೋಡಿ ಅವನ ಮನಸ್ಸು ತಲ್ಲಣಿಸಿತು. ಅವನ ಹೃದಯ 'ಅಯ್ಯೋ!' ಎಂದು ಧ್ವನಿಮಾಡಿತು. ಕಣ್ಣು ಕುರುಡಾಗಿ, ಮೀನಾಕ್ಷಿಯ ಜೀವನೇ ಭೂಮಿಗೆ ಇಳಿದುಹೋಗಿತ್ತು. ಯಾವಾಗಲೂ ಒಂದು ಮೂಲೆಯಲ್ಲಿ ತಲೆ ಬಗ್ಗಿಸಿಕೊಂಡು ಕುಳಿತಿರುವಳು. ಲಕ್ಷ್ಮಮ್ಮನವರಿಗೆ ಅವರ ಕೆಲಸ; ಶ್ರೀಕಂಠನಿಗೆ ಒಬ್ಬ ಸಾಹುಕಾರನ ಮನೆಯಲ್ಲಿ ಗುಮಾಸ್ತಗಿರಿ ಕೂಲಿ; ರಾಮಚಂದ್ರನಿಗೆ ಸ್ಕೂಲು. ಇನ್ನು ಅವಳೊಡನೆ ಮಾತನಾಡುತ್ತ, ಅವಳ ಮನಸ್ಸಿಗೆ ಶಾಂತಿಯನ್ನು ತರುವವರಾರು? ರಾಮಚಂದ್ರ ಇವನ್ನೆಲ್ಲಾ ಯೋಚನೆ ಮಾಡಿ, ತಾನೇ ಆ ಕೆಲಸವನ್ನು ಕೈಕೊಳ್ಳಬೇಕೆಂದು ನಿಶ್ಚಯಿಸಿ, ಈ ದಿನ ಅವಳ ಕೊಠಡಿಗೆ ಬಂದ. ಮೀನಾಕ್ಷಿ ಸುಮ್ಮನೆ ನಿಂತಿದ್ದನ್ನು ನೋಡಿ ಅವನು "ಮೀನಾಕ್ಷೀ" ಎಂದು ಮೆಲ್ಲಗೆ ಕರೆದ.

ಮೀನಾಕ್ಷಿ ಮೌನ! ರಾಮಚಂದ್ರ ಒಳಕ್ಕೆ ಹೋಗಿ, ಅವಳ ಕೈ ಹಿಡಿದು ಕೊಂಡ. ಅವಳು ಬಿಡಿಸಿಕೊಳ್ಳಲು ಪ್ರಯತ್ನ ಮಾಡಿದಳು— ರಾಮಚಂದ್ರ

ಬಿಡಲಿಲ್ಲ. ಬಲವಂತದಿಂದ ಕೂರಿಸಿಕೊಂಡು, ಪುನಃ ಮೃದುವಾಗಿ "ಮೀನಾಕ್ಷೀ" ಎಂದು ಕರೆದ.

ಉತ್ತರವಿಲ್ಲ.

"ಮೀನಾಕ್ಷಿ, ನಾನು ನಿನ್ನ ಕೂಡ ಮಾತನಾಡಬೇಕೆಂದು ಎಷ್ಟು ಆಸೆಯನ್ನು ಇಟ್ಟುಕೊಂಡು ಬಂದೆ, ಗೊತ್ತೆ? ನಾನು ಎಷ್ಟು ಸಲ ಕರೆದರೂ ನೀನು ಒಂದು ಬಾರಿಯಾದರೂ ಮಾತನಾಡುವುದಿಲ್ಲವಲ್ಲಾ?" ಎಂದು ಮನಸ್ಸು ಕರಗುವ ಹಾಗೆ ಹೇಳಿದ. ಪುನಃ "ಮೀನಾಕ್ಷಿ" ಎಂದು, ಇನ್ನೂ ಮೃದುವಾಗಿ ಕರೆದ.

ಇಷ್ಟು ಹೊತ್ತಿಗೆ ಅವಳ ಮನಸ್ಸು ಕರಗಿತೆಂದು ಕಾಣುತ್ತದೆ. ಬಗ್ಗಿದ ತಲೆಯನ್ನು ಇನ್ನೂ ಬಗ್ಗಿಸಿ, ಕೇಳಿಸಿತೋ ಇಲ್ಲವೋ ಅನ್ನುವ ಹಾಗೆ,

"ಏನು?" ಎಂದಳು.

"ಮೂರು ಹೊತ್ತೂ ನೀನು ಒಬ್ಬಳೇ ಕುಳಿತಿರುವೆಯಲ್ಲಾ—ನಿನಗೆ ಬೇಸರವಾಗುವುದಿಲ್ಲವೆ?"

ಮೀನಾಕ್ಷಿ ಮಾತನಾಡಲಿಲ್ಲ; ದೊಡ್ಡದಾಗಿ ನಿಟ್ಟುಸಿರು ಬಿಟ್ಟಳು.

"ನಾನು ನಿತ್ಯ ಸ್ವಲ್ಪ ಹೊತ್ತು ಬಂದು, ನಿನ್ನ ಹತ್ತಿರದಲ್ಲಿ ಕುಳಿತು, ನಿನ್ನ ಬೇಸರ ಹೋಗುವ ಹಾಗೆ ಮಾಡಲೆ?"

ಈಗಲೂ ಮೀನಾಕ್ಷಿ ಮಾತನಾಡಲಿಲ್ಲ. ಮುಖವನ್ನು ಸ್ವಲ್ಪ ಮೇಲಕ್ಕೆ ಎತ್ತಿದಳು. ಅದರಲ್ಲಿ ಒಳಗಿನ ಆನಂದ ಒತ್ತಿಬರುತ್ತಿತ್ತು.

"ಹೇಳು, ಮೀನಾಕ್ಷಿ! ನೀನು ಒಪ್ಪಿದರೆ ಬರುತ್ತೇನೆ; ಇಲ್ಲವಾದರೆ ಇಲ್ಲ!"

ಮೀನಾಕ್ಷಿಗೆ ಸಂಕಟಕ್ಕೆ ಬಂತು! ಕೊನೆಗೆ ತುಟಿಯನ್ನು ಸ್ವಲ್ಪ ಕಂಪಿಸುತ್ತ, "ಆಗಬಹುದು" ಎಂದು ಉತ್ತರ ಕೊಟ್ಟಳು.

"ನಿನ್ನನ್ನು ಇಂದಿನಿಂದ 'ಮೀನಾ' ಎಂದು ಕರೆಯುತ್ತೇನೆ—ಆಗಬಹುದೆ?"

ಮೀನಾಕ್ಷಿಗೆ ನಾಚಿಕೆಯಾಯಿತು. ನಕ್ಕು, ತಲೆಯನ್ನು ಬಗ್ಗಿಸಿ, "ಹ್ಞು" ಎಂದಳು.

"ಮೀನಾ!"

ಮೀನಾಕ್ಷಿ ನಗುತ್ತ, "ಏ–ನು?" ಎಂದಳು.

೫

ಒಂದು ದಿನ ಸಾಯಂಕಾಲ. ಲಕ್ಷ್ಮಮ್ಮನವರು ಎಲ್ಲಿಯೋ ನೆರೆಮನೆಗೆ ಹೋಗಿದ್ದರು. ಶ್ರೀಕಂಠ ಏನೋ ಕೆಲಸದ ಮೇಲೆ ಪೇಟೆಯ ಕಡೆಗೆ ಹೋಗಿದ್ದ. ಮನೆಯಲ್ಲಿ ಮೀನಾಕ್ಷಿ, ರಾಮಚಂದ್ರ—ಇಬ್ಬರೇ. ಮೀನಾಕ್ಷಿ ಕೊಠಡಿಯಲ್ಲಿ ಕುಳಿತು, ಮಲ್ಲಿಗೆಹೂವಿನ ಸರವನ್ನು ಕಟ್ಟುತ್ತಿದ್ದಳು. ರಾಮಚಂದ್ರ ಅವಳ ಪಕ್ಕದಲ್ಲಿ ಹಾಸಿಗೆ ಸುರುಳಿಗೆ ತಲೆ ಕೊಟ್ಟು ಮಲಗಿಕೊಂಡಿದ್ದ. ಮಾತು ಪ್ರಾರಂಭವಾಗಿ ಸ್ವಲ್ಪ ಹೊತ್ತಾಗಿತ್ತು.

"ನೀವಾಗಿ ಮನಸ್ಸು ಒಪ್ಪಿ ನನ್ನನ್ನು ಮದುವೆಯಾದಿರಾ?"

ಗಂಡಹೆಂಡರಿಗೆ ಆಗಲೇ ಸ್ವಲ್ಪ ಸಲಿಗೆ!

"ಹೌದು."

"ಕಂಠಿ ಹೇಳಲಿಲ್ಲವೆ?—ನಾನು ಶುದ್ಧ ಕುರುಡಿ—ಅಂತ!"

"ಹೇಳಿದ."

"ಹಾಗೂ ಒಪ್ಪಿದಿರಾ?—ಈ ಕುರುಡಿಯನ್ನು ಮದುವೆಯಾಗುವುದಕ್ಕೆ! ಒಂದು ಕಡೆಯಿಂದ ಇನ್ನೊಂದು ಕಡೆಗೆ ಕೈ ಹಿಡಿದು ನಡೆದುಕೊಂಡು ಹೋಗಬೇಕು—ಹೀಗಿದೆ ನನ್ನ ಅವಸ್ಥೆ! ನಾನೇನೋ ನಿಮ್ಮ ಕೈಹಿಡಿದುದು ಸರಿ...." ಮಾತು ನಿಲ್ಲಿಸಿ, ಸ್ವಲ್ಪ ನಗುತ್ತ, "ನೀವೂ ನನ್ನ ಕೈಹಿಡಿಯುವ ಹಾಗಾಯಿತಲ್ಲಾ!"

"ಅಯ್ಯೋ, ಮೀನಾ! ಅದರಲ್ಲಿ ಎಷ್ಟು ಸುಖವಿದೆ ಗೊತ್ತೆ?"

"ಏನು ಸುಖವೋ, ನಾನು ಕಾಣೆ! ಎಲ್ಲಿ—ಎಷ್ಟು ಸುಖ, ಸಂತೋಷ ಕಾದಿತ್ತೋ—ಯಾವ ಪುಣ್ಯವಂತೆ ಮಾಲೆ ಹಿಡಿದಿದ್ದಳೋ—ಅದನ್ನೆಲ್ಲಾ ಬಿಟ್ಟು—"

"ಸರಿ! ಪ್ರಾರಂಭ ಮಾಡಿದೆಯಲ್ಲ!—ಮೀನಾ! ನಾನೂ ಹೂ ಕಟ್ಟಲೆ!"

"—ಈ ಕುರುಡಿಯನ್ನು ಕಟ್ಟಿಕೊಂಡಿರಲ್ಲ!"

"ನೀನು ಕುರುಡಿಯಾದ ಮಾತ್ರಕ್ಕೆ ಏನು? ಗುಣ, ರೂಪ ಎಲ್ಲಾ ಇದೆಯಲ್ಲ, ಮೀನಾ."

ನಗುತ್ತ, "ನನ್ನ ಗುಣವನ್ನು ನೀವೇ ಮೆಚ್ಚಬೇಕು!" ಎಂದಳು.

"ನ್ಯಾಯ! ಮೆಚ್ಚಬೇಕಾದವರು ಮೆಚ್ಚದೆ ಇತರರು ಮೆಚ್ಚಿದರೇನು?"

"ಕುರುಡಿಗೆ ರೂಪವೆಲ್ಲಿ?"

"ಅಯ್ಯೋ! ಪೆಚ್ಚೇ! ಕಣ್ಣು ಕಾಣದ ಮಾತ್ರಕ್ಕೆ ರೂಪವಿಲ್ಲವೆ? ನೀನು ಕಣ್ಣು ರೆಪ್ಪೆಗಳನ್ನು ಮುಚ್ಚಿಕೊಂಡರೆ, ಕುರುಡಿ—ಎಂದು ಯಾರೂ ಹೇಳಲಾರರು."

"ಸರಿ! ಹಾಗಾದರೆ ಮೂರು ಹೊತ್ತೂ ರೆಪ್ಪೆ ಮುಚ್ಚಿಕೊಂಡೇ ಇರುತ್ತೇನೆ!"

"ನಾನು ಹಾಗೆ ಹೇಳಲಿಲ್ಲ, ಮೀನಾ. ನಿನ್ನ ಕಣ್ಣಿನ ನೋಡುವ ಶಕ್ತಿ ಮಾತ್ರ ಹೋಗಿದೆ. ಅಷ್ಟೇ ಹೊರತು, ಕಣ್ಣಿನ ಆಕೃತಿ ಸ್ವಲ್ಪವೂ ಕೆಟ್ಟಿಲ್ಲ."

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಾದರು. ಮೀನಾಕ್ಷಿ ಮೌನವಾಗಿ ಸರ ಕಟ್ಟುತ್ತಿದ್ದಳು. ಅರ್ಧ ಮುಗಿದಿದ್ದ ಸರವನ್ನು ಹಾಗೆಯೇ ತೊಡೆಯ ಮೇಲೆ ಇಟ್ಟುಕೊಂಡು, ತಲೆಯನ್ನು ಸ್ವಲ್ಪ ಎತ್ತಿ, ಮುಖವನ್ನು ಅವಳ ನಲ್ಲನು ಕುಳಿತಿದ್ದ ಕಡೆಗೆ ತಿರುಗಿಸಿದಳು. ಕಾಂತಿ ಇಲ್ಲದ ಕಣ್ಣುಗಳು. ಅವುಗಳಲ್ಲಿ, ಸರಿಯಾಗಿ ಹೇಳುವುದಕ್ಕೆ ಆಗದ, ಒಂದು ವಿಧವಾದ ಭಾವ. ಅವಳ ಸರ್ವ ಜೀವವೂ ಆ ಭಾವಗರ್ಭಿತವಾದ ಕಣ್ಣುಗಳ ಹಿಂದೆ ಒತ್ತಿಬಂದು, 'ಪ್ರಿಯನನ್ನು ನೋಡಬೇಕು! ನೋಡಬೇಕು!' ಎಂದು ತುಡಿದುಕೊಳ್ಳುವುದು. ಆದರೆ ಅವುಗಳ ಆ ಶಕ್ತಿಯೇ ಇಂಗಿಹೋಗಿದೆ. ಅವಳು ತನ್ನ ಆ ಕೊಳ್ಳೆಹೋದ, ಕಾಂತಿಶೂನ್ಯವಾದ ಕಣ್ಣಾಲಿಗಳನ್ನು ಗಂಡನ ಕಡೆಗೆ ತಿರುಗಿಸಿ, ಒಂದು ವಿಧವಾದ ಸೊಂದ ನಗುವಿನೊಡನೆ, "ನೀವು-ನೀವು—ಹೇಗೆ ಇದ್ದೀರಿ ನೋಡುವುದಕ್ಕೆ?" ಎಂದು ಕೇಳಿದಳು. ಕೇಳುತ್ತಿದ್ದ ಹಾಗೆಯೇ ಅವಳ ಕಣ್ಣುಗಳಲ್ಲಿ ಹನಿಗೂಡಿತು.

"'ಹೇಗೆ'—ಎಂದರೆ ಏನು ಹೇಳಲಿ, ಮೀನಾ?"

"ನಿಮ್ಮ ಮುಖ—ಕಣ್ಣು...."

"ಅದು ಹೇಗಿದ್ದರೇನು, ಚಿನ್ನಾ?"

"ಅಯ್ಯೋ! ನೀವು ಹೇಗೆ ಇದ್ದೀರಿ—ಎಂದು ನೋಡಲು ನನ್ನ ಜೀವ ಬೇಯುತ್ತಿದೆ. ಹೃದಯ ನೋಡಬೇಕು—ಎಂದು ಎದ್ದುಬಂದಹಾಗಾಗುತ್ತಿದೆ. ಆದರೆ ಈ ನನ್ನ ಹಾಳು ಕಣ್ಣುಗಳು ನೋಡಲಾರವು. ನಿಮ್ಮ ರೂಪವೇ ನನಗೆ ಇಲ್ಲದ ಹಾಗಾಯಿತು!"

ಮುಂದೆ ಮಾತು ಹೊರಡಲಿಲ್ಲ. ಮಾತಿಗೆ ಬದಲು ಎರಡು ಕಣ್ಣುಗಳಿಂದಲೂ ನೀರು ಉಕ್ಕಿ ಉಕ್ಕಿ ಹರಿಯಿತು. ಕಣ್ಣೀರು ಮೌನವಾದ ಮಾತು. ರಾಮಚಂದ್ರನಿಗೆ ಆ ಕಣ್ಣೀರು, ಎಲ್ಲಿಯೋ ಕತ್ತಲೆಯಾದ ಗುಹೆಯ ಅಂತರಾಳದಿಂದ, ತನ್ನದೇ ಆದ ಒಂದು ಸಂಗೀತದೊಡನೆ ಹರಿದುಬರುವ ಸಣ್ಣ ಪ್ರವಾಹದಂತೆ ತೋರಿತು. ಅವನ ಕಣ್ಣಾಲಿಗಳೂ ನೀರಿನಲ್ಲಿ ತೇಲಲಾರಂಭಿಸಿದವು. ಅವನು ಎದ್ದು ಕುಳಿತು, ಮೀನಾಕ್ಷಿಯ ಹತ್ತಿರಕ್ಕೆ ಸರಿದು, ಅವಳ ಕಣ್ಣೊರಸಿ, ಮುಂದಲೆಯನ್ನು ಸವರುತ್ತ, ಮೃದುವಾಗಿ,

"ಮೀನಾ, ಏಕೆ ಕಣ್ಣೀರು ?" ಎಂದು ಕೇಳಿದ.

"ಅಯ್ಯೋ!—ನನ್ನ ಸಂಕಟವನ್ನು ನೀವು ಬಲ್ಲಿರಾ ?"

"ಬಲ್ಲೆ—ಮೀನಾ, ಬಲ್ಲೆ. ಆದರೆ ಸುಮ್ಮನೆ ಕೊರಗಿದರೆ ಏನು ಮಾಡಿದ ಹಾಗಾಯಿತು ?"

"ಹಾಗಾದರೆ ಇನ್ನೇನು ಮಾಡಬೇಕು ?—ಕೊರಗದೆ ? ಅಯ್ಯೋ! ನಾವಿಬ್ಬರೂ ಇಷ್ಟು ಹತ್ತಿರದವರಾದರೂ, ಈ ನನ್ನ ಹಾಳು ಕುರುಡು ಕಣ್ಣು, ನಮ್ಮಿಬ್ಬರಿಗೂ ಮಧ್ಯೆ ಈ ಕತ್ತಲೆಯನ್ನು ತಂದುಹಾಕಿದೆಯಲ್ಲಾ ! ಈ ಕತ್ತಲೆ ಹರಿಯುವುದು ಯಾವಾಗ ?"

"ಮೀನಾ, ಹಾಗೆ ಹೇಳಬೇಡ. ಮನುಷ್ಯಪ್ರಯತ್ನ ಇನ್ನೂ ಇದೆ. ನಿನ್ನ ಕಣ್ಣಿಗೆ ಪುನಃ ಬೆಳಕನ್ನು ತರಲು ಸರ್ವಪ್ರಯತ್ನ ಮಾಡುತ್ತೇನೆ. ಸಾವಿರ ಔಷಧಿಗಳು ವ್ಯರ್ಥವಾದರೆ, ಸಾವಿರದ ಒಂದನೆಯದು ಸಫಲವಾಗಬಹುದು. ನಿನ್ನೊಡನೆ ನಾನು ಮೊದಲು ಮಾತನಾಡಿದಂದಿನಿಂದ ಇದುವರೆಗೂ ನನ್ನ ಅಂತರಾಳದಲ್ಲಿ ಯಾರೋ 'ಪ್ರಯತ್ನಮಾತ್ರ—ಸಫಲವಾಗಬಹುದು' ಎಂದು ಹೇಳುತ್ತಿರುವಂತಿದೆ. ನಾನು ಪ್ರಯತ್ನಮಾಡುತ್ತೇನೆ. ಇಲ್ಲಿ ಕೇಳು, ಮೀನಾ, ನೀನು ಒಂದಲ್ಲ ಒಂದು ದಿನ ನನ್ನನ್ನು ಕಣ್ಣುತುಂಬಾ ನೋಡುವೆ! ನಿನ್ನ ಮನಸ್ಸು ಸೋಲುವವರೆಗೂ ನೋಡುವೆ! ನಿನ್ನ ಹೃದಯ ತುಂಬಿ ತುಳುಕುವವರೆಗೂ ನೋಡುವೆ! ನೀನು ಹುಟ್ಟುಕುರುಡಿಯಲ್ಲ. ನನಗೊಂದು ದೂರದ ಆಸೆ ಇದೆ....ಅಯ್ಯೋ! ಈ ಮಾತಿನಲ್ಲಿ ಹೂವಿನ ಸರವನ್ನು ಮರೆತೇಬಿಟ್ಟೆಯಲ್ಲ, ಮೀನಾ !"

ಮೀನಾಕ್ಷಿ ಹೂವಿನ ಸರವನ್ನು ಪೂರ್ತಿಮಾಡಿದಳು. ರಾಮಚಂದ್ರ

ಮೆಲ್ಲಗೆ ಆ ಸರವನ್ನು ಅವಳ ಕೈಯಿಂದ ತೆಗೆದುಕೊಂಡು ಅವಳ ತುರುಬಿಗೆ ಸುತ್ತಿದ. ಮೀನಾಕ್ಷಿಗೆ ನಗು ಬಂತು. ಚಿಗುರಿನಂತಿದ್ದ ತನ್ನ ಕೈಬೆರಳುಗಳಿಂದ ತುರುಬನ್ನು ಮುಟ್ಟಿ ನೋಡಿಕೊಂಡಳು.

೬

ಮೀನಾಕ್ಷಿಯ ಮದುವೆಯಾಗಿ ಐದು ವರ್ಷವಾಯಿತು. ಈಗ ಅವಳಿಗೆ ಎರಡು ವರ್ಷದ ಒಂದು ಗಂಡು ಮಗು ಇದೆ. 'ಚಂದ್ರಶೇಖರ' ಎಂದು ಹೆಸರು. ಮಗು ಬಹು ಮುದ್ದಾಗಿದೆ. ಆದರೆ ಮೀನಾಕ್ಷಿಗೆ ಆ ಮುದ್ದಿನ ಅನುಭವ ಹಣೆಯಲ್ಲಿ ಬರೆದಿಲ್ಲ. ಎತ್ತಿಕೊಂಡು ಎಷ್ಟೋ ಮುದ್ದಾಡುವಳು, ಎಷ್ಟೋ ಆದರಿಸುವಳು. ಆದರೆ ಅದನ್ನು ನೋಡಲು ಕಣ್ಣಿಲ್ಲ! ಮಗು ಹುಟ್ಟಿದಮೇಲೆ ಅವಳ ಕೊರಗು ಇದ್ದದ್ದೂ ಹೆಚ್ಚಾಯಿತು. "ಅಯ್ಯೋ! ನನ್ನ ಕಂದ! ನನ್ನ ಮುದ್ದಿನ ಗೊಂಬೆ! ನನ್ನ ಕರುಳು!—ಇದೂ ನನ್ನ ಕಣ್ಣಿಗೆ ಇಲ್ಲವಾಯಿತಲ್ಲಾ!" ಎಂದು ಹಗಲೂ ಇರುಳೂ ಕಣ್ಣೀರು ಸುರಿಸುವಳು. ಇದು ಯಾವ ಪಾಪಕ್ಕೆ ಶಿಕ್ಷೆ?

ಒಂದು ದಿನ ಮೀನಾಕ್ಷಿ ಹೀಗೆಯೇ ಮಗುವನ್ನು ಎತ್ತಿಕೊಂಡು, ಅಳುತ್ತಾ ಕುಳಿತಿದ್ದಳು. ಆ ಸಮಯಕ್ಕೆ ರಾಮಚಂದ್ರ ಅವಳಿದ್ದಲ್ಲಿಗೆ ಬಂದ. ಹೆಂಡತಿ ಅಳುತ್ತಿದ್ದುದನ್ನು ನೋಡಿ, ಅವಳ ಸಮೀಪಕ್ಕೆ ಹೋಗಿ ಕುಳಿತು ಕೊಂಡು, ಮೃದುವಾಗಿ "ಮೀನಾ, ಇದೇನು?" ಎಂದು ಕೇಳಿದ. ಮೀನಾಕ್ಷಿ ಕಣ್ಣು ಒರಸಿಕೊಂಡು ಸುಮ್ಮನಾದಳು. ಚಂದ್ರಶೇಖರ ತಂದೆಯನ್ನು ನೋಡಿ, ತಾಯಿಯನ್ನು ಬಿಟ್ಟು ಅವನ ತೊಡೆಯನ್ನು ಏರಿದ. ರಾಮಚಂದ್ರ ಮಗುವಿಗೆ ಮುತ್ತಿಡುತ್ತ, ಪುನಃ ಹೆಂಡತಿಯನ್ನು ಕುರಿತು, "ಮೀನಾ" ಎಂದ.

ಮೀನಾಕ್ಷಿ "ಏನು?" ಎಂದಳು.

"ನೀನು ನಿತ್ಯವೂ ಹೀಗೆ ಅತ್ತು ಅತ್ತು ಬೇಯುವುದನ್ನು ನೋಡಿ ನಾನು ಹೇಗೆ ಸಹಿಸಿಕೊಂಡಿರಲಿ, ಹೇಳು?"

"ಹೌದು; ನಾನು ಕಣ್ಣೀರು ಹಾಕುವುದನ್ನು ನೋಡಿ ನಿಮಗೆ ವ್ಯಥೆ ಯಾಗುತ್ತದೆ. ಆದರೆ ಏನು ಮಾಡಲಿ? ನನ್ನ ಜೀವ ಹತ್ತಿಕೊಂಡು ಉರಿಯು ತ್ತಿದೆ. ತಡೆದುಕೊಳ್ಳಬೇಕು—ಎಂದು ಎಷ್ಟೋ ಪ್ರಯತ್ನಮಾಡುತ್ತೇನೆ;

ಆದರೂ ಅದು ನನ್ನ ಪ್ರಯತ್ನ, ಸಹನೆ ಎಲ್ಲವನ್ನೂ ಮೀರಿ ಉರಿಯುವ ಬೆಂಕಿ!"

"ಅಯ್ಯೋ! ಮೀನಾ, ನಾನು ಎಷ್ಟೆಷ್ಟು ಆಸೆ ಭರವಸೆ ಇಟ್ಟುಕೊಳ್ಳುತ್ತೇನೋ ನೀನು ಅಷ್ಟಷ್ಟೂ ನಿರಾಶಳಾಗುತ್ತೀಯಲ್ಲ!"

"'ನಿರಾಶಳಾಗುತ್ತೀಯಲ್ಲಾ' ಎಂದರೆ ಏನು ಹೇಳಲಿ? ನೀವು ಹೇಳಿದಿರಲ್ಲಾ 'ನನ್ನ ಅಂತರಾಳದಲ್ಲಿ ಯಾರೋ ಆಸೆಯನ್ನು ಹುಟ್ಟಿಸುತ್ತಿದ್ದಾರೆ' ಎಂದು. ಹಾಗೆಯೇ ನನ್ನ ಅಂತರಾಳವನ್ನೆಲ್ಲಾ ಯಾರೋ ನಿರಾಶೆಯಿಂದ ತುಂಬುತ್ತಿರುವಂತೆ ತೋರುತ್ತಿದೆ. ನಾನು ಏನು ಮಾಡಲಿ?"

ಮೀನಾಕ್ಷಿಯ ಈ ಮಾತಿಗೆ ರಾಮಚಂದ್ರ ಯಾವ ಉತ್ತರವನ್ನೂ ಹೇಳಲಾರದೆ ಹೋದ.

ರಾಮಚಂದ್ರ ತನ್ನ 'ಅಂತರಾಳದಲ್ಲಿ ಯಾರೋ ಹೇಳಿದ' ಪ್ರಕಾರ ಪ್ರಯತ್ನವನ್ನು ಆರಂಭಿಸಿದ್ದ. ಆ ಡಾಕ್ಟರು, ಈ ಡಾಕ್ಟರು—ಎಂದು ಕಣ್ಣು ಚಿಕಿತ್ಸೆಯಲ್ಲಿ ಹೆಸರು ಪಡೆದಿದ್ದ ಡಾಕ್ಟರುಗಳನ್ನೆಲ್ಲಾ ನೋಡಿದ್ದಾಯಿತು. ಏಳೆಂಟು ಜನ ಪಂಡಿತರೂ ಆದರು. ಏನೂ ಪ್ರಯೋಜನವಾಗಲಿಲ್ಲ. ಪಂಡಿತರನ್ನು ಬಿಟ್ಟು ಹಕೀಮರಲ್ಲಿಗೆ ಕರೆದುಕೊಂಡುಹೋದ. ಅವರೂ ನೋಡುವಷ್ಟು ನೋಡಿ, ಕೊನೆಗೆ ಆಗುವುದಿಲ್ಲವೆಂದು ಕೈಬಿಟ್ಟರು. ಪತ್ರಿಕೆಗಳಲ್ಲಿ ಪ್ರಕಟನೆಗಳನ್ನು ನೋಡಿ, ಹೊರಗಿನಿಂದಲೂ ಅನೇಕ ಔಷಧಿಗಳನ್ನು ತರಿಸಿ ಉಪಯೋಗಿಸಿ ನೋಡಿದ. ಸ್ವಲ್ಪವೂ ಬದಲಾವಣೆಯಾಗಲಿಲ್ಲ. ಇಷ್ಟು ಪ್ರಯತ್ನಗಳೆಲ್ಲಾ ವ್ಯರ್ಥವಾದುದನ್ನು ನೋಡಿ, ರಾಮಚಂದ್ರನ 'ದೂರದ ಆಸೆ' ಸ್ವಲ್ಪ ಸ್ವಲ್ಪವಾಗಿ ಹಿಂಜರಿಯತೊಡಗಿತು. ಅವನ ಮನಸ್ಸಿನಲ್ಲಿ ಅಧೈರ್ಯ ಕಾಲು ಇಟ್ಟಿತು. ಅವನ ಮನಸ್ಸಿಗೆ, ಇಬ್ಬರೂ ಸೇರಿ ತೀರ್ಥಯಾತ್ರೆ ಮಾಡಿಕೊಂಡು ಬರೋಣ—ಎನ್ನಿಸಿತು. ಒಂದು ತಿಂಗಳು ರಜ ತೆಗೆದುಕೊಂಡು, ಹೆಂಡತಿ-ಮಗುವಿನೊಡನೆ, ಎಂಟು ಹತ್ತು ಪುಣ್ಯಸ್ಥಳಗಳಿಗೆ ಹೋಗಿಬಂದ. ಇಬ್ಬರ ಮನಸ್ಸಿಗೂ ತೀರ್ಥಯಾತ್ರೆಯಾಯಿತಲ್ಲಾ—ಎಂದು ತೃಪ್ತಿಯಾಯಿತು. ಅಷ್ಟೇ ಹೊರತು, ಮೀನಾಕ್ಷಿಯ ನಿರಾಶೆಯ ಗಟ್ಟಿ ಕರಗಲಿಲ್ಲ. ರಾಮಚಂದ್ರನ ಮನಸ್ಸಿನಲ್ಲಿ ಹುಟ್ಟಿದ್ದ ಆಸೆ ನಿಧಾನವಾಗಿ ಸವೆಯುತೊಡಗಿತು. ಆದರೆ ಅವನು —ಅವನ ಮನಸ್ಸು—ಆ 'ಸವೆಯುತ್ತಿದೆ' ಎಂಬ ವಿಷಯವನ್ನು ತಿಳಿಯಲು

ಅಪೇಕ್ಷಿಸುತ್ತಿರಲಿಲ್ಲ. ಇದೊಂದು ವಿಧವಾದ ಆತ್ಮವಂಚನೆ. ರಾಮಚಂದ್ರ ಆತ್ಮವಂಚನೆಯಿಂದ ಆಸೆಯನ್ನು ಕಟ್ಟಿಹಾಕಲು ಪ್ರಯತ್ನಿಸುತ್ತಿದ್ದ.

ಮೀನಾಕ್ಷಿ ಬರಬರುತ್ತ ಅಳುವುದನ್ನು ನಿಲ್ಲಿಸಿದಳು. ಕಣ್ಣೀರು ನಿಂತಿತು. ಈಚೀಚೆಗೆ ಅವಳು ಸುಮ್ಮನೆ ಯೋಚಿಸುವಳು. ಆಳವಾದ ಯೋಚನೆ. ಮುಖ ಗಂಭೀರವಾಗುವುದು. ಅವಳು ತನ್ನಷ್ಟಕ್ಕೆ ತಾನೇ ಅಂದುಕೊಳ್ಳುವಳು : "ನನ್ನ ಹಣೆಯಲ್ಲಿ ಕೊನೆಯವರೆಗೂ ಈ ಗೋಳನ್ನೇ ಬರೆದಿದ್ದರೆ ಎಷ್ಟು ಅತ್ತರೆ ಏನು? ಎಷ್ಟು ಕಣ್ಣೀರು ತಾನೆ ಅದನ್ನು ಅಳಿಸಬಲ್ಲದು? ನನ್ನ ಪ್ರಾರಬ್ಧ ಕರ್ಮ! ಯಾರೇನು ಮಾಡುವರು?" ಎಂದು. ಇಷ್ಟರ ಮಧ್ಯೆ, ಒಂದೊಂದು ಸಲ, "ಅಯ್ಯೋ, ದೇವಾ! ಒಂದು ಕ್ಷಣಕಾಲ—ಒಂದೇ ಒಂದು ಕ್ಷಣಕಾಲ, ನನಗೆ ದೃಷ್ಟಿಯನ್ನು ಕೊಡು. ಅವರು, ಚಂದ್ರು—ಇಬ್ಬರೂ ಎದುರಿಗಿದ್ದಾಗ, ಒಂದು ಕ್ಷಣಕಾಲ ಈ ಕತ್ತಲೆಯನ್ನು ಹರಿಸು. ಸಾಕು!—ಆಮೇಲೆ ನಾನು ಕೇಳುವುದಿಲ್ಲ, ಅಳುವುದಿಲ್ಲ, ಕಣ್ಣೀರು ಸುರಿಸುವುದಿಲ್ಲ. ಭಗವಂತಾ! ಒಂದು ಕ್ಷಣಕಾಲ ಈ ಶಿಕ್ಷೆಯನ್ನು ನಿಲ್ಲಿಸಲಾರೆಯಾ?" ಎಂದು ಕೈಕೈಹಿಸುಕಿಕೊಂಡು ದೇವರಲ್ಲಿ ಮೊರೆಯಿಡುವಳು.

೭

ಬೇಸಿಗೆಯ ರಜ ಬಂದು ಹದಿನೈದು ದಿನಗಳಾಗಿತ್ತು. ಮಧ್ಯಾಹ್ನ ಸುಮಾರು ಮೂರು ಗಂಟೆಯ ಸಮಯ. ರಾಮಚಂದ್ರ ಮನೆಯಲ್ಲಿ ಮುಂಬಾಗಿಲಿಗೆದುರಾಗಿ ಒಂದು ಸುಖಾಸನದ ಮೇಲೆ ಕುಳಿತುಕೊಂಡಿದ್ದ. ಮೀನಾಕ್ಷಿ ಪಕ್ಕದಲ್ಲಿ ಕೆಳಗೆ ಚಾಪೆಯ ಮೇಲೆ ಒಂದು ತಲೆದಿಂಬನ್ನು ಇಟ್ಟು ಕೊಂಡು ಮಲಗಿದ್ದಳು. ಸ್ವಲ್ಪ ನಿದ್ದೆ ಹತ್ತಿತ್ತು. ಅವಳಿಂದ ಸ್ವಲ್ಪ ದೂರದಲ್ಲಿ, ಚಂದ್ರಶೇಖರ ಕೈಯಲ್ಲಿ ಒಂದು ಬೊಂಬೆಯನ್ನು ಹಿಡಿದುಕೊಂಡು, ಅದನ್ನು ಹಾಗೆ ತಿರುಗಿಸಿ ಹೀಗೆ ತಿರುಗಿಸಿ, ಪರೀಕ್ಷಿಸುತ್ತಿದ್ದ. ರಾಮಚಂದ್ರ ಎಡಗೈಯನ್ನು ಗಲ್ಲದ ಮೇಲೆ ಇಟ್ಟುಕೊಂಡಿದ್ದ ; ಕಣ್ಣುರೆಪ್ಪೆಗಳು ಅರ್ಧ ಮುಚ್ಚಿಕೊಂಡಿದ್ದವು. ಅಲ್ಲಿ ಕುಳಿತಾಗಿನಿಂದ ಅವನ ಮನಸ್ಸಿನಲ್ಲಿ ಯೋಚನೆಗೆ ಪ್ರಾರಂಭವಾಗಿತ್ತು. ಅವನಿಗೆ 'ದೂರದ ಆಸೆ ಇದೆ' ಎಂದು ಹೇಳಿದಾಗ ಇದ್ದಷ್ಟು ಧೈರ್ಯ ಈಗ ಇಲ್ಲ. ಮೀನಾಕ್ಷಿಗೆ 'ನನ್ನನ್ನು ಕಣ್ಣುತುಂಬಾ ನೋಡುವೆ' ಎಂದು ಹೇಳಿದ್ದುದು

ಜ್ಞಾಪಕಕ್ಕೆ ಬಂತು. ಇದ್ದಷ್ಟು ಧೈರ್ಯವೂ ಕ್ರಮೇಣ ಜಾರತೊಡಗಿತು. ಅವನ ದೃಷ್ಟಿ ಬರಬರುತ್ತ ಮಂಕಾಗಿ, ಎದುರಿಗಿದ್ದ ಪದಾರ್ಥಗಳೆಲ್ಲಾ ಮಾಯವಾದಂತಾಯಿತು. ಅವನಿಗಿದ್ದ 'ದೂರದ ಆಸೆ' ಅವನ ಮನಸ್ಸಿನ ದಿಗಂತದ ಮಬ್ಬಿನಲ್ಲಿ ಮೆಲ್ಲಮೆಲ್ಲನೆ ಮರೆಯಾಗುತ್ತ ಬಂತು. ಮೀನಾಕ್ಷಿ 'ದೂರವೇ ಸರಿ' ಎಂದು ಬಹು ದಾರುಣವಾದ ಸಿಟ್ಟುಸಿರಿನೊಡನೆ ಹೇಳಿದ್ದು, ಆ ಮಬ್ಬು ಕವಿದ ಮನಸ್ಸಿನಲ್ಲಿ ಪ್ರತಿಧ್ವನಿಯಾಯಿತು. ಅವನು ಇನ್ನು ಮುಂದೆ ಯೋಚಿಸಲಾರದೆ ಹೋದ; ಯೋಚಿಸಲೊಲ್ಲದೆ ಹೋದ—ಎಂದರೆ ಹೆಚ್ಚು ನಿಜವನ್ನು ಹೇಳಿದಂತಾಗುತ್ತದೆ. ಇಲ್ಲಿಯೂ ಆತ್ಮವಂಚನೆ! ಅವನ ಮುಖದ ಭಾವ ಬಾಡಿತು; ಅವನ ಆತ್ಮ ಜಾಗ್ರದಾವಸ್ಥೆಯ ಸರಹದ್ದನ್ನು ದಾಟುವುದರಲ್ಲಿತ್ತು. ಹಾಗೆಯೇ ಕುಳಿತಿದ್ದ. ಹೊರಗೆ "ಜೈ! ಗೌರೀಶಂಕರ್!" ಎಂದು ಯಾರೋ ಕೂಗಿದ ಹಾಗಾಯಿತು. ರಾಮಚಂದ್ರ ಅರನಿದ್ರೆಯಿಂದ ಎಚ್ಚರವಾಗಿ ಕಣ್ಣುಬಿಟ್ಟು ನೋಡಿದ. ಬಾಗಿಲಿಗೆದುರಾಗಿ ಹೊರಗೆ ಒಬ್ಬ ಭಿಕ್ಷುಕ—ಬೈರಾಗಿ—ನಿಂತಿದ್ದ. ಎತ್ತರವಾದ ಆಳು, ದೃಢವಾದ ಮೈಕಟ್ಟು. ಮುಖವನ್ನು ನೋಡಿದರೆ, ಸಾಧಾರಣ ಬೈರಾಗಿಗಳಂತೆ ಅಲ್ಲ—ಅನ್ನುವ ಹಾಗಿತ್ತು. ರಾಮಚಂದ್ರ ಒಳಗಿನಿಂದ ಒಂದು ಹಿಡಿ ಅಕ್ಕಿಯನ್ನು ತಂದು ಅವನಿಗೆ ನೀಡಿದ. ಇಷ್ಟುಹೊತ್ತಿಗೆ ಚಂದ್ರಶೇಖರ ಆಡುತ್ತಿದ್ದವನು, ಬೈರಾಗಿಯನ್ನು ನೋಡಿ, ದೊಡ್ಡದಾಗಿ ಕಣ್ಣುಬಿಟ್ಟು, ಕಕಬಿಕಿಯಾಗಿ, ಕೊನೆಗೆ ಚಪ್ಪಾಳೆ ತಟ್ಟುತ್ತ ನಕ್ಕುಬಿಟ್ಟ. ಬೈರಾಗಿಗೆ ಆ ಮಗುವನ್ನೂ ಅದರ ಆಟವನ್ನೂ ನೋಡಿ ಬಹಳ ಆನಂದವಾಯಿತು. ಮುಂದಕ್ಕೆ ಹೋಗದೆ, ರಾಮಚಂದ್ರನ ಮುಖವನ್ನು ನೋಡಿ, "ಆ ಮಗ ಯಾರದ್ದು?" ಎಂದು ಕೇಳಿದ.

ರಾಮಚಂದ್ರ ಮಗನನ್ನು ಎತ್ತಿಕೊಂಡು "ನನ್ನದು" ಎಂದ.

ಬೈರಾಗಿ ಅವನ ಮುಖವನ್ನೇ ದೃಷ್ಟಿಸಿ ನೋಡುತ್ತ, "ನಿಮಗೆ ಏನೋ ದುಃಖ ಇದೆ; ಏನು ಅದು?" ಎಂದು ಕೇಳಿದ. ರಾಮಚಂದ್ರ ಬೈರಾಗಿಗಳ ವಿಷಯವಾಗಿ ಅನೇಕ ವಿಚಿತ್ರವಾದ ಕಥೆಗಳನ್ನು ಕೇಳಿದ್ದ. ಈ ಬೈರಾಗಿ ಇಷ್ಟು ವಿಚಾರಣೆಗೆ ಪ್ರಾರಂಭಿಸಿದ್ದನ್ನು ನೋಡಿ, ಅವನ ಮನಸ್ಸಿಗೆ "ಇವನಿಂದ ಏನಾದರೂ ಉಪಯೋಗವಾಗಬಹುದೇ? ದೇವರೇ ಇವನನ್ನು ಇಂದು ಇಲ್ಲಿಗೆ ಕಳಿಸಿರಬಹುದೆ?" ಎಂದು ತೋರಿತು. 'ಮುಳುಗುತ್ತಿರುವವನು, ಒಂದು

ತೇಲುವ ಹುಲ್ಲುಕಡ್ಡಿ ಸಿಕ್ಕಿದರೂ ಅದನ್ನು ಹಿಡಿದುಕೊಳ್ಳಲು ಯತ್ನಿಸುತ್ತಾನೆ’ ಎಂದು ಇಂಗ್ಲೀಷಿನಲ್ಲಿ ಒಂದು ಗಾದೆ ಇದೆ. ರಾಮಚಂದ್ರ ಮುಳುಗುತ್ತಿರುವವನಂತೆಯೇ ಆಗಿದ್ದ. ತೇಲುವ ಹುಲ್ಲಿನಂತೆ ಈ ಬೈರಾಗಿ ಬಂದ. “ಮನುಷ್ಯ ಪ್ರಯತ್ನ ಇನ್ನೂ ಇದೆ!” ಎಂದು ತಾನು ಹೇಳಿದ್ದುದು ಜ್ಞಾಪಕಕ್ಕೆ ಬಂತು. ಮನಸ್ಸಿನಲ್ಲಿ ಈ ಯೋಚನೆಗಳು ಹುಟ್ಟಿ, ರಾಮಚಂದ್ರ ಬೈರಾಗಿಯ ಪ್ರಶ್ನೆಗೆ ಉತ್ತರ ಹೇಳುವುದು ಸ್ವಲ್ಪ ತಡವಾಯಿತು. ಬೈರಾಗಿ ಮನೆಯ ಒಳಗೆ ನೋಡಿದ. ಮೀನಾಕ್ಷಿ ನಿದ್ದೆಮಾಡುತ್ತಿದ್ದಳು. ಬೈರಾಗಿ ಅವಳನ್ನು ತೋರಿಸಿ, “ಆ ಅಮ್ಮ ಯಾರು?” ಎಂದು ಕೇಳಿದ.

“ಈ ಮಗುವಿನ ತಾಯಿ.”

“ಮಹಾರಾಜ್, ನಿಮಗೆ ಏನು ದುಃಖ?”

“ಅ–ವ–ಳು ಕು–ರು–ಡಿ!”

“ಹಾಯ್! ಭಗವಾನ್! ಹುಟ್ಟುಕುರುಡು ಏನು?”

“ಅಲ್ಲ, ಹನ್ನೆರಡು ವರ್ಷ ಆದಮೇಲೆ ಕುರುಡಿಯಾದಳು.”

ಈ ಮಾತನ್ನು ಕೇಳಿ ಬೈರಾಗಿಯ ಮುಖ ಸ್ವಲ್ಪ ಅರಳಿದಂತಾಯಿತು. ಅವನು ತನ್ನ ಗಂಟನ್ನು ಮೆಟ್ಟಿಲಿನ ಮೇಲೆಯೇ ಇಟ್ಟು, ಅಲ್ಲಿ ಕುಳಿತುಕೊಂಡು, ರಾಮಚಂದ್ರನನ್ನೂ ಕುಳಿತುಕೊಳ್ಳುವಹಾಗೆ ಸಂಜ್ಞೆಮಾಡಿದ. ರಾಮಚಂದ್ರನೂ ಕುಳಿತ. ಬೈರಾಗಿ ಮುಂದಕ್ಕೆ ಬಗ್ಗಿ ಅವನ ಮುಖವನ್ನೇ ನೋಡುತ್ತ, “ಒಳ್ಳೇದು ಸ್ವಾಮಿ, ನಾನು ಒಂದು ಔಷಧ ಮಾಡಿಕೊಡುತ್ತೇನೆ. ಹಾಕುತ್ತೀರಾ?” ಎಂದು ಕೇಳಿದ. ರಾಮಚಂದ್ರ ಉತ್ತರವಾಗಿ, ಮುಖವನ್ನು ಸಪ್ಪಗೆ ಮಾಡಿಕೊಂಡು, “ಅಯ್ಯೋ! ಈಗಾಗಲೇ ನೂರು ಔಷಧಿಯಾಯಿತು; ಇನ್ನೂ ಅವಳು ಕುರುಡಿಯಾಗಿಯೇ ಇದ್ದಾಳೆ” ಎಂದ. ಬೈರಾಗಿ ಸ್ವಲ್ಪ ನಕ್ಕು, “ಅಯ್ಯಾ, ಇದರಲ್ಲಿ ಬಲವಂತ ಏನೂ ಇಲ್ಲ. ನೂರು ಆಯಿತಲ್ಲ; ಇದು ನಂದು, ನೂರೊಂದನೇದು ನೋಡಿ. ಕಷ್ಟ ಏನೂ ಇಲ್ಲ” ಎಂದ. ಈ ಮಾತನ್ನು ಕೇಳಿ ರಾಮಚಂದ್ರನ ಮನಸ್ಸಿನಲ್ಲಿ, “ಏನು! ನಾನು ಮೀನಾಕ್ಷಿಗೆ ಹೇಳಿದ ಮಾತನ್ನೇ ಇವನು ನನಗೆ ಹೇಳುತ್ತಿದ್ದಾನಲ್ಲಾ! ಆಗಲಿ, ಇವನನ್ನೂ ಪರೀಕ್ಷಿಸಿಬಿಡೋಣ” ಎಂದು ತೋರಿತು. ಬೈರಾಗಿಯನ್ನು ಕುರಿತು, “ಆಗಲಿ, ನೀನು ಔಷಧಿಯನ್ನು ಮಾಡಿಕೊಡು” ಎಂದು ಹೇಳಿದ.

"ಸರಿ. ಇನ್ನು ಮೂರು ದಿನ ಆದ್ಮೇಲೆ ತರ್‍ತೇನೆ, ಸ್ವಾಮಿ; ಜೈ ಗೌರೀ ಶಂಕರ್! " ಎಂದು ಹೇಳಿ ಬೈರಾಗಿ ಹೊರಟುಹೋದ.

ಮೂರು ದಿನಗಳಾದಮೇಲೆ ಬೈರಾಗಿ ತನ್ನ ಮಾತಿನ ಪ್ರಕಾರ ಕೈಯಲ್ಲಿ ಎರಡು ಸೀಸೆಗಳನ್ನು ಹಿಡಿದುಕೊಂಡು ರಾಮಚಂದ್ರನ ಮನೆಗೆ ಬಂದ. ಆ ಎರಡು ಸೀಸೆಗಳನ್ನೂ ಅವನ ಕೈಗೆ ಕೊಟ್ಟು, ಅದನ್ನು ಉಪಯೋಗಿಸುವ ವಿಧಾನವನ್ನು ಹೇಳಿದ. ರಾಮಚಂದ್ರ "ಇದಕ್ಕೆ ಎಷ್ಟು ದುಡ್ಡು ಕೊಡಬೇಕು?" ಎಂದು ಕೇಳಿದ. ಅದಕ್ಕೆ ಬೈರಾಗಿ ನಗುತ್ತ,

"ಇಲ್ಲ, ಮಹಾರಾಜ್—ನನಗೆ ದುಡ್ಡು ಬೇಡ. ಈ ಔಷಧಿ ಹಾಕಿ. ಇನ್ನು ಒಂದು ತಿಂಗ್ಳು ಆಗೋದ್ರಲ್ಲಿ ಆ ಯಮ್ಮನಿಗೆ ಚೆನ್ನಾಗಿ ಕಣ್ಣು ಕಾಣ್ತದೆ. ನಾನು ಇನ್ನು ಆರು ತಿಂಗ್ಳು ಬಿಟ್ಕೊಂಡು ಮತ್ತೆ ಇಲ್ಲಿಗೆ ಬರ್‍ತೇನೆ. ನನ್ನ ಮಾತು ನಿಜವಾಗಿದ್ರೆ, ನಿಮ್ಮ ಮನಸ್ ಬಂದಿದ್ದು ಕೊಡಿ. ಇಲ್ದೇ ಇದ್ರೆ ಬೇಡ. ನನ್ಗೆ ನಂಬ್ಕೆ ಐತೆ. ನಾನು ಈ ಮದ್ದು ಎಷ್ಟೋ ಕಡೆ ಕೊಟ್ಟಿದ್ದೇನೆ, ಸ್ವಾಮೀ; ಎಲ್ಲೂ ಸುಳ್ಳಾಗಿಲ್ಲ. ಭಗವಂತ ಇದಾನೆ, ಮಹಾರಾಜ್! " ಎಂದು ಮೇಲಕ್ಕೆ ಕೈ ತೋರಿಸುತ್ತ ಹೇಳಿದ. ರಾಮಚಂದ್ರ "ಆಗಲಿ, ನೋಡೋಣ" ಎಂದು ಸೀಸೆಗಳನ್ನು ತೆಗೆದುಕೊಂಡು ಎದ್ದ. ಅಷ್ಟು ಹೊತ್ತಿಗೆ ಚಂದ್ರಶೇಖರ ಒಳಗಿನಿಂದ ತಪ್ಪುತಪ್ಪು ಹೆಜ್ಜೆಗಳನ್ನಿಡುತ್ತ, ನಗುನಗುತ್ತ ಹೊರಕ್ಕೆ ಬಂದ. ಬೈರಾಗಿ ಎದ್ದು, ಅವನ ಗಲ್ಲವನ್ನು ಮುಟ್ಟಿ, ನಗುತ್ತ ಹೊರಟುಹೋದ.

೮

ಬೈರಾಗಿ ತಂದುಕೊಟ್ಟ ಎರಡು ಸೀಸೆಗಳಲ್ಲಿ, ಒಂದರಲ್ಲಿ ಯಾವುದೋ ಒಂದು ದ್ರಾವಕ; ಇನ್ನೊಂದರಲ್ಲಿ ಏನೋ ತೈಲ. ಮೀನಾಕ್ಷಿ ಅವೆರಡನ್ನೂ ಅವನು ಹೇಳಿದ್ದ ಪ್ರಕಾರ ಉಪಯೋಗಿಸತೊಡಗಿದಳು. ಮೊದಮೊದಲು ಅವಳಿಗೆ ಈ ಔಷಧಿಯಲ್ಲೂ ನಂಬಿಕೆ ಇರಲಿಲ್ಲ; ಗಂಡನ ಬಲವಂತಕ್ಕೆ ಉಪ ಯೋಗಿಸುತ್ತಿದ್ದಳು. ಆದರೆ ರಾಮಚಂದ್ರನಿಗೆ ಮಾತ್ರ ಬೈರಾಗಿ "ಎಲ್ಲೂ ಸುಳ್ಳಾಗಿಲ್ಲ" ಎಂದ ಮಾತು ಜ್ಞಾಪಕಕ್ಕೆ ಬಂದು, ಅವನ ಮನಸ್ಸಿನ ಆ 'ದಿಗಂಬರ ಮುಟ್ಟು' ಸರಿದು, ದೂರದಲ್ಲಿ ಪುನಃ ಆಸೆಯು ತಲೆದೋರಿತು. ದಿವಸಗಳು ಕಳೆದ ಹಾಗೆಲ್ಲಾ ತಾನು ಹೇಳಿದ್ದ "ಸಾವಿರದ ಒಂದನೆಯದು ಸಫಲ

ವಾಗಬಹುದು" ಎಂಬ ಮಾತು ನಿಜವಾಗುವಂತೆ ತೋರಿತು. ಔಷಧಿಯ ಮಹಾತ್ಮೆಯೋ ಅಥವಾ ಇಷ್ಟು ದಿನಕ್ಕೆ ಮೀನಾಕ್ಷಿಯ ಕರ್ಮವೆಲ್ಲಾ ಸವೆಯಿತೋ, ಹೇಗೋ—ಅಂತು, ಬೈರಾಗಿ ಕೊಟ್ಟ ಔಷಧಿಯಿಂದ ಗುಣ ಕಂಡು ಬಂತು. ಎಂಟು ದಿನ ಅನ್ನುವುದರಲ್ಲಿ ಅವಳ ಕಣ್ಣಿಗೆ ಕತ್ತಲೆ, ಬೆಳಕು—ಇವುಗಳ ಅನುಭವ ಉಂಟಾಗತೊಡಗಿತು. ಆದಹಾಗೆಲ್ಲಾ ಅವಳ ನಿರಾಶೆಯ ಗಟ್ಟಿ ಬೇಗ ಬೇಗ ಕರಗುತ್ತ ಬಂತು. ತಾನು ನಿರಾಶಳಾಗಿ ಅಳುತ್ತಿದ್ದಾಗ, ತನ್ನ ಪ್ರಿಯನು ಹೇಳಿದ್ದ "ಮನುಷ್ಯಪ್ರಯತ್ನ—ಕಣ್ಣುತುಂಬಾ ನೋಡುವೆ—ದೂರದ ಆಸೆ"—ಈ ಮಾತುಗಳು ಅವಳ ಮನಸ್ಸಿನಲ್ಲಿ ಪುನಃ ಜಾಗೃತವಾದುವು. ಮನಸ್ಸಿನ ಒಳಗೇ ಅವಳು ಬಹಳ ಸುಖವನ್ನು ಅನುಭವಿಸಿದಳು. ಅವಳ ಅಂತರಾಳದಲ್ಲಿ "ಕಣ್ಣು ಬರುತ್ತೆ" ಎಂದು ಯಾರೋ ಭರವಸೆ ಕೊಟ್ಟ ಹಾಗಾಯಿತು. "ನನ್ನ ಜೀವದ ದೇವರನ್ನು ನೋಡಬಹುದು! ನನ್ನ ಕಂದ—ನನ್ನ ಚಂದ್ರನನ್ನು ನೋಡಬಹುದು!" ಎಂದು ಅವಳ ಮೈ ಪುಳಕಾಂಕಿತವಾಯಿತು. ಇನ್ನೂ ಕೆಲವು ದಿನಗಳು ಕಳೆಯುವ ಹೊತ್ತಿಗೆ, ಬೆಳಗಿನ ಜಾವದಲ್ಲಿ ಕತ್ತಲು ಸವೆದಂತೆ, ಅವಳ ಕುರುಡೂ ಹೋಗುತ್ತ ಹೋಗುತ್ತ, ಸುತ್ತಮುತ್ತಲಿನ ಪದಾರ್ಥಗಳು ಹೆಚ್ಚು ಹೆಚ್ಚು ವಿಶದವಾಗಿ ಕಾಣತೊಡಗಿದವು. ಪ್ರಪಂಚವು ಮೆಲ್ಲಗೆ ತನ್ನ ಕಪ್ಪಾದ ಮುಸುಕನ್ನು ತೆಗೆಯುತ್ತಿರುವಂತೆ ತೋರಿತು. ಮೆಲ್ಲಮೆಲ್ಲಗೆ, ಅದರ ಬೆಳಕೂ ಅವಳ ಹೃದಯದ ಬೆಳಕೂ ಒಂದು ಪ್ರವಾಹದಲ್ಲಿ ಸೇರತೊಡಗಿದವು. ಅವಳು ದಿನವೂ ಗಂಡನನ್ನು ನೋಡುವಳು; ಮಗುವನ್ನು ನೋಡುವಳು. ದಿನದಿನಕ್ಕೆ ಅವರು, ಕತ್ತಲೆಯ ಸಮುದ್ರದಲ್ಲಿ ಈಜಿಕೊಂಡು, ಇವಳಿದ್ದೆಡೆಗೆ ಬರುತ್ತಿದ್ದಂತೆ ತೋರಲಾರಂಭಿಸಿತು. ಕತ್ತಲು ಹರಿದ ಹಾಗೆಲ್ಲಾ ಅವಳಿಗೆ ಆತುರವೂ ಹೆಚ್ಚಿತು. "ಕಣ್ಣುತುಂಬಾ ನೋಡುವ ದಿನ ಎಂದು ಬರುತ್ತದೆಯೋ!" ಎಂದು ಹಂಬಲಿಸಲಾರಂಭಿಸಿದಳು. ಆ ದಿನವೇನೂ ದೂರವಿರಲಿಲ್ಲ—ಅದೂ ಬಂತು. ಆಹಾ! ಅವಳ ಜೀವನದಲ್ಲಿ ಅದೆಂತಹ ಸುದಿನ!

೯

ಒಂದು ಭಾನುವಾರ ಮಧ್ಯಾಹ್ನ. ರಾಮಚಂದ್ರನಿಗೆ ರಜ. ಶ್ರೀಕಂಠನಿಗೆ ರಜ ಇರಲಿಲ್ಲ. ಕೂಲಿಯವರಿಗೆ ರಜ ಎಲ್ಲಿ! ಲಕ್ಷ್ಮಮ್ಮನವರು ಕೆಲಸ ಮುಗಿಸಿಕೊಂಡು, ಒಳಗೆ ಎಲ್ಲೋ ನಿದ್ದೆಹೋಗುತ್ತಿದ್ದರು. ರಾಮಚಂದ್ರ

ಮೀನಾಕ್ಷಿ ಇಬ್ಬರೂ ತಮ್ಮ ಕೊಠಡಿಯಲ್ಲಿದ್ದರು. ಚಂದ್ರಶೇಖರ ಮೂಲೆಯಲ್ಲಿದ್ದ ರಾಮಚಂದ್ರನ ಒಂದು ಬೂಟ್ಸನ್ನು ತೆಗೆದುಕೊಂಡು, ಅದರಲ್ಲಿ ತನ್ನ ಎರಡು ಕಾಲುಗಳನ್ನೂ ಹಾಕಲು ಸರ್ವಪ್ರಯತ್ನ ಮಾಡುತ್ತಿದ್ದ. ರಾಮಚಂದ್ರ ಅವನನ್ನು ನೋಡಿ “ಎಲಾ! ಪೋಲಿ!” ಎಂದು ಕರೆದು ನಕ್ಕ. ಚಂದ್ರಶೇಖರ ಹಿಂತಿರುಗಿ, ತಂದೆ ತಾಯಿ ಇಬ್ಬರನ್ನೂ ನೋಡಿ, ಕುಣಿಯುತ್ತ ಕೇಕೆ ಹಾಕಿಕೊಂಡು ನಗುವುದಕ್ಕಾರಂಭಿಸಿದ. ಮೀನಾಕ್ಷಿಗೂ ಬಹಳ ನಗು ಬಂತು. ಅವಳು ನಗುತ್ತ ನಗುತ್ತ, ಹಾಗೆಯೇ ಸ್ವಲ್ಪ ಕೊರಳನ್ನು ಬಳುಕಿಸಿ, ಓರೆಗಣ್ಣಿನಿಂದ ಗಂಡನನ್ನು ನೋಡಿದಳು. ರಾಮಚಂದ್ರ ಈ ಪ್ರಸಾದವನ್ನು ಉಚಿತವಾದ ರೀತಿಯಲ್ಲಿ ಸ್ವೀಕಾರಮಾಡಿ, ನಗುತ್ತ, “ನೋಡು! ನೋಡು! ನಿನ್ನ ಮಗನ ಆಟಾನ!” ಎಂದು ಹೇಳಿ, ಅವಳ ಕೈ ಹಿಡಿದುಕೊಂಡು, ಸ್ವಲ್ಪ ಹೊತ್ತು ಸುಮ್ಮನಿದ್ದು ಆಮೇಲೆ, “ನಿಮ್ಮ ತಾಯಿ ಎಲ್ಲಿ?” ಎಂದು ಕೇಳಿದ.

“ಒಳಗೆ ಮಲಗಿಕೊಂಡಿದ್ದಾರೆ.”

“ಇದುವರೆಗೂ ಒಳಗೆ ಅವರೊಬ್ಬರದ್ದೇ ಕೆಲಸವಾಗಿತ್ತು, ಮೀನಾ! ಇನ್ನುಮೇಲೆ ನೀನೂ ಮೈ ಬಗ್ಗಿಸಬೇಕಾಯಿತಲ್ಲ!” ಎಂದು ಹೇಳಿ ನಗುತ್ತ, “ಕುರುಡಾಗಿಯೇ ಇದ್ದಿದ್ದರೆ ಈ ಕಷ್ಟವೆಲ್ಲಾ ಇರುತ್ತಿರಲಿಲ್ಲ—ಅಲ್ಲವೆ?” ಎಂದ. ಮೀನಾಕ್ಷಿ,

(ನಗುತ್ತ) “ಹೌದು! ನನಗೂ ಹಾಗೇ ಅನ್ನಿಸುತ್ತೆ!” ಎಂದಳು.

ಅಷ್ಟು ಹೊತ್ತಿಗೆ ಬೈರಾಗಿ ಬಂದು ಕೂಗಿದ. ಮೀನಾಕ್ಷಿ ತಟ್ಟನೆ ಎದ್ದು ಹೋಗುವುದರಲ್ಲಿದ್ದಳು. ರಾಮಚಂದ್ರ ಅವಳನ್ನು ಹಿಡಿದು ನಿಲ್ಲಿಸಿ, ಎದ್ದು, ತನ್ನ ಪೆಟ್ಟಿಗೆಯಿಂದ ಒಂದು ನೂರು ರೂಪಾಯಿನ ನೋಟನ್ನು ತೆಗೆದುಕೊಂಡು ಬಂದು ಮೀನಾಕ್ಷಿಯ ಕೈಗೆ ಕೊಟ್ಟು, “ಮೀನಾ, ನೀನು ಹೋಗಿ, ಒಂದು ಬೊಗಸೆ ಅಕ್ಕಿ ತೆಗೆದುಕೊಂಡು, ಅದರಲ್ಲಿ ಈ ನೋಟನ್ನು ಹುದುಗಿಸಿಟ್ಟು ಬೈರಾಗಿಗೆ ಹಾಕು” ಎಂದು ಹೇಳಿದ. ಮೀನಾಕ್ಷಿ ಹೊರಗೆ ಬಂದು ಭಿಕ್ಷುಕನಿಗೆ ಅಕ್ಕಿ ನೀಡಿದಳು. ಅವನು ಅವಳ ಕಣ್ಣುಗಳನ್ನು ನೋಡಿದ. ಅವನಿಗೆ ಪರಮಾನಂದವಾಯಿತು. “ಹಾ! ಭಗವಂತ! ಎಲ್ಲಾ ನಿನ್ನದು!” ಎಂದುಕೊಂಡು ಹಿಂತಿರುಗುವುದರಲ್ಲಿದ್ದ. ಅಷ್ಟರಲ್ಲಿಯೇ, ಅಕ್ಕಿಯ ಜೊತೆಯಲ್ಲಿ ನೋಟು ಇದ್ದುದನ್ನು ಕಂಡು, ಆಶ್ಚರ್ಯದಿಂದ, ಮೀನಾಕ್ಷಿಯನ್ನು ಕುರಿತು,

" ತಾಯಿಾ! ಇದೇನು, ನೋಟು!" ಎಂದು ಕೇಳಿದ. ರಾಮಚಂದ್ರ ಬಾಗಿಲ ಹಿಂದೆ ನಿಂತುಕೊಂಡು ಕೇಳುತ್ತಿದ್ದವನು ಮುಂದಕ್ಕೆ ಬಂದು, "ಅದು ನೀವು ಕೊಟ್ಟ ಔಷಧಿಗೆ" ಎಂದು ಹೇಳಿದ. ಬೈರಾಗಿ "ಇದೆಷ್ಟು ?" ಎಂದು ಕೇಳಿದ.

"ಒಂದು ನೂರು ರೂಪಾಯಿ."

"ಎಷ್ಟು ರೂಪಾಯಿ ?"

"ಒಂದು ನೂರು."

"ಮಹಾರಾಜ್! ಇಷ್ಟು ಏಕೆ ನನಗೆ? ನಾನು ಗರೀಬ! ನನಗೆ ಈ ದುಡ್ಡೇ ಬೇಡ. ನನ್ನ ಗುರುವಿನಲ್ಲಿ ನನ್ನ ಪ್ರಮಾಣವಿದೆ. ನಾನು ಮದ್ದಿಗೆ ದುಡ್ಡು ತೆಗೆದುಕೊಳ್ಳೋದಿಲ್ಲ."

"ಮತ್ತೆ? ನಿಮಗೆ ಇನ್ನೇನು ಕೊಡಲಿ?"

"ಒಂದು ಕೃಷ್ಣಾಜಿನ—ಒಂದು ಚೆಂಬು—ಒಂದು ಹಿಡಿ ಅಕ್ಕಿ."

"ಆಗಲಿ, ನಾಳೆ ಬನ್ನಿ—ತರಿಸಿ ಇಟ್ಟಿರುತ್ತೇನೆ."

ಬೈರಾಗಿ ಹೊರಟುಹೋದ. ರಾಮಚಂದ್ರ ಮಿಾನಾಕ್ಷಿ ಇಬ್ಬರೂ ಪುನಃ ತಮ್ಮ ಕೊಠಡಿಗೆ ಹೋಗಿ ಕುಳಿತುಕೊಂಡರು. ಸ್ವಲ್ಪ ಹೊತ್ತು ಇಬ್ಬರೂ ಮಾತನಾಡಲಿಲ್ಲ. ಮಿಾನಾಕ್ಷಿ ರಾಮಚಂದ್ರನನ್ನೇ ನಟ್ಟ ದೃಷ್ಟಿಯಿಂದ ನೋಡ ತೊಡಗಿದಳು. ಅವಳ ಮುಖದ ಮೇಲೆ ಮೆಲ್ಲಗೆ ಮುಗುಳ್ನಗೆ ಹರಡಿಕೊಂಡಿತು. ರಾಮಚಂದ್ರನಿಗೂ ನಗು ಬಂತು. "ಇದೇನು, ಹೀಗೆ ನೋಡುತ್ತಿ, ಮಿಾನಾ?" ಎಂದ.

"ಕಣ್ಣುತುಂಬಾ ನೋಡುತ್ತಿದ್ದೇನೆ."

(ನಗುತ್ತ) "ಹ್ಞೂ, ಸರಿ! ಆಮೇಲೆ!"

"ನಿಮ್ಮನ್ನಾ—ಹಿಡಿದೂ—ನನ್ನ ಹೃದಯದಲ್ಲಿ ತುಳುಕೋ ಹಾಗೆ, ತುಂಬಿಕೊಳ್ಳುತ್ತಾ ಇದ್ದೇನೆ."

"ಊಹೂಂ!—ಆಮೇಲೆ?"

"ಮನಸ್ಸು ಸೋಲುತ್ತೆಯೇಂತ—ನೋಡ್ತಾ ಇದ್ದೀನಿ!"

"ಇಷ್ಟಕ್ಕೇ ಮನಸ್ಸು ಸೋಲಲ್ಲ, ಮಿಾನಾ!"

"ಮತ್ತೆ—ಯಾವುದಕ್ಕೆ ಸೋಲೀತು—ಹೇಳಿ?"

"ಎಲ್ಲಿ, ಹೀಗೆ ತಿರುಗು........ಇದಕ್ಕೆ!"

# ಮನೆಗೆ ಹೋದರು*

‘ ಜವರಾಯ ನುಂಗಿದೀ
ಹೆಣ್ಣುಮಗುವಿನಲಿ,
ಹೊರೆದ ಕಲ್ಮಷ ತೊಳೆದು,
ಈಗ ತಾನುಳಿದಿಹುದು,
ಚೆಲುವಾದ ನಿರ್ಮಲದ,
ಹೆಣ್ಣುತನವೊಂದು ! ’ —‘ ಶ್ರೀ ’

೧

ಹೊತ್ತು ಮುಳುಗಿ ಬಹಳ ಹೊತ್ತಾಗಿರಲಾರದು. ಆಕಾಶವೆಲ್ಲಾ ನಿಬಿಡವಾಗಿ, ಮೋಡದಿಂದ ತುಂಬಿತ್ತಾದ ಕಾರಣ, ಸೂರ್ಯನು ಮುಳುಗಿ ಇಷ್ಟೇ ಹೊತ್ತಾಗಿತ್ತೆಂದು ಹೇಳುವಂತಿರಲಿಲ್ಲ. ಬಿರುಗಾಳಿಗೆ ಪ್ರಾರಂಭವಾಗಿ, ರಾತ್ರಿಯೆಲ್ಲಾ ಬಲವಾಗಿ ಮಳೆ ಸುರಿಯುವ ಹಾಗೆ ತೋರುತ್ತಿತ್ತು. ಆ ಕತ್ತಲೆಯ ಭರಣಿಯಲ್ಲಿ ಭೂಮಿ–ಆಕಾಶಗಳೆರಡೂ ಒಂದಾಗಿ ಸೇರಿದ್ದವು. ಬಿರುಗಾಳಿಯ ಶಬ್ದವೇ ಶಬ್ದ. ಒಟ್ಟಿನಲ್ಲಿ ಪ್ರಕೃತಿಯು ಪ್ರಳಯೋನ್ಮುಖಿಯಾಗಿದ್ದಂತೆ ತೋರುತ್ತಿತ್ತು.

ಈ ಸಮಯದಲ್ಲಿ, ಊರಿನೊಳಗೆ, ಒಂದು ದೊಡ್ಡ ಮನೆಯ ಮುಂದೆ ಒಬ್ಬ ಭಿಕ್ಷುಕಳು ನಿಂತು, ಬಹು ದೈನ್ಯಸ್ವರದಿಂದ “ ತಾಯೀ, ಒಂದು ತುತ್ತು ಅನ್ನಾ ಕೊಡಿ, ತಾಯೀ ! ” ಎಂದು ಬೇಡಿದಳು.

ಒಳಗಿನಿಂದ ಉತ್ತರ ಬರಲಿಲ್ಲ.

ಭಿಕ್ಷುಕಳು ಪುನಃ ಕೂಗಿದಳು.

ಒಳಗಿನಿಂದ ಹದಿನೆಂಟು ವರ್ಷದ ಒಬ್ಬ ಸುಂದರ ಯುವತಿ ಬಂದಳು.

ಯಾಚಕಳು ಪುನಃ ಅತಿದೈನ್ಯದಿಂದ ಬೇಡಿದಳು.

ಯುವತಿ : “ ಹೋಗು ! ಹೋಗು ! ಇಷ್ಟು ಹೊತ್ತಿನಲ್ಲಿ ಭಿಕ್ಷ ಹಾಕುವುದಿಲ್ಲ, ಹೋಗು ! ” ಎಂದಳು. ಕಂಠ ಬಹು ಮಧುರವಾಗಿತ್ತು. ಆದರೆ ಆ ಕಂಠದ ಮಾಧುರ್ಯಕ್ಕೂ ಅವಳ ಮಾತಿನ ಕಾಠಿಣ್ಯಕ್ಕೂ ಎಲ್ಲಿಯ ಸಂಬಂಧ!

---

* ಮೇರಿ ಕೊರೆಲ್ಲಿಯ ‘ The Hired Baby ’ ಎಂಬುವರ ರೂಪಾಂತರ.

ಭಿಕ್ಷುಕಳು: "ತಾಯಿ, ಬೆಳಗಿನಿಂದ ಉಪವಾಸವಿದ್ದೇವೆ; ನಾನು ಹೇಗಾದರೂ ಸಹಿಸಬಲ್ಲೆ; ಈ ನನ್ನ ಮಗು ಸಹಿಸುವುದೇ, ತಾಯಿ? ಅತ್ತು ಅತ್ತು ಅದರ ಪ್ರಾಣ ಅರ್ಧ ಹೋಗಿದೆ. ಅಮ್ಮಾ, ಅದಕ್ಕಾದರೂ ಒಂದೇ ಒಂದು ತುತ್ತು—ಅನ್ನ ಕೊಡಿ, ತಾಯೀ. ನೀವು ತಿಂದು ಬಿಟ್ಟ ಎಂಜಲಾದರೂ ಸರಿಯೇ."

ಹೆಂಗಸಾದರೂ, ಯುವತಿಯ ಎದೆ ಕಲ್ಲಿಗಿಂತ ಗಟ್ಟಿಯಾಗಿದ್ದಿರಬೇಕು. ಅವಳನ್ನು ನೋಡಿದರೆ ಇಷ್ಟು ಕಠಿಣಾತ್ಮಳು ಎಂದು ಊಹಿಸುವ ಹಾಗಿರಲಿಲ್ಲ. ಆ ಯುವತಿ, ಇನ್ನು ಯಾವ ಯೋಚನೆಯಿಲ್ಲದಿದ್ದರೂ, ಭಿಕ್ಷೆ ಬೇಡುತ್ತಿದ್ದ ವ್ಯಕ್ತಿಯೂ ತನ್ನಂತೆಯೇ ಹೆಂಗಸು, ನಿಸ್ಸಹಾಯಕಳು—ಎಂಬ ಒಂದು ವಿಧವಾದ ಕನಿಕರದಿಂದಲಾದರೂ ಸ್ವಲ್ಪ ಭಿಕ್ಷವನ್ನು ನೀಡಬಹುದಾಗಿತ್ತು. ಅದೂ ಇಲ್ಲದೆ ಹೋಗಲಿ, ಕೊನೆಗೆ, ಒಂದು ಎಳೆಗೂಸಿನ ಪ್ರಾಣವು ಉಪವಾಸದಿಂದ ತಲ್ಲಣಿಸುತ್ತಿದೆಯಲ್ಲ! ಅದರ ಗತಿಯೇನು?—ಎಂದು ಕೂಡ ಯೋಚಿಸಲಿಲ್ಲ, ಆ ಕಲ್ಲೆದೆಯ ಸುಂದರಿ! ಅವಳು, ಈ ಭಿಕ್ಷುಕಿ ಪುನಃ ಪುನಃ ಬೇಡುತ್ತಿದ್ದುದನ್ನು ನೋಡಿ, ಸಿಟ್ಟಿನಿಂದ ಹನುಮನನ್ನು ಕೂಗಿ, ಅವಳನ್ನು ಆಚೆಗೆ ಕಳಿಸುವ ಹಾಗೆ ಹೇಳಿದಳು. ಹನುಮ ಅವರ ಮನೆಯ ಆಳು. ಹಿಂದೆ ಸಿಪಾಯಿ ಆಗಿದ್ದ ಎಂದು ತೋರುತ್ತದೆ! ಸ್ವಲ್ಪವೂ ಕನಿಕರವಿಲ್ಲ. ಒಳ್ಳೆ ಬಿಕ್ಕಟ್ಟಿನಿಂದ (ದೊಡ್ಡ ಮನುಷ್ಯರ ಮನೆಯ ಗುಲಾಮರೇ ಹಾಗೆ!) "ಏ! ಹೋಗಾಚೆ!" ಎಂದು ಗದರಿಸಿದ. ಭಿಕ್ಷುಕಳು, "ಅಯ್ಯಾ! ತಂದೇ—" ಎನ್ನುವಷ್ಟರೊಳಗಾಗಿ, ಆ ಪಾಪಿ ಕತ್ತಿಗೆ ಕೈಹಾಕಿ ಅವಳನ್ನು ಬೀದಿಯವರೆಗೂ ತಳ್ಳಿಬಂದ.

೨

ಭಿಕ್ಷುಕಳು ನಿರಾಶಳಾಗಿ, ನಿರುಪಾಯಳಾಗಿ, ಅಳತೊಡಗಿದಳು. ಎಲ್ಲಿ ಕನಿಕರದ, ಧರ್ಮದ ಸುಳಿವು ಕೂಡಾ ಇರಲಿಲ್ಲವೋ ಅಲ್ಲಿ ಅವಳು ಭಿಕ್ಷವನ್ನು ಬೇಡಿದಳು. ದೇವರು ಈ ಪ್ರಪಂಚದಲ್ಲಿ ಎಷ್ಟೋ ಜನರಿಗೆ ಐಶ್ವರ್ಯವನ್ನು ಕೊಟ್ಟಿದ್ದಾನೆ; ಆದರೆ ಅವರಲ್ಲಿ ಅನೇಕರ ಹೃದಯಗಳನ್ನು ದಯೆಯಿಂದ ತುಂಬಿಲ್ಲ; ಅವರಿಗೆ ಧರ್ಮದ ಬುದ್ಧಿಯನ್ನೇ ಕೊಟ್ಟಿಲ್ಲ. ಹಾಗೆ ಕೊಟ್ಟಿದ್ದಿದ್ದರೆ, ಈ ಪ್ರಪಂಚದಲ್ಲಿನ ಕಷ್ಟಗಳು ಬಹುಮಟ್ಟಿಗೆ ನಿವಾರಣೆಯಾಗುತ್ತಿತ್ತು. ಏನು

ಕಾರಣವೋ, ಅವನು ಹಾಗೆ ಮಾಡಲಿಲ್ಲ. ಎಲ್ಲವೂ ಅವನ ಲೀಲೆ ಅನ್ನುತ್ತಾರೆ!

ಆ ಭಿಕ್ಷುಕಳಿಗೆ, ಈ ಪ್ರಪಂಚದಲ್ಲಿ, ತನ್ನ ಆ ಒಂದೇ ಮಗುವೇ ಸರ್ವಸ್ವ. ಅದರ ಸಂರಕ್ಷಣೆಗಾಗಿ ಅವಳು ಎಷ್ಟೆಷ್ಟೋ ಕಷ್ಟಗಳನ್ನು ಅನುಭವಿಸಿದಳು—ಅನುಭವಿಸುತ್ತಿದ್ದಳು. ಮಾನ ಮರ್ಯಾದೆ ಎಲ್ಲವೂ ಹೋಯಿತು. ಎಲ್ಲವೂ ಆ ಮಗುವಿಗೋಸ್ಕರ—ಅದರ ಬಾಯಿಗೆ ಒಂದು ತೊಟ್ಟು ಹಾಲನ್ನು ಹಾಕಿ, ಅದು ನಲಿಯುವುದನ್ನು ನೋಡುವುದಕ್ಕಾಗಿ. ಅವಳ ದುರದೃಷ್ಟ; ಇಂದು ಅದು ಸಿಕ್ಕಲಿಲ್ಲ. ಅವಳು ಹಾಗೆಯೇ ನಡೆದು ಬರುತ್ತ, ನಿಟ್ಟುಸಿರಿನಿಂದ, "ಅಯ್ಯೋ! ದೇವರೆ, ಏನು ಕಷ್ಟ ಕೊಟ್ಟೆ!" ಎಂದು ಮೊರೆಯಿಟ್ಟಳು. ಅದನ್ನು ಕೇಳುವವರಾರು? ಅವಳ ನಿಟ್ಟುಸಿರು, ಮೊರೆ—ಎಲ್ಲಾ ಬಿರುಗಾಳಿಯ ರಭಸದಲ್ಲಿ ಶೂನ್ಯವಾಯಿತು. ಮಗುವು ಹಸಿವನ್ನು ತಡೆಯಲಾರದೆ ಕ್ಷೀಣ ಸ್ವರದಿಂದ ಅಳಲಾರಂಭಿಸಿತು. ಅದರ ಅಳುವನ್ನು ಕೇಳಿ, ಭಿಕ್ಷುಕಳ ಹೃದಯವು ಹಿಂಡಿದಂತಾಗಿ, ದುಃಖವು ತಡೆಯಿಲ್ಲದೆ ಉಕ್ಕಿಬಂತು. ಅವಳೂ ಅಳತೊಡಗಿದಳು. ಅವಳಿಗೆ ಹಸಿವಿನ ಬಾಧೆಗಿಂತ ದುಃಖದ ಉದ್ವೇಗವು ಹೆಚ್ಚಾಯಿತು. ಎಷ್ಟು ಸಮಾಧಾನ ಮಾಡಿದರೂ ಮಗುವು ಅಳುವುದನ್ನು ನಿಲ್ಲಿಸಲಿಲ್ಲ. ಅದು ಹಸಿವಿನಿಂದ ಎಷ್ಟು ಬಳಲಿದೆಯೋ, ಅದಕ್ಕೆ ಎಷ್ಟು ಯಾತನೆಯೋ—ಎಂಬ ಯೋಚನೆಯೊಂದೇ, ಅವಳ ಹೃದಯದಲ್ಲಿ ಬೆಂಕಿಯಾಗಿ ಉರಿಯತೊಡಗಿತು. ಅವಳು ಹುಚ್ಚು ಹಿಡಿದಂತಾಗಿ, "ಭಗವಂತ! ನೀನು ಯಾರಿಗೆ ತಿನ್ನುವುದಕ್ಕೆ ಕೊಡುವುದಿಲ್ಲವೋ ಅವರಿಗೆ ಹಸಿವನ್ನೇಕೆ ಕೊಡುವೆ?" ಎಂದು ಕೂಗಿದಳು.

ಮಗುವು ಅಳುವುದನ್ನು ನಿಲ್ಲಿಸಲಿಲ್ಲ. ಈ ನಿರ್ಭಾಗ್ಯರ ಸ್ಥಿತಿಯನ್ನು ನೋಡಿ ಪ್ರಕೃತಿದೇವಿಯೂ ನಿಟ್ಟುಸಿರನ್ನು ಬಿಡುತ್ತ ಕಣ್ಣೀರು ಹಾಕುವಳೋ ಎನ್ನುವ ಹಾಗೆ, ಬಿರುಗಾಳಿ ಬೀಸಿ, ಮಳೆ ಸುರಿಯುವುದಕ್ಕೆ ಪ್ರಾರಂಭವಾಯಿತು. ಭಿಕ್ಷುಕಳು ಮಗುವನ್ನು ತಟ್ಟಿ, ಅದನ್ನು ತನ್ನ ಸೆರಗಿನಲ್ಲಿ ಚೆನ್ನಾಗಿ ಸುತ್ತಿ—ತನ್ನ ಹೃದಯದ ಒಳಗೆ ಹುದುಗಿ ಇಟ್ಟುಕೊಳ್ಳುವಳೋ ಎನ್ನುವ ಹಾಗೆ—ತನ್ನ ಎದೆಗೆ ಅಪ್ಪಿಕೊಂಡು, ಬೇಗ ಬೇಗನೆ ನಡೆದುಬಂದು, ಒಂದು ದೇವಸ್ಥಾನವನ್ನು ಸೇರಿದಳು. ಮಳೆ-ಗಾಳಿಯ ದೆಸೆಯಿಂದ ಅಲ್ಲಿ ಜನರ ಸುಳಿವಿರಲಿಲ್ಲ.

ಒಳಗೆ ಒಂದು ಸಣ್ಣ ದೀಪವು ಉರಿಯುತ್ತಿತ್ತು. ಗರ್ಭಗುಡಿಯ ಬಾಗಿಲು ಹಾಕಿತ್ತಾದರೂ ಅದರಲ್ಲಿದ್ದ ಕಂಡಿಯಿಂದ ಒಳಗಿದ್ದ ದೇವರ ವಿಗ್ರಹವನ್ನು ನೋಡಬಹುದಾಗಿತ್ತು. ಹೆಂಗಸು ಗುಡಿಯನ್ನು ಪ್ರವೇಶಿಸುತ್ತಲೆ ಒಂದು ಮೂಲೆಗೆ ಹೋಗಿ "ಉಸ್ಸಪ್ಪ!" ಎಂದು ಕುಳಿತುಬಿಟ್ಟಳು. ತೋಯ್ದು ಹೋಗಿದ್ದ ತನ್ನ ಬಟ್ಟೆಯನ್ನು ಹಿಂಡಿಕೊಂಡು, ಮೈಯನ್ನು ಒರಸಿಕೊಂಡು, ಮಗುವಿನ ಮೈಯನ್ನೂ ಒರಸಿ, ಕೆಳಗೆ ಮಲಗಿಸಿ, ಅದನ್ನು ನಿಧಾನವಾಗಿ ಸವರಿದಳು. ಮಗುವಿಗೆ ನಿದ್ದೆ ಹತ್ತಿತು. ಭಿಕ್ಷುಕಳು ಬಹಳ ಹೊತ್ತು ಮೌನವಾಗಿ ಕುಳಿತಿದ್ದಳು. ಅವಳ ಕಣ್ಣುಗಳು ವಿಶಾಲವಾಗಿ, ದುಃಖಮಯವಾಗಿದ್ದರೂ ಬಹು ಸುಂದರವಾಗಿದ್ದವು. ಇನ್ನೂ ಚಿಕ್ಕ ವಯಸ್ಸಿನವಳಂತೆ ತೋರುತ್ತಿದ್ದಳು. ಕಷ್ಟಪರಂಪರೆಗಳಿಗೆ ಸಿಕ್ಕ ಆ ಮುಖವು, ಬೇಸಿಗೆಯಲ್ಲಿ ಬಾಡಿದ ಹೂವಿನಂತೆ ಕಂಗೆಟ್ಟುಹೋಗಿತ್ತು. ತಲೆಯಲ್ಲಿ ಕೂದಲೇನೋ ಹೇರಳವಾಗಿತ್ತು. ಆದರೆ ಎಣ್ಣೆ ಕಾಣದೆ, ಹೊಸೆದುಕೊಂಡು, ಜಡೆಯಾಗಿಬಿಟ್ಟಿದ್ದಿತು. ತುಟಿಗಳು ಒಣಗಿ ಅವುಗಳ ಸೊಬಗೆಲ್ಲಾ ಇಂಗಿಹೋಗಿತ್ತು. ಆದರೂ ಅವುಗಳಲ್ಲಿ ಒಂದು ವಿಧವಾದ ರೋಷವೂ ಅಭಿಮಾನವೂ ತಲೆದೋರುತ್ತಿತ್ತು. ಒಟ್ಟಿನಮೇಲೆ, ನೋಡಿದುದರಲ್ಲಿ, ಅವಳು ಸ್ವಲ್ಪ ಕಾಲದ ಹಿಂದೆ, ಸುಂದರಿ—ಎಂಬ ಬಿರುದಿಗೆ ಪಾತ್ರಳಾಗಿದ್ದಳೆಂದು ಸುಲಭವಾಗಿ ಊಹಿಸಬಹುದಾಗಿತ್ತು. ಸುಂದರಿಯಾಗಿದ್ದಿದ್ದರೆ ಹೀಗೇಕಾದಳು?—ಎಂಬ ಪ್ರಶ್ನೆ ಬರಬಹುದು. ಹೌದು; ವಿಚಿತ್ರವಾಗಿದೆ. ಅದಕ್ಕೇ ಜೀವನ ವಿಚಿತ್ರ ಎನ್ನುವುದು!

ಭಿಕ್ಷುಕಳು ಗರ್ಭಗುಡಿಯ ಸಮೀಪಕ್ಕೆ ಬಂದಳು. ಅವಳ ದೇಹವೆಲ್ಲಾ ಭಯದಿಂದಲೋ, ಚಳಿಯಿಂದಲೋ, ಅರಳಿಯ ಎಲೆಯಂತೆ ನಡುಗುತ್ತಿತ್ತು. "ಭಯವೇತಕ್ಕೆ?" ಎಂದು ಕೇಳಬಹುದು. ಹೌದು, ಭಯ; ಇಂದು, ಆ ಗರ್ಭಗುಡಿಯಲ್ಲಿರುವುದು ಬರಿಯ ಶಿಲಾಮೂರ್ತಿಯಲ್ಲವೆಂದೂ, ಆ ಮೂರ್ತಿಯ ಅಂತರಾಳದಲ್ಲಿ ದೇವರು ನೆಲಸಿರುವನೆಂದೂ, ಅವಳ ಭಾವನೆ. ನ್ಯಾಯಾಧಿಪತಿಯ ಮುಂದೆ ನಿಂತ ಅಪರಾಧಿಯ ಮನಸ್ಸು ಹೇಗಿರುವುದೋ, ಇಂದು ಅವಳ ಮನಸ್ಸು ಹಾಗಿದ್ದಿತು. ಅವಳು ದೇವರ ದೃಷ್ಟಿಯಲ್ಲಿ—ಜನಸಾಮಾನ್ಯದ ಭಾವನೆಯಲ್ಲಿ, ಗುರುತರವಾದ ಅಪರಾಧವನ್ನು ಮಾಡಿದ್ದಳು. ಅವಳ ಹಿಂದಿನ ಚರಿತ್ರೆಯು ಸಮರ್ಪಕವಾಗಿರಲಿಲ್ಲ. ಇದು ಪಾಪ, ಇದನ್ನು ಮಾಡಬಾರದು

—ಎಂಬ ಯೋಚನೆ ಅವಳ ಮನಸ್ಸಿಗೆ ತಟ್ಟಿರಲಿಲ್ಲ. ತಾನು ಮಾಡುತ್ತಿದ್ದು ದೆಲ್ಲಾ ಸರಿಯೆಂದೇ ಅವಳ ಭಾವನೆಯಾಗಿತ್ತು. ಪರಿಣಾಮಫಲವನ್ನು ಸ್ವಲ್ಪ ಯೋಚಿಸಿದ್ದರೆ ಚೆನ್ನಾಗಿತ್ತು. ಸ್ತ್ರೀಯರಿಗೆ ಪಾತಿವ್ರತ್ಯವು ಎರಡನೆಯ ಜೀವ ವೆಂದು ಆ ನಿರ್ಭಾಗ್ಯಳ ಮನಸ್ಸಿಗೆ ತೋಚಲಿಲ್ಲ. ನಿರ್ಭೀತಿಯಿಂದ, ನಿಶ್ಶಂಕೆ ಯಿಂದ, ಪಾಪದ ಮಾರ್ಗದಲ್ಲಿ ಕಾಲಿಟ್ಟಳು; ಇಡುವುದೇ ತಡ, ಮಾರ್ಗವು ಬಹು ಬೇಗ, ಬಹು ದೂರ ಸಾಗಿಹೋಯಿತು. ಅದಕ್ಕೆ ತಕ್ಕ ಫಲವೂ ಪ್ರಾಪ್ತ ವಾಯಿತು! ಈಗ, ಅವಳಿಗೆ ಪಾಪದ ಅಮಲಿನಿಂದ ಎಚ್ಚರವಾಯಿತು. ಆಗ ತಿಂದ ವಿಷದ ಹಣ್ಣು ಈಗ ಕಹಿಯಾಗಿ ತೋರಿತು. ಕಳೆದುಹೋದ ಜೀವ ಮತ್ತೆ ಬರುವುದೇನು? ಲೋಕವು ಇವಳನ್ನು ಕಾಲಿನಿಂದ ತಳ್ಳಿಬಿಟ್ಟಿತು. ಈಗೀಗ, ಅವಳಿಗೆ ತಾನು ಅಪರಾಧಿನಿಯೆಂದು ತಿಳಿಯಲು ಪ್ರಾರಂಭವಾಗಿತ್ತು. ತಾನು ಮಾಡಿದ ಅಪರಾಧ ಎಷ್ಟರ ಮಟ್ಟಿಗೆ ಗುರುತರವಾದುದೆಂದು ತಿಳಿಯಲು ಅವಳಿಗೆ ಹೆಚ್ಚು ಕಾಲ ಬೇಕಾಗಿರಲಿಲ್ಲ. ಆದುದರಿಂದಲೇ ಅವಳಿಗೆ ಭೀತಿ. ಎಲ್ಲವೂ ದೇವರ ಸಾನ್ನಿಧ್ಯದ ಮಹಿಮೆಯೆಂದು ತೋರುತ್ತದೆ. ಅವಳ ಮನಸ್ಸಿ ನಲ್ಲಿ ಪಶ್ಚಾತ್ತಾಪವು ಹುಟ್ಟಿತ್ತು. ಅವಳು ಮೆಲ್ಲಮೆಲ್ಲನೆ ಗರ್ಭಗುಡಿಯ ಸಮೀಪಕ್ಕೆ ಬಂದು, ಕೈಮುಗಿದುಕೊಂಡು, ಬಾಗಿಲಿನ ಕಿಂಡಿಯಲ್ಲಿ ಒಳಗಿದ್ದ ದೇವರ ವಿಗ್ರಹವನ್ನು ನೋಡಿದಳು. ಶ್ರೀಕೃಷ್ಣನ ವಿಗ್ರಹ. ಬಾಲಮೂರ್ತಿಯ ಮೈತುಂಬ ಆಭರಣಗಳಿದ್ದುವು. ಭಿಕ್ಷುಕಳ ಕಣ್ಣುಗಳಲ್ಲಿ ನೀರು ಸುರಿಯುವುದ ಕ್ಕಾರಂಭಿಸಿತು. ಕೈಮುಗಿದುಕೊಂಡೇ ನಿಂತಿದ್ದಳು. ಅವಳ ದುಃಖವು ಮಾತಿನ ಶಕ್ತಿಯನ್ನೂ ಮೀರಿತು. ಬಹಳ ಹೊತ್ತು ಸುಮ್ಮನಿದ್ದಳು. ಆಮೇಲೆ ಅವಳು, ತಾನು ಹೇಳುವುದನ್ನು ದೇವರು ಕೇಳುತ್ತಾನೆಂದು ಭಾವಿಸಿದಳೋ, ಏನೋ—ಮಾತನಾಡಲಾರಂಭಿಸಿದಳು: "ದೇವಾ, ನೀನೇ ಎಲ್ಲರಿಗೂ ಕೊಡು ವವನು; ಹೀಗಿರುವಲ್ಲಿ, ನಿನಗೆ ಇವೆಲ್ಲಾ ಏಕೆ?" ಮಗುವಿನ ಕಡೆಗೆ ಕೈಬೆರಳನ್ನು ತೋರಿಸಿ, "ಇಲ್ಲಿ ನೋಡು, ನೀನೇ ಜೀವವನ್ನು ತುಂಬಿದ—ನಿನ್ನ ಹಾಗೆಯೇ ಇರುವ ಒಂದು ಮಗುವಿಗೆ, ಕುಡಿಯುವುದಕ್ಕೆ ಒಂದು ತೊಟ್ಟು ಹಾಲೂ ಇಲ್ಲದೆ, ಅದರ ಪ್ರಾಣವು ಹೋಗುತ್ತಾ ಇದೆ. ನಿನಗೂ ನೀನು ಮಾಡಿದ ವಸ್ತುವಿಗೂ ಎಷ್ಟು ಅಂತರ! ನೀನು ಮಾಡಿದ ವಸ್ತುವಿನ ಮೇಲೆ ನಿನಗೆ ಮಮತೆ ಇಲ್ಲವೆ?" ಎಂದು ಕೇಳಿದಳು.

ಅಷ್ಟು ಹೊತ್ತಿಗೆ, ದೇವಾಲಯದ ಒಳಕ್ಕೆ, ಒಬ್ಬ ಮಧ್ಯವಯಸ್ಸಿನ ಹೆಂಗಸು ಪ್ರವೇಶ ಮಾಡಿದಳು. ತಲೆಯ ಮೇಲೆ ಸೆರಗನ್ನು ಹೊದೆದುಕೊಂಡಿದ್ದಳು. ಕೈಯಲ್ಲಿ ಒಂದು ತಟ್ಟೆ; ಅದರಲ್ಲಿ ಪೂಜಾಸಾಮಗ್ರಿಗಳು. ಅವಳ ಮುಖವು ಸೌಮ್ಯವಾಗಿತ್ತು. ಕಣ್ಣುಗಳೂ ಹಾಗೆಯೇ ಇದ್ದುವು. ಅವು, ಎಲ್ಲಿಯೋ ಬಹಳ ದೂರದಲ್ಲಿರುವ, ಇಲ್ಲಿಗೆ ಸೇರದ ಯಾವುದನ್ನೋ ಬಿಡುವಿಲ್ಲದೆ ನೋಡುತ್ತಿದ್ದ ಹಾಗೆ ತೋರುತ್ತಿದ್ದುವು. ಪೂಜೆಯು ಸಂಕ್ಷೇಪವಾಗಿಯೂ ಮೌನವಾಗಿಯೂ ನಡೆಯಿತು. ಕಣ್ಣುಗಳಿಂದ ಕಂಬನಿಗಳು ಮೌನವಾಗಿ ಜಾರಿದುವು. ಹೆಂಗಸು ದುಃಖಾರ್ತಳಾಗಿದ್ದಳೆಂದು ತೋರುತ್ತಿತ್ತು. ಭಿಕ್ಷುಕಳು ಇದನ್ನೆಲ್ಲಾ ದೂರದಿಂದ ನಿಶ್ಶಬ್ದವಾಗಿ ನೋಡುತ್ತಿದ್ದಳು. ಪ್ರಾರ್ಥನೆಯು ಮುಗಿಯುತ್ತಲೆ, ಹೆಂಗಸು ಕಣ್ಣೊರಸಿಕೊಂಡು ಹೊರಡಲುದ್ಯುಕ್ತಳಾದಳು. ಭಿಕ್ಷುಕಳು ಮುಂದೆ ಬಂದು, "ತಾಯಿಾ, ಬೆಳಗಿನಿಂದ ಉಪವಾಸ, ತಾಯಿಾ! ಏನಾದರೂ ಭಿಕ್ಷ ಕೊಡಿ. ದೇವರು ನಿಮ್ಮನ್ನು ಚೆನ್ನಾಗಿಡಲಿ, ತಾಯಿಾ" ಎಂದು ಬಹು ದೈನ್ಯದಿಂದ ಬೇಡಿದಳು. ಹೆಂಗಸಿನ ಹೃದಯ ಕರಗಿ ನೀರಾಯಿತು. ಅವಳು ತಟ್ಟೆಯಲ್ಲಿದ್ದ ಒಂದು ಚಿಪ್ಪು ಬಾಳೇಹಣ್ಣಿನಲ್ಲಿ ಅರ್ಧವನ್ನು ಅವಳಿಗೆ ಕೊಟ್ಟುಬಿಟ್ಟಳು. ಅಷ್ಟು ಹೊತ್ತಿಗೆ ಮಗುವಿಗೆ ಎಚ್ಚರವಾಗಿ ಅದು ಕ್ಷೀಣ ಸ್ವರದಿಂದ ಅಳಲಾರಂಭಿಸಿತು. ಹೆಂಗಸು "ಅದು ನಿನ್ನ ಮಗುವೆ?" ಎಂದು ಕೇಳಿದಳು.

ಭಿಕ್ಷುಕಳು "ಹೌದು;—ಅದಕ್ಕೂ ಉಪವಾಸ" ಎಂದಳು.

"ಎಲ್ಲಿ, ನೋಡೋಣ?"

ಭಿಕ್ಷುಕಳು ಮಗುವನ್ನು ತಂದು ಬೆಳಕಿನಲ್ಲಿ ತೋರಿಸಿದಳು. ಮಗುವೇನೋ ಸುಂದರವಾಗಿತ್ತು—ಗಂಡು ಮಗು. ಆದರೆ, ಹೊತ್ತುಹೊತ್ತಿಗೆ ಆಹಾರವಿಲ್ಲದೆ ಚಳಿ ಗಾಳಿ ಮಳೆಗಳಿಗೆ ಸಿಕ್ಕು, ಅದರ ಮೈಯಲ್ಲಿ ಚರ್ಮ ಎಲುಬು ಇವೆರಡು ಹೊರತು ಇನ್ನೇನೂ ಇರಲಿಲ್ಲ. ಅದಕ್ಕೆ ಗಟ್ಟಿಯಾಗಿ ಅಳುವುದಕ್ಕೂ ಶಕ್ತಿ ಸಾಲದು. ಕಣ್ಣುಗಳು ಮಾತ್ರ ವಿಶಾಲವಾಗಿ ಅರಳಿದ ಹೂವಿನಂತೆ ಇದ್ದುವು. ಅವು ಸಮಿಾಪದಲ್ಲಿದ್ದ ಯಾವ ವಸ್ತುವನ್ನೂ ನೋಡುತ್ತಿರಲಿಲ್ಲ; ಎಲ್ಲೋ ಶೂನ್ಯ ದೃಷ್ಟಿ. ಹೆಂಗಸಿಗೆ ಆ ಮಗುವಿನ ಸ್ಥಿತಿಯನ್ನು ನೋಡಿ ಕನಿಕರವುಂಟಾಯಿತು. ಮಗುವು ಅವಳನ್ನೇ ದೃಷ್ಟಿಸಿ ನೋಡುತ್ತಿತ್ತು. ಅವಳ ಕಣ್ಣಿಗೆ, ಅದರ ಹೊಟ್ಟೆ

ಯೊಳಗಿನ ಯಾತನೆಯೆಲ್ಲಾ, ಆ ಮೌನವಾದ ದೃಷ್ಟಿಯಾಗಿ ಹೊರಹೊಮ್ಮು ತ್ತಿರುವುದೋ—ಎಂಬಂತೆ ತೋರಿತು. ಹೆಂಗಸಿಗೆ, ಅಯ್ಯೋ ಪಾಪ!—ಎನ್ನಿ ಸಿತು. ಅವಳು ತಟ್ಟೆಯಲ್ಲಿದ್ದ ನಾಲ್ಕಾಣೆಯನ್ನು ಭಿಕ್ಷುಕಳಿಗೆ ಕೊಟ್ಟು, "ಇದನ್ನು ತೆಗೆದುಕೋ; ಎಲ್ಲಿಯಾದರೂ ಹಾಲನ್ನು ಕೊಂಡು, ನಿನ್ನ ಮಗುವಿಗೆ ಹಾಕು. ಅದಕ್ಕೆ ಎಷ್ಟು ಯಾತನೆಯಾಗುತ್ತಿರುವುದೋ!" ಎಂದಳು. ಭಿಕ್ಷುಕಳ ಆನಂದವು ಎಲ್ಲೆಯನ್ನು ಮೀರಿತು. ಅವಳ ಕಣ್ಣುಗಳಿಂದ ಬಾಷ್ಪಕಣಗಳು ಉದುರಿದವು. ಅವಳು ಆ ದಾತೃವನ್ನು ಬಹುವಾಗಿ ಕೊಂಡಾಡಿ, ವಂದಿಸಿ, "ತಾಯಿಾ, ದೇವರು ನಿಮಗೆ ಒಳಿತನ್ನು ಮಾಡಲಿ" ಎಂದಳು. ಹೆಂಗಸು ಗಂಭೀರ ಭಾವವನ್ನು ತಾಳಿದಳು. ಕ್ಷಣಕಾಲ ಮೌನವಾಗಿದ್ದು, ಆಮೇಲೆ ದೊಡ್ಡ ದಾಗಿ ನಿಟ್ಟುಸಿರುಬಿಟ್ಟು "ಏನು ಒಳಿತೋ, ನಾ ಕಾಣೆ! ಅಯ್ಯೋ, ದೇವರೇ!" ಎಂದಳು. ಸ್ವಲ್ಪ ಕಾಲ ಸುಮ್ಮನಿದ್ದು ಪುನಃ "ನೋಡು, ನೀನು ಭಿಕ್ಷುಕಳಾಗಿ ದ್ದರೂ, ನಿನಗೆ ಒಂದು ಮಗು ಇದೆ. ನಾನಾವರೋ, ನನಗೆ ಇದ್ದ ಒಂದೇ ಮಗುವನ್ನು ಕಳೆದುಕೊಂಡೆ. ಇಲ್ಲ! ಇಲ್ಲ! ನನಗೆ, ತಾಯಿಯಾಗಿ, ಮಗು ವನ್ನು ಸಾಕಿ ಸಲಹುವ ಪುಣ್ಯ ಹಣೆಯಲ್ಲಿ ಬರೆದಿಲ್ಲ! ಅಯ್ಯೋ, ದೇವರೇ!" ಎಂದಳು. ಕಣ್ಣೀರು ತಡೆಯಿಲ್ಲದೆ ಹರಿಯಿತು.

ಹೆಂಗಸು ಕಣ್ಣೊರಸಿಕೊಂಡು ಹೊರಟುಹೋದಳು. ಭಿಕ್ಷುಕಳು ಪುನಃ ದೇವರೆದುರಿಗೆ ಕೈಮುಗಿದುಕೊಂಡು, "ದೇವಾ, ಅವಳ ದುಃಖವನ್ನು ಪರಿಹ ರಿಸು" ಎಂದು ಬೇಡಿದಳು.

ಭಿಕ್ಷುಕಳಿಗೆ ದೇವರಲ್ಲಿ ಭೀತಿ ಹೋಗಿ, ಭಕ್ತಿಯು ತಲೆದೋರಿತ್ತು. ತನ್ನ ಗೋಳನ್ನು ಕೇಳಿ, ದೇವರು ಆ ಹೆಂಗಸನ್ನು ಅಲ್ಲಿಗೆ ಕರೆತಂದನೆಂದು ಅವಳು ಭಾವಿಸಿದಳು.

* * * *

ಹೊರಗೆ ಮಳೆ ನಿಂತು ಬಹಳ ಹೊತ್ತಾಗಿತ್ತು. ಭಿಕ್ಷುಕಳು ಹೊರಡಲು ಉದ್ಯುಕ್ತಳಾಗಿ ಮಗುವನ್ನೆತ್ತಿಕೊಂಡಳು. ಅದನ್ನು ತನ್ನ ಎದೆಗೆ ಅಪ್ಪಿಕೊಂಡು, "ನನ್ನ ಕಂದ! ದೇವರು ಇಂದು ನಿನ್ನಲ್ಲಿ ಕರುಣವನ್ನು ತೋರಿಸಿದ್ದಾನೆ. ಇನ್ನು ಅಳಬೇಡ, ನನ್ನ ಕಂದ" ಎಂದು ಮುದ್ದಿಟ್ಟಳು. ಮಗು ಸ್ವಲ್ಪ ನಕ್ಕಿತು. ಅವಳ ಆನಂದಕ್ಕೆ ಪಾರವೇ ಇಲ್ಲ. ಮಗು ನಕ್ಕ ಒಂದು ಕ್ಷಣಕಾಲ ಅವಳು

ಎಂದೂ ಕಾಣದ ಸುಖವನ್ನನುಭವಿಸಿದಳು. ಮಗುವಿಗೂ ಅದು ಅರ್ಥವಾಯಿತು ಎಂದು ಕಾಣುತ್ತದೆ; ಅದು ಪುನಃ ನಕ್ಕು, ತನ್ನ ಪುಟ್ಟ ಕೈಗಳಿಂದ ಅವಳ ಕೆನ್ನೆಯನ್ನು ಮುಟ್ಟಿತು. ಅವಳು ಅದರ ಮುಖವನ್ನೇ ನೋಡುತ್ತ, ವ್ಯಸನ ದಿಂದಲೂ ಪ್ರೀತಿಯಿಂದಲೂ "ನನ್ನ ಮುದ್ದು ಕಂದ! ನೀನೇಕೆ ನನ್ನ ಹೊಟ್ಟೆಯಲ್ಲಿ ಹುಟ್ಟಲಿಲ್ಲ?" ಎಂದಳು. ಮಗುವು, ಅವಳು ಹೇಳಿದ್ದು ಅರ್ಥವಾದಂತೆ, ಏನೋ ಶಬ್ದಮಾಡಿತು. ಭಿಕ್ಷುಕಳು ದೊಡ್ಡದಾಗಿ ನಿಟ್ಟುಸಿರು ಬಿಟ್ಟು, ಮಗುವನ್ನು ಎತ್ತಿಕೊಂಡೇ ದೇವರಿಗೆ ತಲೆಬಾಗಿ ವಂದಿಸಿ, ದೇವಾಲಯ ದಿಂದ ಹೊರಹೊರಟಳು.

೩

"ಹಾಗಾದರೆ ಅದು ಅವಳ ಮಗುವಲ್ಲವೆ?" ಎಂದು ನೀವಾರಾದರೂ ಕೇಳಬಹುದು. ಅಲ್ಲ; ಅದು ಅವಳ ಸ್ವಂತ ಮಗುವಲ್ಲ. ಅದನ್ನು ಅವಳೇ ಹೇಳಿದ್ದಾಳೆಯಷ್ಟೇ. ಅದು ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗುವಲ್ಲದಿದ್ದರೂ, ಅವಳು ಅದನ್ನು ತನ್ನ ಸ್ವಂತ ಮಗುವಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಅವಳಿಗೆ ಅದೇ ಪ್ರಾಣವಾಗಿತ್ತು. ಅವಳಿಗಿದ್ದ ಒಂದೇ ಒಂದು ಆಸೆ ಏನೆಂದರೆ, 'ಅದು ಸುಖವಾಗಿರಲಿ'—ಎಂಬುದು.

ಅವಳಿಗೆ ಆ ಮಗು ಎಲ್ಲಿ ಸಿಕ್ಕಿತು—ಎನ್ನುವಿರೋ? ಹೇಳುತ್ತೇವೆ, ಕೇಳಿ. ಅವಳ ಚರಿತ್ರೆ ಚೆನ್ನಾಗಿರಲಿಲ್ಲ—ಲೋಕವು ಅವಳನ್ನು ಕಾಲಿನಿಂದ ತಳ್ಳಿಬಿಟ್ಟಿತು—ಎಂದು ಹೇಳಿದೆವಷ್ಟೆ. ಆಮೇಲೆ ಅವಳು ಜೀವನಕ್ಕೆ ಮಾರ್ಗ ತೋರದೆ, ಈ ಊರಿಗೆ ಬಂದು ಭಿಕ್ಷುಕವೃತ್ತಿಯನ್ನವಲಂಬಿಸಿದಳು. ಜೀವದ ಮೇಲಿನ ಆಸೆಯೊಂದು ಉಳಿದು, ಅವಳಿಗೆ ಇನ್ನಾವ ಆಸೆಯೂ ಇರಲಿಲ್ಲ. ಸಿಕ್ಕಿದ ದಿನ ಊಟ, ಇಲ್ಲದೆ ಇದ್ದ ದಿನ ಉಪವಾಸ—ಹೀಗೆ ನಡೆಯುತ್ತಿತ್ತು ಅವಳ ಬದುಕು. ಹೀಗಿರುವಲ್ಲಿ ಅವಳಿಗೆ ಇನ್ನೊಬ್ಬ ಭಿಕ್ಷುಕಳ ಗುರುತಾಯಿತು. ಅವಳು ಮುದುಕಿ, ತೀರ ಮುದುಕಿ. ಆ ಮಗು ಅವಳ ಮಗಳ ಮಗು. ಅದಕ್ಕೆ ತಾಯಿ ಇರಲಿಲ್ಲ. ಅದರ ರಕ್ಷಣೆಯು ಭಾರ ಮುದುಕಿಗೆ ಸೇರಿತ್ತು. ಅವಳಿಗೆ ಆಗಲೇ ವಯಸ್ಸಾಗಿಹೋಗಿ, ಅವಸಾನಕಾಲ ಸಮೀಪಿಸುತ್ತಿತ್ತು. ದಿನವೂ ಅವಳಿಗೆ, "ಮಗುವಿನ ಗತಿಯೇನು? ನಾನು ಹೋದಮೇಲೆ ಇದನ್ನು ನೋಡಿ

ಕೊಳ್ಳುವವರಾರು?" ಎಂದು ಮೊದಲಾದ ಯೋಚನೆಗಳಿಗೆ ಪ್ರಾರಂಭ ವಾಯಿತು. ದೇವರ ದಯೆಯಿಂದ ಅವಳಿಗೆ ಈ ಭಿಕ್ಷುಕಳ ಗುರುತಾಯಿತು. ಒಂದು ದಿನ ಮುದುಕಿ, ಈ ಭಿಕ್ಷುಕಳನ್ನೂ ತನ್ನ ಮಗುವನ್ನೂ ಕೂರಿಸಿಕೊಂಡು, ಅವಳೊಡನೆ ಮಾತನಾಡುತ್ತ ಹೀಗೆ ಹೇಳಿದಳು: "ಇಲ್ಲಿ ನೋಡೆ, ತಾಯಿ; ಇದೊಂದು ಮಗು. ಇದಕ್ಕೆ ತಾಯಿ ತಂದೆ ಯಾರೂ ಇಲ್ಲ. ಏನೋ ಇದು ವರೆಗೂ ಇದನ್ನು ನಾನು ಸಲಹಿದೆ. ಇನ್ನು ನಾನು ಬಹಳ ದಿನ ಬದುಕೋದಿಲ್ಲ. ನಾನು ಹೇಳೋದೇನೆಂದರೆ, ನೀನು ಇನ್ನೂ ಹುಡುಗಿ, ಇದನ್ನು ತೆಗೆದುಕೊ. ಇದೇನೂ ನಿನಗೆ ಭಾರವಲ್ಲ. ಸಾಕಿ ಸಲಹು. ಮುಂದಕ್ಕೆ ನಿನಗೂ ಒಂದು ದಿಕ್ಕು ಆದಹಾಗಾಗುತ್ತದೆ. ನೀನೂ ಭಿಕ್ಷುಕಳು, ನಾನೂ ಭಿಕ್ಷುಕಳು; ನಿನ್ನಲ್ಲಿ ನಾನು ಬೇಡುವ ಭಿಕ್ಷ ಇದೊಂದೇ. ನನ್ನ ಮಾತನ್ನು ತೆಗೆದುಹಾಕಬೇಡ." ಭಿಕ್ಷುಕಳು ಅವಳು ಹೇಳುತ್ತಿದ್ದುದನ್ನೆಲ್ಲಾ ಕೇಳುತ್ತಿದ್ದಳು. ಅವಳ ಮನಸ್ಸಿನಲ್ಲಿ ಯೋಚನೆಗೆ ಪ್ರಾರಂಭವಾಯಿತು. ಅವಳು ಮಗುವನ್ನು ನೋಡಿದಳು; ಬಹಳ ಹೀನಸ್ಥಿತಿ ಯಲ್ಲಿತ್ತು. ಸ್ವಲ್ಪ ಹೊತ್ತು ಸುಮ್ಮನಿದ್ದು "ಆಗಲಿ" ಎಂದಳು.

ಕೆಲವು ದಿನಗಳಲ್ಲೇ ಮುದುಕಿ ಸತ್ತುಹೋದಳು. ಮಗುವಿನ ರಕ್ಷಣೆ ಭಿಕ್ಷುಕಳಿಗೆ ಸೇರಿತು.

"ಆಗಲಿ" ಎಂದು ಹೇಳಿದಾಗ, ಭಿಕ್ಷುಕಳ ಮನಸ್ಸಿನಲ್ಲಿ ಆ ಮಗುವಿನ ವಿಷಯವಾಗಿ ಯಾವ ಭಾವನೆ ಇತ್ತೋ ಆ ಭಾವನೆ ಈಗ ಇಲ್ಲ. ಆಗ ಅವಳು ಯೋಚಿಸಿದುದೇನೆಂದರೆ—ತಾನೊಬ್ಬಳೇ ಭಿಕ್ಷಾಟನೆ ಮಾಡುವುದಕ್ಕಿಂತ, ಜೊತೆ ಯಲ್ಲಿ ಒಂದು ಮಗುವೂ ಇದ್ದರೆ, ನೋಡಿದವರಲ್ಲಿ ಹೆಚ್ಚು ಕನಿಕರವನ್ನುಂಟು ಮಾಡಬಹುದು—ಎಂದು. ಮಗುವೂ, ಉಗುರಿನಿಂದ ಚಿವುಟಿದ ಎಳೆ ನೊಳ ಕೆಯ ಹಾಗೆ, ಬಹಳ ಕಂದಿಹೋಗಿತ್ತು. ಭಿಕ್ಷುಕಳ ಹೊಟ್ಟೆಯಲ್ಲಿ ಹುಟ್ಟಿದ್ದು! —ಇನ್ನು ಹೇಗೆ ಇದ್ದೀತು? ಅವಳು ಯೋಚಿಸಿದಂತೆಯೇ, ಆ ಮಗುವಿನ ಸಹವಾಸದಿಂದ ಅವಳಿಗೆ ಭಿಕ್ಷಾಟನೆ ಬಹುಮಟ್ಟಿಗೆ ಸುಲಭವಾಯಿತು. ಮಗುವು ಆ ಸ್ಥಿತಿಯಲ್ಲಿ, ಎಂತಹ ಕಲ್ಲುಮನಸ್ಸನ್ನಾದರೂ ಕರಗಿಸುವಂತೆ ಇತ್ತು. ಅದಕ್ಕಾಗಿ ಅವಳಿಗೆ ಆ ಮಗುವಿನಲ್ಲಿ ಆಸೆಯುಂಟಾಯಿತು; ಜಟಕಾ ಗಾಡಿ ಯವನಿಗೆ, ಚೆನ್ನಾಗಿ ಬಾಡಿಗೆ ತರುವ ಕುದುರೆಯನ್ನು ಕಂಡರೆ ಯಾವ ವಿಧವಾದ ಆಸೆಯೋ, ಆ ವಿಧವಾದ ಆಸೆ! ತನ್ನ ಜೀವನವನ್ನು ಸುಲಭ ಮಾಡಿತಲ್ಲಾ

—ಎಂದು, ಅಷ್ಟೆ. ಮತ್ತೆ ಯಾರಾದರೂ, ಅವಳಿಗೆ ಇನ್ನೂ ಸುಲಭವಾದ ಜೀವನವನ್ನು ಕಲ್ಪಿಸಿಕೊಟ್ಟಿದ್ದರೆ, ಅವಳು ಎರಡನೆಯ ಯೋಚನೆಯಿಲ್ಲದೆ—ನಿರಾತಂಕವಾಗಿ—ಆ ಮಗುವನ್ನು ಇನ್ನಾರಿಗಾದರೂ ಕೊಟ್ಟುಬಿಡುತ್ತಿದ್ದಳು. ಆದರೆ ಅಂತಹ ಸಂದರ್ಭ ಬರಲಿಲ್ಲ. ಹಾಗೆಯೇ ಸ್ವಲ್ಪ ಕಾಲ ಕಳೆಯಿತು.

ಚಿಕ್ಕ ಮಕ್ಕಳು ದೇವರ ಹಾಗೆ—ಅವರಲ್ಲಿ ದೇವರ ಅಂಶ ಇರುತ್ತದೆ—ಎನ್ನುತ್ತಾರೆ. ಅದು ನಿಜವಾದರೆ, ಆ ಅಂಶವೋ ಏನೋ, ಭಿಕ್ಷುಕಳಿಗೆ ಆ ಮಗುವಿನಲ್ಲಿದ್ದ ಪ್ರೀತಿಯ ರೀತಿಯನ್ನು ಬದಲಾಯಿಸಿತು. ದಿನದಿನವೂ ಆ ಮಗುವಿನ ಸಹವಾಸದಿಂದ—ಅದರ ಶುದ್ಧವಾದ ಆತ್ಮದ ಸಾಮೀಪ್ಯದಿಂದ—ಅದರ ನಿಸ್ಸಹಾಯವಾದ ಬಾಹುಗಳ ಆಲಿಂಗನದಿಂದ, ಅವಳು ಮಗುವನ್ನು, ನಿಜವಾದ ತಾಯಿಗೆ ತನ್ನ ಮಗುವಿನಲ್ಲಿರಬೇಕಾದ ಪ್ರೀತಿಯಿಂದ ಕಾಣತೊಡಗಿದಳು. ಅವಳ ಆ ಪಾಪಕಲುಷಿತವಾದ ಜೀವನದಲ್ಲಿ, ಆ ಪ್ರೀತಿಯು ಮಾತ್ರ, ಕೆಸರಿನಲ್ಲಿ ಕಮಲವು ಹುಟ್ಟಿ ಬೆಳೆದಂತೆ ಬೆಳೆಯಿತು. ಅವಳ ಜೀವನವು ಎಷ್ಟು ಪಾಪಗಳಿಂದ ಮಲಿನವಾಗಿದ್ದರೂ, ಅವಳ ನಡತೆಯು ಎಷ್ಟು ನೀತಿರಹಿತವಾಗಿದ್ದರೂ, ಒಂದು ವಿಷಯದಲ್ಲಿ ಮಾತ್ರ ಅವಳು ಪ್ರಶಂಸಾರ್ಹಳಾಗಿದ್ದಳು. ಅದು, ಅವಳಿಗೆ ಆ ಮಗುವಿನಲ್ಲಿದ್ದ ಪ್ರೀತಿ. ಅವಳು ತಾಯಿ ಇಲ್ಲದ ಮಗುವಿಗೆ ತಾಯಿಯಾಗಿದ್ದಳು. ತಾಯಿಯ ಧರ್ಮವೊಂದನ್ನೇ ಯೋಚಿಸಹೋದರೆ, ಅವಳು ಆ ಧರ್ಮದಲ್ಲಿ ಇನ್ನು ಯಾವ ತಾಯಿಗೂ ಕೀಳಾಗಿರಲಿಲ್ಲ.

೪

ದಿನಗಳ ಮೇಲೆ ದಿನಗಳು ಕಳೆದುವು. ಚಳಿಗಾಲ, ಮಳೆಗಾಲ, ಬೇಸಿಗೆ ಇವೇ ಮೊದಲಾದುವು, ಕಾಲದ ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳಂತೆ, ಒಂದರ ಮೇಲೊಂದು ಬಂದುಹೋದವು.

ಈಗ ಭಿಕ್ಷುಕಳ ಮಗುವು ಏಳೆಂಟು ವರ್ಷಗಳ ಹುಡುಗನಾಗಿದ್ದ. ಕಾಲವು ಬದಲಾಯಿಸಿದ್ದರೂ, ಭಿಕ್ಷುಕಳು ಭಿಕ್ಷುಕಳಾಗಿಯೇ ಇದ್ದಳು. ಅವಳು ಬಹು ತಾಳ್ಮೆಯಿಂದ ನಿತ್ಯವೂ ಯಾಚನೆಗೆ ಹೋಗುವಳು. ಹುಡುಗ ಅವಳ ಹಿಂದೆಯೇ ಹೋಗುವನು. ಈಗಲೂ ಅವನ ಸ್ಥಿತಿ ಚೆನ್ನಾಗಿರಲಿಲ್ಲ. ಎಂಟು ವರ್ಷದ ಹುಡುಗ—ಎಂದರೆ ನಂಬುವಂತಿರಲಿಲ್ಲ. ಈಚೀಚೆಗೆ ಅವಳು ಕೆಲವು

ದೇವರ ಕೀರ್ತನೆಗಳನ್ನೂ ಕಲಿತಿದ್ದಳು. ಅವನ್ನು ಹಾಡುತ್ತ ಭಿಕ್ಷಾಟನೆ ಮಾಡುವಳು. ಕಂಠ ಹಿಂದೆ ಚೆನ್ನಾಗಿತ್ತೆಂದು ತೋರುತ್ತದೆ; ಆದರೆ ಈಗ ಇಲ್ಲ. ಒಡೆದುಹೋದ ಕೊಳಲಿನ ಧ್ವನಿಯು ಹಾಗಿದ್ದರೂ ಅವಳ ಬಾಯಲ್ಲಿ ಆ ಕೀರ್ತನೆಗಳು ಮಾತ್ರ ಒಂದು ಅಪೂರ್ವವಾದ ಭಾವವನ್ನು ಪಡೆಯುತ್ತಿದ್ದವು. ಅವಳು ಹಾಡುತ್ತಿದ್ದರೆ ಅವಳ ಅಂತರಾಳದಲ್ಲಿರುವ ಭಕ್ತಿ ಅಲೆ ಅಲೆಯಾಗಿ ಮುಖದಿಂದ ಹೊರಡುತ್ತಿರುವುದೋ—ಎನ್ನುವ ಹಾಗೆ ತೋರುವುದು. ಅವುಗಳಲ್ಲಿ ತಾನು ಮಾಡಿದ ಪಾಪಕರ್ಮಗಳನ್ನೆಲ್ಲಾ ನೆನೆನೆನೆದು ಪಡುವ ಪಶ್ಚಾತ್ತಾಪದ ಪ್ರತಿಧ್ವನಿಯು ಕೇಳಿಬರುತ್ತಿತ್ತು. ಕೀರ್ತನೆಗಳ ಪ್ರಭಾವದಿಂದಲೋ ಏನೋ, ಕಂಡಕಂಡವರೆಲ್ಲ ಮನ ಕರಗಿ ಕಾಸು–ಮೂರು ಕಾಸು ಕೊಡುತ್ತಿದ್ದರು. ಹುಡುಗನನ್ನು ನೋಡಿ, "ಅಯ್ಯೋ—ಪಾಪ! ಎಷ್ಟು ಬಡವಾಗಿದೆ! ಅದಕ್ಕೇನಾದರೂ ಕಾಯಿಲೆಯೋ?" ಎಂದು ಕೇಳುವರು. ಭಿಕ್ಷುಕಳಿಗೆ ಮೈ ನಡುಗುವುದು. "ಅದಕ್ಕೆ ಕಾಯಿಲೆಯೆ?" ಎಂದು ಯಾರಾದರೂ ಕೇಳಿದರೆ, ಅವಳು ಸಹಿಸಲಾರಳು. ಅದು ರೋಗಪೀಡಿತವಾಗಿದ್ದರೂ, ಅವಳ ಮನಸ್ಸು ಆ ಯೋಚನೆಯನ್ನು ಮಾಡಲೊಲ್ಲದು. "ಏನೂ ಇಲ್ಲ; ಹೊಟ್ಟೆಗಿಲ್ಲದೆ ಬಡವಾಗಿದೆ, ಅಷ್ಟೆ" ಎನ್ನುವಳು. ಆ ಮಗುವಿನ ವಿಷಯವಾಗಿ ಕೆಟ್ಟುದು ಏನನ್ನೂ ಯೋಚಿಸಲಾರದೆ, ಅದು ಸುಖವಾಗಿಯೇ ಇದೆ—ಎಂದು ಅವಳು ತಿಳಿದುಕೊಂಡಿದ್ದಳು. ಅವಳ ಪ್ರೀತಿ ಅಷ್ಟು ಗಭೀರ.

ಭಿಕ್ಷುಕಳು ಹೋಗದ ಸ್ಥಳವಿಲ್ಲ. ಎಲ್ಲಿ ಸಂತೆ ಕೂಡುವುದೋ—ಅಲ್ಲಿ ಅವಳನ್ನೂ ಆ ಮಗುವನ್ನೂ ನೋಡಬಹುದಾಗಿತ್ತು. ಎಲ್ಲಿ ರಥೋತ್ಸವ, ಜಾತ್ರೆ ಇವುಗಳಾದರೆ ಅಲ್ಲಿ ಅವಳ ಕೀರ್ತನೆ ಕೇಳಿಬರುವುದು. ಅಂತೂ, ಹಾಗೂ ಹೀಗೂ ಕಾಲ ಕಳೆಯುತ್ತಿದ್ದರು—ದೊಡ್ಡದಾದ ಸಮುದ್ರದ ಮೇಲೆ, ಸಣ್ಣದೊಂದು ದೋಣಿಯಲ್ಲಿ ಕುಳಿತು, ಸಣ್ಣ ಸಣ್ಣ ಹುಟ್ಟುಗಳಿಂದ ಸಮುದ್ರದ ಅಲೆಗಳನ್ನು ಹಿಂದಕ್ಕೆ ನೂಕುವ ಹಾಗೆ.

* * * *

ಆ ಊರಿಗೆ ಮೂರು ಮೈಲಿ ದೂರದಲ್ಲಿ ಈ ದಿನ ಜಾತ್ರೆ. ಹೊತ್ತು ಹುಟ್ಟುವುದಕ್ಕೆ ಮುಂಚೆಯೇ, ಜನರು ಅಲ್ಲಿಗೆ ಹೊರಡುವುದಕ್ಕೆ ಪ್ರಾರಂಭಿಸಿ

ದರು. ಎಲ್ಲರಿಗೂ ಸಡಗರ. ಜನ ಸೇರಿದ ಕಡೆ ಭಿಕ್ಷುಕರಿಗೆ ಸುಗ್ಗಿ. ಅವರೂ ತಂಡತಂಡವಾಗಿ ಹೋಗುತ್ತಿದ್ದರು. ನಮ್ಮ ಭಿಕ್ಷುಕಳೂ ತನ್ನ ಹುಡುಗನನ್ನು ಕರೆದುಕೊಂಡು ಹೋದಳು. ಅವಳ ಮನಸ್ಸಿನಲ್ಲಿ ಸಂತೋಷ— ಬ್ರಾಹ್ಮಣಾರ್ಥಕ್ಕಾಗಿ ಹೋಗುತ್ತಿರುವ ಹಸಿದ ಬ್ರಾಹ್ಮಣನ ಸಂತೋಷದ ಹಾಗೆ! ಜಾತ್ರೆಯಲ್ಲಿ ಅವಳಿಗೆ ಬೇಕಾದ ಹಾಗೆ ದುಡ್ಡು ಸಿಕ್ಕಿತು. ಎಲ್ಲವೂ ಅವಳ ಕೀರ್ತನೆಯ ಪ್ರಭಾವ. ಅವರ ಸ್ಥಿತಿಯೇ ಮನಸ್ಸನ್ನು ಕರಗಿಸುತ್ತಿತ್ತು; ಜೊತೆಗೆ, ಹೃದಯವನ್ನು ನೀರುಮಾಡುವಂತೆ ಕೀರ್ತನೆ. ಒಬ್ಬಳು ಇವಳಿಗೆ ಭಿಕ್ಷವನ್ನು ಹಾಕಿ, "ಅಲ್ಲವೇ, ನೀನು ಯಾರಾದರೂ ಒಬ್ಬ ಗಂಡಸಿಗೆ ನೆರವಾಗಿದ್ದುಕೊಂಡು ಜೀವನ ಮಾಡಬಾರದಾಗಿತ್ತೇನೇ?" ಎಂದು ಕೇಳಿದಳು. ಅವಳು ಭಿಕ್ಷುಕಳು —ಎಂದು, ಆ ಹೆಂಗಸು ಆ ರೀತಿ ಮಾತನಾಡಿದಳು. ಅಭಿಮಾನದಿಂದ ಭಿಕ್ಷುಕಳ ತುಟಿಗಳು ಅದುರಿದವು; ಕಣ್ಣುಗಳು ಕಿಡಿಕಿಡಿಯಾದವು; ಶ್ವಾಸವು ಬಿಸಿಯಾಯಿತು. ಅವಳು ರೋಷದಿಂದ ಹೇಳಿದಳು: "ಏನಂದಿರಿ?— 'ಗಂಡಸೇ?' ಗಂಡಸು! ಗಂಡಸು! ನನಗೆ—" ಎಂದು, ಮುಂದಕ್ಕೆ ಏನನ್ನೋ ಹೇಳಬೇಕೆಂದಿದ್ದವಳು, ಅಲ್ಲಿಗೇ ನಿಲ್ಲಿಸಿ, ಪುನಃ "ಗಂಡಸಂತೆ ಗಂಡಸು! ಪಿಶಾಚಿಗಳು!!" ಎಂದು ಹೇಳಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಹೆಂಗಸು ಮರುಮಾತಿಲ್ಲದೆ ಹೊರಟುಹೋದಳು.

ಜಾತ್ರೆ ಮುಗಿದು ಎಲ್ಲರೂ ಹಿಂತಿರುಗಿದರು. ಭಿಕ್ಷುಕಳೂ ಊರಿನ ಕಡೆ ನಡೆದುಬರುತ್ತಿದ್ದಳು. ಸ್ವಲ್ಪ ಹೆಚ್ಚಾಗಿ ಭಿಕ್ಷ ಸಿಕ್ಕಿದ್ದರಿಂದ ಅವಳಿಗೆ ಬಹು ಸಂತೋಷ. ಅವಳಿಗೆ ಅದಕ್ಕಿಂತಲೂ ಹೆಚ್ಚಿನ ಸಂತೋಷವೇನೆಂದರೆ, ಅವಳ ಹುಡುಗನೂ ನಗುತ್ತ ನಲಿಯುತ್ತ ಇದ್ದ. ಅವನ ಕೈಯಲ್ಲಿ ಒಂದು ಮರದ ಗೊಂಬೆ ಇತ್ತು. ಅವಳು, ಬಂದ ಭಿಕ್ಷದಲ್ಲಿ ಸ್ವಲ್ಪವನ್ನು ಹಾಕಿ, ಅವನಿಗೆ ಆ ಗೊಂಬೆಯನ್ನು ಕೊಂಡುಕೊಟ್ಟಿದ್ದಳು. ಹಿಂದೆ ಎಷ್ಟೋ ಸಾರಿ ಅವನು ಅಂಗಡಿಗಳಲ್ಲಿ ಯಾವುದಾದರೂ ಗೊಂಬೆಯನ್ನು ನೋಡಿ, ಅದು ಬೇಕೆಂದು ಕೇಳಿದಾಗ, ಅವಳು ಕೊಳ್ಳುವುದಕ್ಕೆ ದುಡ್ಡಿಲ್ಲದೆ, ಖಿನ್ನಮನಸ್ಕಳಾಗುತ್ತಿದ್ದಳು. ಇಂದು ತನ್ನ ಪ್ರೇಮದ ಹುಡುಗನ ಆಸೆಯನ್ನು ಪೂರ್ತಿ ಮಾಡಿದ್ದಳು. ಅದಕ್ಕೇ ಅವಳಿಗೆ ಮಿತಿಮೀರಿದ ಆನಂದ.

೫

ಹಳೆಯ ವರ್ಷ ಮುಗಿಯಿತು. ಹೊಸ ವರ್ಷದ ಮೊದಲನೆಯ ದಿನ—ಯುಗಾದಿ. ಎಲ್ಲರೂ ಸಂತೋಷದಿಂದಿರಬೇಕಾದ ದಿನ. ಹುಡುಗರು ನಕ್ಕು ನಲಿದು ಕುಣಿದಾಡುವ ದಿನ. ಆದರೆ ಭಿಕ್ಷುಕಳ ಹುಡುಗನಿಗೆ ಮಾತ್ರ ಆನಂದವಿಲ್ಲ. ಕುರುಡ ಹೇಗೆ ಕತ್ತಲು, ಬೆಳಕು—ಎಂಬುದನ್ನು ಅರಿಯಲಾರನೋ ಹಾಗೆಯೇ, ಅವನ ಆತ್ಮವು ಸುಖ-ದುಃಖ ಯಾವುದನ್ನೂ ಅರಿಯಲಾರದಾಗಿತ್ತು. ಈಗ ಅವನಿಗೆ ತನ್ನ ಮರದ ಗೊಂಬೆಯ ಮೇಲೆ ಆಸೆಯಿಲ್ಲ. ಅವಳು, ಅದು ಸಂತೋಷವಾಗಿರಲಿ ಎಂದು ಎಷ್ಟೆಷ್ಟೋ ಪ್ರಯತ್ನಪಡುವಳು; ಆದರೆ ಅವನು ಒಂದು ಮಾತನ್ನೂ ಆಡನು. ಅದನ್ನು ನೋಡಿ ಅವಳು ದುಃಖಪಡುವಳು. ಈಗ ಅವನ ಸ್ಥಿತಿ ಮೊದಲಿಗಿಂತ ಕೆಟ್ಟಿತು. ಅವಳ ಹಿಂದೆ, ಮೂಕನ ಹಾಗೆ, ಹೋದೆಡೆಯಲ್ಲೆಲ್ಲಾ ಹೋಗುವನು. ಕೊಟ್ಟರೆ ತಿನ್ನುವನು, ಇಲ್ಲದೆ ಇದ್ದರೆ ಇಲ್ಲ. ಹಸಿವಾದಾಗ, ತಿಂಡಿ ಕೊಡು—ಎಂದು ಕೂಡಾ ಕೇಳುತ್ತಿರಲಿಲ್ಲ; ಅವನ ಆತ್ಮವು ಅಷ್ಟು ಮಂಕಾಗಿಹೋಗಿತ್ತು. ದಿನಗಳು ಕಳೆದ ಹಾಗೆಲ್ಲಾ ಅವನ ರೀತಿಯೇ ಬದಲಾಯಿಸುತ್ತ ಬಂತು. ಮುಖವೆಲ್ಲಾ ಬೆಳ್ಳಗಾಗಿ, ಕಣ್ಣುಗಳು ಧೂಳು ಮುಚ್ಚಿದ ಕನ್ನಡಿಯಂತೆ ಕಾಂತಿಹೀನವಾಗಿ, ಎಲ್ಲಿಯೋ ಯಾವುದೋ ಕನಸನ್ನು ನೋಡುತ್ತಿರುವಂತೆ ಕಾಣುತ್ತಿತ್ತು. ಅವನ ಎಚ್ಚರಕ್ಕೂ ನಿದ್ದೆಗೂ ಬಹಳ ವ್ಯತ್ಯಾಸವಿರಲಿಲ್ಲ. ತಾಯಿ, ಅವನಿಗೆ ಆನಂದವಾಗಲಿ—ಎಂದು ಕೀರ್ತನೆಗಳನ್ನು ಹೇಳುವಳು; ಪ್ರೇಮದಿಂದ ಮಾತನಾಡಿಸುವಳು. ಆದರೆ ಎಲ್ಲವೂ ವ್ಯರ್ಥ. ಅವನಿಗೆ ಈ ಪ್ರಪಂಚದಲ್ಲಿ ಯಾವುದರಿಂದಲೂ ಉಲ್ಲಾಸವಾಗುವಂತಿರಲಿಲ್ಲ. ಅವನ ಕಣ್ಣುಗಳು ಕಾಂತಿಹೀನವಾಗಿದ್ದರೂ, ಅವು ಈ ಪ್ರಪಂಚವನ್ನು ಬಿಟ್ಟು, ನಕ್ಷತ್ರಗಳ ಆಚೆ ನೋಡುತ್ತಿರುವಂತೆ ತೋರುತ್ತಿದ್ದವು. ಅವನ ಅಂಗಾಂಗಗಳಲ್ಲಿಯೂ ಕಷ್ಟಜೀವನದ ಗುರುತು ಚೆನ್ನಾಗಿ ಊರಿತ್ತು. ಸುಖವಾಗಿರುವುದು ಆದರ ಹಣೆಯಲ್ಲಿ ಬರೆದಿರಲಿಲ್ಲವೆಂದು ತೋರುತ್ತದೆ. ಭಿಕ್ಷುಕಳಿಗೆ ಮಗುವಿಗಾಗಿ ದುಃಖ ಹೆಚ್ಚಿತು. ಅದನ್ನು ಹೇಳಿಕೊಳ್ಳಲು ಅವಳಿಗೆ ಯಾರೂ ಇರಲಿಲ್ಲ. ಯಾರಿಗೆ ಬೇಕು, ಅವಳ ಕಥೆ? ತನ್ನನ್ನು ಬಿಟ್ಟರೆ, ಆ ಮಗುವಿಗೆ ಇನ್ನಾರೂ ಗತಿಯಿಲ್ಲವೆಂದು ಅವಳಿಗೆ ಚೆನ್ನಾಗಿ ತಿಳಿದಿತ್ತು. ಅದು ರೋಗದಿಂದ ನರಳುತ್ತಿದ್ದರೆ ಇತರರಿಗೇನು?

ಏನೋ, ಮನಸ್ಸು ಬಂದರೆ, ಎರಡು ಕಾಸು ಕೊಡುವರು. ಕೆಲವರು "ಒಳ್ಳೆಯದೇ ಆಯಿತು! ಅದಕ್ಕೆ ರೋಗ ಹೆಚ್ಚಿದಷ್ಟೂ ನಿನಗೆ ಹೆಚ್ಚಾಗಿ ಭಿಕ್ಷೆ ಸಿಕ್ಕುತ್ತದೆ!" ಎನ್ನುವರು. ಆದರೆ ಅವಳಿಗೆ ಅದು ಸಹಿಸುತ್ತಿರಲಿಲ್ಲ. "ಏನೋ, ಹುಡುಗರಿಗೆ ಕಾಯಿಲೆ ಬರುವುದುಂಟು; ಅದೇನು ಮಾಡುತ್ತೆ?—ತಾನೇ ಹೋಗುತ್ತೆ" ಎಂದುಕೊಳ್ಳುವಳು. ಹೀಗೆ ಅವಳು ತನಗೆ ತಾನೇ ಸಮಾಧಾನ ಮಾಡಿಕೊಂಡು, ಮಗುವನ್ನು ಮೊದಲಿಗಿಂತಲೂ ಹೆಚ್ಚು ಎಚ್ಚರದಿಂದ ನೋಡಿಕೊಳ್ಳಲಾರಂಭಿಸಿದಳು. ಹುಡುಗನಿಗೆ ಅದೆಲ್ಲಾ ಬೇಕಾಗಿರಲಿಲ್ಲ. ಅವಳು ಏನು ಮಾಡಿದರೂ ಮಾಡಿಸಿಕೊಂಡು, ಸುಮ್ಮನೆ ಮೂಕ ಪ್ರಾಣಿಯ ಹಾಗೆ ಇರುತ್ತಿದ್ದ.

೬

ಚಳಿಗಾಲ ಪ್ರಾರಂಭವಾಯಿತು. ಬೆಳಗಾದರೆ, ಸಾಯಂಕಾಲವಾದರೆ, ಎಲ್ಲೆಲ್ಲಿಯೂ ಹಿಮ ಕವಿದುಕೊಂಡು, ಪ್ರಕೃತಿಯ ಮುಖದ ಮೇಲೆ ತೆಳ್ಳನೆಯ ಅವಗುಂಠನದಂತೆ ಕಾಣುತ್ತಿತ್ತು. ಎಲೆಗಳೆಲ್ಲಾ ಉದುರಿ, ಮರಗಳು ಬಟ್ಟೆಯಿಲ್ಲದ ನಿರ್ಗತಿಕರಾದ ಭಿಕ್ಷುಕರನ್ನು ಹೋಲುತ್ತಿದ್ದುವು. ಜನರ ಸಂಭ್ರಮವೆಲ್ಲಾ ಅಡಗಿಹೋಗಿತ್ತು.

ಇಂತಹ ಹಿಮಕಾಲದ ಒಂದು ರಾತ್ರಿ. ಆಕಾಶದಲ್ಲಿ ಪೂರ್ಣಿಮೆಯ ಚಂದ್ರನಿದ್ದರೂ ಮಂಜಿನ ಮುಸುಕಿನಲ್ಲಿ ಚಂದ್ರಿಕೆ ಅಷ್ಟು ಪ್ರಶಸ್ತವಾಗಿರಲಿಲ್ಲ. ಎಲ್ಲವೂ ಮಬ್ಬುಮಬ್ಬು. ರಾತ್ರಿ ಬಹಳ ಹೊತ್ತಾಗಿತ್ತು. ಭಿಕ್ಷುಕಳು ಮಗುವನ್ನು ಎತ್ತಿಕೊಂಡು ಬರುತ್ತಿದ್ದಳು. ಹಾಗೆಯೇ ಹೆಜ್ಜೆಯಿಡುತ್ತ, ನದಿಯ ಸೋಪಾನಕ್ಕೆ ಬಂದಳು. ಅಲ್ಲಿ ಸೋಪಾನದ ಮೇಲೆ ಕುಳಿತುಕೊಂಡಳು. ಬಹಳ ದಣಿದಿದ್ದಳಾದುದರಿಂದ ಕೆಳಗೆ ಒಂದು ಚಿಂದಿಬಟ್ಟೆ ಹಾಸಿ, ಮಗುವನ್ನು ಮಲಗಿಸಿದಳು. ಅದು ನಿದ್ದೆಹೋಗುತ್ತಿತ್ತು. ಅವಳು ಸ್ವಲ್ಪ ಹೊತ್ತು ಹಾಗೆಯೇ ಕುಳಿತು, ಮಂಜು ಮುಸುಕಿದ ಆಕಾಶವನ್ನು ನೋಡುತ್ತಾ, ಆಡಿಗಡಿಗೂ ನಿಟ್ಟುಸಿರು ಬಿಡುತ್ತಿದ್ದಳು. ಅವಳ ಆ ಮೌನವಾದ, ಶೂನ್ಯವಾದ ದೃಷ್ಟಿ, ಹಿಮದ ಹೊದಿಕೆಯನ್ನು ಸೀಳಿಕೊಂಡು ಹೋಗಲೆಳಸುತ್ತಿತ್ತು. ಕೆಳಗೆ ನಿಧಾನವಾಗಿ ಹರಿದುಹೋಗುತ್ತಿರುವ ನದಿ. ಅದರಲ್ಲಿ ಚಿಕ್ಕ ಚಿಕ್ಕ ಅಲೆಗಳ ಸಂಗೀತ; ಕ್ಷೀಣವಾಗಿದ್ದರೂ ಬಹು ಇಂಪು—ಅಳುವ ಮಗುವಿಗೆ ಹೇಳುವ

ತಾಯಿಯು ಜೋಗುಳದಂತೆ. ಭಿಕ್ಷುಕಳು ಮೈಮರೆತು ಕಲ್ಲುಮೆಟ್ಟಿಲಿನ ಮೇಲೆ ಮಲಗಿ ನಿದ್ದೆಹೋದಳು. ಬಹಳ ಹೊತ್ತಿನವರೆಗೂ ನಿರಾತಂಕವಾಗಿ ನಿದ್ದೆ ಮಾಡಿದಳು. ಆಮೇಲೆ ಇದ್ದಕ್ಕಿದ್ದಹಾಗೆಯೇ ಅವಳಿಗೆ ಎಚ್ಚರವಾಯಿತು. ಕಣ್ಣುಬಿಟ್ಟು ನೋಡಿದರೆ, ಎದುರಿಗೆ ಬಹಳ ಪ್ರಕಾಶಮಾನವಾದ ಒಂದು ದೀಪ, ಕಣ್ಣನ್ನು ಚುಚ್ಚುತ್ತಿದ್ದಿತು. ಕೂಡಲೇ ಅವಳು ಹತ್ತಿರದಲ್ಲಿ ಮಲಗಿದ್ದ ಮಗುವನ್ನು ಬೇಗನೆ ಎತ್ತಿಕೊಂಡು, ಭದ್ರವಾಗಿ ಆಲಿಂಗಿಸಿ, ಕಣ್ಣು ಉಜ್ಜಿಕೊಳ್ಳುತ್ತ ನೋಡಿದಳು. ಎದುರಿಗೆ, ಉದ್ದಕ್ಕೆ, ಕಪ್ಪಾದ ನಿಲುವಂಗಿಯನ್ನು ಹಾಕಿಕೊಂಡಿದ್ದ ಒಬ್ಬ ಪೋಲೀಸಿನವನು. ಆ ಪ್ರಕಾಶಮಾನವಾದ ಬೆಳಕು, ಅವನ ಕೈಯಲ್ಲಿದ್ದ ಲಾಂದ್ರ. ಭಿಕ್ಷುಕಳು ನಡುಗುತ್ತಿದ್ದಳು. ಪೋಲೀಸಿನವನು ಅವಳನ್ನು ನೋಡಿ, " ಏ! ಏಳು!—ಯಾರು ನೀನು? ಇಷ್ಟು ಹೊತ್ತಿನಲ್ಲಿ ಇಲ್ಲೇನು ಮಾಡುತ್ತಾ ಇದ್ದೀಯೆ? ಏಳು, ಏಳು! ಹೊರಡು!" ಎಂದು ಹೇಳಿದ. ಭಿಕ್ಷುಕಳು ಕ್ಷಮೆಯನ್ನು ಬೇಡುವ ರೀತಿಯಲ್ಲಿ ಅವನ ಮುಖವನ್ನು ನೋಡುತ್ತ, ಕ್ಷೀಣವಾಗಿ ನಕ್ಕಳು. " ಆಗಲಿ, ತಂದೆ; ನಾನು ಇಲ್ಲಿ ನಿದ್ದೆ ಮಾಡಬೇಕೆಂದು ಬಂದವಳಲ್ಲ. ಇವತ್ತೆಲ್ಲಾ ಸುತ್ತಿ ಸುತ್ತಿ ಬಹಳ ದಣಿದಿದ್ದೆ; ಇಲ್ಲಿ ಬಂದು ದಣುವಾರಿಸಿಕೊಳ್ಳೋಣ ಎಂದು ಕುಳಿತೆ; ಹಾಗೆಯೇ ನಿದ್ದೆ ಬಂದುಬಿಟ್ಟಿತು; ಅಷ್ಟೆ, ತಂದೆ; ಮನೆಗೆ ಹೋಗದೆ ಉಂಟೇ?" ಎಂದಳು. ಅವಳ ದೈನ್ಯತೆ—ಪೋಲೀಸಿನವನಾಗಿದ್ದರೂ—ಅವನ ಹೃದಯವನ್ನು ತಟ್ಟಿತು. ಅವನು ಬೆಳಕನ್ನು ಚೆನ್ನಾಗಿ ಅವಳ ಕಡೆ ತಿರುಗಿಸಿ, " ಅಲ್ಲಿರುವುದೇನು?—ನಿನ್ನ ಮಗುವೆ?" ಎಂದು ಕೇಳಿದ. ಭಿಕ್ಷುಕಳು ಅರ್ಧ ಅಭಿಮಾನದಿಂದಲೂ ಅರ್ಧ ಮೃದುತ್ವದಿಂದಲೂ, " ಹೌದು" ಎಂದು ಹೇಳಿ, ಅದನ್ನು ನೋಡುತ್ತ, " ಪಾಪ! ಬಹಳ ಕಾಯಿಲೆಯಾಗಿತ್ತು; ಆದರೆ ಈಗ ಮೊದಲಿಗಿಂತ ಎಷ್ಟೋ ವಾಸಿ" ಎಂದು ಹೇಳಿ, ಅದನ್ನು ತನ್ನ ಎದೆಗೆ ಅಪ್ಪಿಕೊಂಡಳು. ಆಮೇಲೆ, ಅವನ ಸ್ನೇಹಮಯವಾದ ಧ್ವನಿಯಿಂದ ಪ್ರೋತ್ಸಾಹಗೊಂಡು, ಅವನಿಗೆ ತನ್ನ ನಿಧಿಯನ್ನು ತೋರಿಸುವುದಕ್ಕೋಸ್ಕರ, ಮಗುವಿಗೆ ಸುತ್ತಿದ್ದ ಬಟ್ಟೆಯನ್ನು ಬಿಚ್ಚಿದಳು. ಪೋಲೀಸಿನವನು ತನ್ನ ಕೈಲಾಂದ್ರವನ್ನು ಅದರ ಮುಖಕ್ಕೆ ಚೆನ್ನಾಗಿ ತಿರುಗಿಸಿದ. ನೋಡಿದನೋ ಇಲ್ಲವೋ, ಅಷ್ಟರೊಳಗೆ ಬೆಚ್ಚಿಬಿದ್ದು, ಹಿಂದಕ್ಕೆ ಸರಿದು, " ಹಾ! ಇದೇನು?—ಅದು ಸತ್ತಿದೆ!" ಎಂದು ಕೂಗಿದ. " ಸತ್ತಿದೆ!"

ಎಂದು ಕೇಳುತ್ತಲೇ ಭಿಕ್ಷುಕಳು ಚೀತ್ಕಾರಮಾಡಿದಳು. “ಅಯ್ಯೋ, ಸುಳ್ಳು! ಸುಳ್ಳು! ನೀವು ಸುಳ್ಳು ಹೇಳುತ್ತೀರಿ! ಇಲ್ಲ! ಅದು ಸತ್ತಿಲ್ಲ! ಕಾಯಿಲೆಯಿಂದ ಹಾಗೆ ಕಾಣುತ್ತಿದೆ. ತಂದೆ! ಬೇಡಿ, ಬೇಡಿ! ಹಾಗೆ ಹೇಳಬೇಡಿ! ನಿಮ್ಮ ದಮ್ಮಯ್ಯ, ತಂದೆ! ಹೇಳಿ—‘ಅದು ಸತ್ತಿಲ್ಲ’—ಎಂದು ಹೇಳಿ! ಹಾ! ಬಾ, ಬಾ, ನನ್ನ ಮುದ್ದು ಮಗುವೇ, ಬಾ! ನೀನು ಸತ್ತಿಲ್ಲ! ಬಾ, ನನ್ನ ದೇವರೇ! ನೀನು ಎಂದಿಗೂ ಸಾಯುವುದಿಲ್ಲ!”—ಹೀಗೆಂದು ಹುಚ್ಚಿಯಂತೆ ಕೂಗಾಡುತ್ತ, ಹೆದರಿಕೆಯಿಂದ ಬೇಗಬೇಗನೆ ಆ ಮಗುವಿನ ಕೈ, ಕಾಲು, ಮುಖ ಎಲ್ಲವನ್ನೂ ಮುಟ್ಟಿ ಮುಟ್ಟಿ ನೋಡಿದಳು. ಅದನ್ನು ಗಾಢವಾಗಿ ಆಲಿಂಗಿಸಿ ಮುದ್ದಿಟ್ಟುಕೊಂಡಳು. ಅದನ್ನು ನೂರಾರು ಪ್ರೀತಿಯ ಹೆಸರಿನಿಂದ ಕೂಗಿ ಕರೆದಳು. ಆದರೆ ಎಲ್ಲವೂ ವ್ಯರ್ಥ! ವ್ಯರ್ಥ! ಮಗುವು ನೀರವ! ಅದರ ಕೃಶವಾದ ಶರೀರವೆಲ್ಲಾ ತಣ್ಣಗಾಗಿಹೋಗಿತ್ತು. ಅದು ಸತ್ತು ಆಗಲೇ ಎರಡು ಗಂಟೆಗಳ ಮೇಲೆ ಆಗಿಹೋಗಿತ್ತು.

ಪೋಲೀಸಿನವನು ಮೌನವಾಗಿದ್ದ. ಅವನಿಗೆ ಏನು ಮಾತನಾಡಬೇಕೆಂದು ತೋಚಲಿಲ್ಲ. ಕಣ್ಣುಗಳಲ್ಲಿ ನೀರು ಬಂತು. ಅವನು ಕಾಯಿದೆ ಕಾನೂನಿನ ನಿಷ್ಠುರ ಪಾಲಕನಾಗಿದ್ದರೂ, ಮೃದು ಪ್ರಕೃತಿಯವನಾಗಿದ್ದ. ಮನೆಯಲ್ಲಿದ್ದ ಹೆಂಡತಿಮಕ್ಕಳು ಅವನ ಜ್ಞಾಪಕಕ್ಕೆ ಬಂದರು.

ಭಿಕ್ಷುಕಳು ಮೌನವಾಗಿ, ಕಣ್ಣೀರು ಹಾಕುತ್ತ, ತನ್ನ ತೊಡೆಯ ಮೇಲಿದ್ದ ಶವವನ್ನು ನೋಡುತ್ತಿದ್ದಳು. ಶವದ ಕಣ್ಣು ಮುಚ್ಚಿತ್ತು. ಅವು ಏನು ಮಾಡಿದರೂ ತೆರೆಯುವ ಹಾಗಿರಲಿಲ್ಲ. ಈ ಬ್ರಹ್ಮಾಂಡವನ್ನೇ ಕೊಟ್ಟರೂ ಆ ಮುಚ್ಚಿದ ಕಣ್ಣುಗಳು ಮತ್ತೆ ಅರಳುವುವೇನು? ಇಲ್ಲ! ಅವುಗಳ ಮೇಲೆ ಮೃತ್ಯುದೇವ ತನ್ನ ಮುದ್ರಿಕೆಯನ್ನೊತ್ತಿಬಿಟ್ಟಿದ್ದ. ದುಃಖದಿಂದ ಭಿಕ್ಷುಕಳ ನಾಲಿಗೆಯ ಶಕ್ತಿ ಅಡಗಿಹೋಗಿತ್ತು. ಪೋಲೀಸಿನವನು ಅವಳ ಹತ್ತಿರಕ್ಕೆ ಹೋಗಿ, ಬಹು ಕನಿಕರದಿಂದ, “ಇಲ್ಲಿ ನೋಡು, ಸುಮ್ಮನೆ ಅಳುವುದರಿಂದ ಪ್ರಯೋಜನವಿಲ್ಲ” ಎಂದು ಹೇಳಿ, ಮಾತು ನಿಲ್ಲಿಸಿದ. ಅವನಿಗೆ ಗಂಟಲಿನಲ್ಲಿ ಹಿಡಿದಂತಾಯಿತು. ಕಷ್ಟದಿಂದ ಅದನ್ನು ಹೋಗಲಾಡಿಸಿಕೊಂಡು, ಪುನಃ “ಬಡಪಾಯಿ! ಅದರ ಪ್ರಾಣ ಹೋಗಿದೆ. ಈಗ ಏನೂ ಮಾಡುವ ಹಾಗಿಲ್ಲ. ಅದಕ್ಕೆ ಇಲ್ಲಿಗಿಂತ ಪರಲೋಕವೇ ಒಳ್ಳೆಯದೆಂದು ತೋರುತ್ತದೆ. ಬದುಕಿದ್ದರೆ ಅದಕ್ಕೆ ಇನ್ನೂ

ಏನೇನು ಕಷ್ಟಪರಂಪರೆಗಳು ಕಾದಿದ್ದುವೋ! ಬೇಡ, ಅಳಬೇಡ; ಅದರಿಂದ ಏನೂ ಉಪಯೋಗವಿಲ್ಲ" ಎಂದು ಹೇಳಿದ. ಭಿಕ್ಷುಕಳು ನಡುಗಿ ನಿಟ್ಟುಸಿರು ಬಿಟ್ಟಳು. ಅದೆಂತಹ ನಿರಾಶೆಯ ನಿಟ್ಟುಸಿರು! ಅವಳ ಪ್ರೇಮಭರಿತವಾದ ಹೃದಯ ಬೆಂದು, ಅದರಿಂದ ಹೊರಡುವ ಆವಿಯೋ—ಎನ್ನುವ ಹಾಗೆ ಇತ್ತು, ಆ ನೀಳವಾದ ನಿಟ್ಟುಸಿರು. ಅದು ಅವನ ಮಾನವಹೃದಯವನ್ನು ಭೇದಿಸಿತು. ಅವನು ಎಷ್ಟು ಸಂತೈಸಿದರೂ ಅವಳಿಗೆ ಸಮಾಧಾನವಾಗಲಿಲ್ಲ. ಆದರೆ ಅವನು ಕರ್ತವ್ಯಬದ್ಧನಾಗಿದ್ದ; ಬಹಳ ಹೊತ್ತು ಅಲ್ಲಿ ನಿಲ್ಲುವುದಕ್ಕಿಲ್ಲ. ಆದಕಾರಣ, ಅವನು ಸ್ವಲ್ಪ ಗಂಭೀರ ಧ್ವನಿಯಿಂದ, "ನೋಡು, ಇಲ್ಲಿ ಕುಳಿತು ಅತ್ತರೆ ಪ್ರಯೋಜನವಿಲ್ಲ. ಮನೆಗೆ ಹೋಗು. ನಾನು ಇಲ್ಲಿ ನಿನ್ನನ್ನು ಬಿಟ್ಟುಹೋದರೆ ನೀನು ಖಂಡಿತವಾಗಿಯೂ ಮನೆಗೆ ಹೋಗುವೆನೆಂದು ಮಾತು ಕೊಡುವೆಯಾ? ನಾನು ಪುನಃ ಇಲ್ಲಿಗೆ 'ಬೀಟು' ಬಂದಾಗ ನೀನು ಇಲ್ಲಿರಕೂಡದು; ಗೊತ್ತಾಯಿತೇ?" ಎಂದು ಹೇಳಿದ. ಭಿಕ್ಷುಕಳು ತಲೆದೂಗಿದಳು. "ಈಗ ಸರಿ! ಇನ್ನು ಹತ್ತು ನಿಮಿಷ; ಅಷ್ಟರಲ್ಲಿ ನೀನು ನೆಟ್ಟಗೆ ಮನೆಗೆ ಹೋಗಬೇಕು" ಎಂದು ಹೇಳಿ, ಪೋಲೀಸಿನವನು ಹೊರಟುಹೋದ. ಬರಬರುತ್ತ ಅವನ ಕಾಲಿನ ಸಪ್ಪಳ ಕ್ಷೀಣವಾಗುತ್ತ ಬಂದು, ಕೊನೆಗೆ ಕೇಳಿಸದಂತಾಯಿತು. ಭಿಕ್ಷುಕಳು ಒಬ್ಬಳೇ ಆದಳು. ಅವಳು ಎದ್ದು, ಮಗುವಿನ ಶವವನ್ನು ತನ್ನ ಕೈಗಳಲ್ಲಿ ತೂಗುತ್ತ, ಸ್ವಲ್ಪ ನಕ್ಕಳು. ಅದು ದುಃಖವನ್ನು ಮೆಟ್ಟಿಬಂದ ನಗು. ಪೋಲೀಸಿನವನ "ನೆಟ್ಟಗೆ ಮನೆಗೆ ಹೋಗು" ಎಂಬ ಶಬ್ದಗಳು ಅವಳ ಮನಸ್ಸಿನಲ್ಲಿ ಧ್ವನಿಯಾಗುತ್ತಿದ್ದವು. ಅವಳು "ನೆಟ್ಟಗೆ—ಮನೆಗೆ—ಹೋಗು" ಎಂದು ಮೆಲ್ಲಗೆ ಹೇಳಿದಳು. ಸ್ವಲ್ಪ ಹೊತ್ತು ಸುಮ್ಮನಿದ್ದು, ಪುನಃ "ಮನೆ! ಮನೆ! ಹೌದು, ನನ್ನ ಕಂದ! ಹೌದು! ಮನೆಗೆ ಹೋಗಬೇಕು. ಬಾ, ನನ್ನ ಮುದ್ದು ಕಂದ! ನಾವಿಬ್ಬರೂ ಒಟ್ಟಿಗೇ ಮನೆಗೆ ಹೋಗೋಣ" ಎಂದು ಹೇಳಿ, ಅದನ್ನು ಬಿಗಿಯಾಗಿ ತನ್ನ ಎದೆಗೆ ಅಪ್ಪಿಕೊಂಡು, ಮೆಲ್ಲಗೆ, ಜಾಗರೂಕತೆಯಿಂದ ಮೆಟ್ಟಿಲುಗಳನ್ನು ಒಂದೊಂದಾಗಿ ಇಳಿದು, ನೀರಿನ ಅಂಚನ್ನು ಸೋಕಿದಳು. ಸಣ್ಣ ಸಣ್ಣ ಅಲೆಗಳು ಬಂದು ಅವಳ ಕಾಲಿಗೆ ಅಪ್ಪಳಿಸಲಾರಂಭಿಸಿದುವು. ನದಿ, ಸುಸ್ವರದಿಂದ ಹಾಡುತ್ತ, ಹಾಡುತ್ತ, ಹರಿದುಹೋಗುತ್ತಿತ್ತು. ಭಿಕ್ಷುಕಳು ವಿಶಾಲವಾದ, ನಿರೀಕ್ಷಣೀಯವಾದ ಕಣ್ಣುಗಳಿಂದ ಮೇಲೆ

ನೋಡುತ್ತ, ಪುನಃ "ನೆಟ್ಟಗೆ ಮನೆಗೆ! ಕೊನೆಯಲ್ಲಿ ಎಲ್ಲರೂ ಹೋಗುವ ಮನೆಗೆ!" ಎಂದು ಹೇಳಿ, ಕ್ಷಣಮಾತ್ರ ಸುಮ್ಮನಿದ್ದು, ಪುನಃ "ನನ್ನ ಮುದ್ದು ಕಂದನೇ! ನನ್ನ ಪ್ರಾಣಸಖನೇ! ಹೌದು, ನಾವಿಬ್ಬರೂ ಬಹಳ ದಣಿದಿದ್ದೇವೆ! ಬಾ! ನಾವಿಬ್ಬರೂ ಒಟ್ಟಿಗೇ ಮನೆಗೆ ಹೋಗೋಣ!! ಅಲ್ಲಿ ಹೋಗಿ, ದೂರು ಹೇಳೋಣ! ಹೋಗೋಣ ಬಾ!" ಎಂದು ಹೇಳಿ, ಮಗುವಿನ ಶವದ ತಣ್ಣನೆಯ ಮುಖವನ್ನು ಬಾರಿಬಾರಿಗೂ ಚುಂಬಿಸುತ್ತ, ಅದನ್ನು ಬಿಗಿಯಾಗಿ, ತನ್ನ ಬಾಹುಗಳಲ್ಲಿ ಆಲಿಂಗಿಸಿಕೊಂಡು, ಮುಂದಕ್ಕೆ ಹಾರಿದಳು. ನೀರಿನಲ್ಲಿ ಶಬ್ದವಾಯಿತು. ಸ್ವಲ್ಪ ಒದ್ದಾಡುವ ಶಬ್ದ, ಅಷ್ಟೆ. ಆಮೇಲೆ ಎಲ್ಲವೂ ಮುಗಿದು ಪುನಃ ಮೌನ. ನದಿ, ಮೊದಲಿನಂತೆ, ಸಣ್ಣ ಸಣ್ಣ ತರಂಗಗಳನ್ನು ಮೆಟ್ಟಿಲ ಮೇಲೆ ಅಪ್ಪಳಿಸುತ್ತ, ಮಂಜುಳ ರವದೊಡನೆ ಹರಿದುಹೋಗುತ್ತಿತ್ತು.

ನದಿಯ ಮೇಲೆ ಒಣಗಿದ ಎರಡು ಎಲೆಗಳು ತೇಲಿಹೋಗುವ ಹಾಗೆ, ಭಿಕ್ಷುಕಳು, ಅವಳ ಗಾಢವಾದ ಆಲಿಂಗನದಲ್ಲಿ ಅವಳ ಹುಡುಗನ ಮೃತಶರೀರ —ಇವರಿಬ್ಬರೂ ಮುಳುಗುತ್ತ ಏಳುತ್ತ ತೇಲಿಹೋದರು. ಅವರಿಗೆ ಇಲ್ಲಿ ಸರಿ ಬೀಳಲಿಲ್ಲ. ತಾಯಿಯರಿಗೆ ಬೇರೆ ಒಂದು ಸ್ವರ್ಗವಿರುವುದಾದರೆ, ಭಿಕ್ಷುಕಳು ಅಲ್ಲಿಗೆ ಹೋದಳು. ಇಬ್ಬನಿ ಸುರಿಯುತ್ತಲೇ ಇತ್ತು.

ಪೋಲೀಸಿನವನು ಪುನಃ ಆ ಮಾರ್ಗವಾಗಿ ಬಂದ. ಅಲ್ಲಿ ಭಿಕ್ಷುಕಳಾಗಲಿ ಅವಳ ಮಗುವಿನ ಶವವಾಗಲಿ ಇರಲಿಲ್ಲ. ನದಿ ನಿಧಾನವಾಗಿ ಏನೂ ಅರಿಯದಂತೆ ಹರಿದುಹೋಗುತ್ತಿತ್ತು. ಅವನು, ಮನಸ್ಸಿಗೆ ವ್ಯಸನವಾಗಿದ್ದರೂ ಸ್ವಲ್ಪ ಸಮಾಧಾನಗೊಂಡು, "ಸರಿ, ಮನೆಗೆ ಹೋಗಿರಬಹುದು" ಎಂದು ತನಗೆ ತಾನೇ ಹೇಳಿಕೊಂಡು, ಕುಂದಿದ ಹೃದಯವುಳ್ಳವನಾಗಿ ಹೊರಟುಹೋದ.

# ಬೇವು - ಬೆಲ್ಲ

ಸ್ವರ್ಗದೊಳಗೀ ಸ್ನೇಹ ದೊರೆವುದೇನು ?
ಈ ಪರಿಯ ಸೌಹಾರ್ದ ಕೆಳೆಯ ವೈಭವವು ?
ಇಲ್ಲದಿರೆ ಎನಗಿಲ್ಲೆ ನೂರು ಜನ್ಮಗಳಿರಲಿ
ಎಲ್ಲ ಪರಿ ಮಮತೆಗಳ ಸತ್ಯಜೀವನವು ! —ವಿ. ಸೀ.

೧

"ಲೋ, ನಾಳೆ ಯುಗಾದಿ!—ಇಬ್ಬರಿಗೂ ಊಟ ಸಂಪಾದಿಸಿಕೊಂಡು ಬಂದಿದ್ದೀನಿ" ಎಂದ ರಂಗಣ್ಣ.

"ಎಲ್ಲೀದೋ ?"—ಕೇಳಿದವನು ಶಿವಸ್ವಾಮಿ.

ಇಬ್ಬರೂ ಬಾಲ್ಯದಿಂದ ಸಹಪಾಠಿಗಳು. ಕಾಲೇಜು ಕ್ಲಾಸಿಗೆ ಬರುವ ವೇಳೆಗೆ, ಶಿವಸ್ವಾಮಿ ಮೈಸೂರು ಕಾಲೇಜಿಗೆ ಹೋದ; ರಂಗಣ್ಣ ಬೆಂಗಳೂರು ಕಾಲೇಜು ಸೇರಿದ. ಶಿವಸ್ವಾಮಿ ಮೈಸೂರು ಕಾಲೇಜಿನಲ್ಲಿ ಓದು ಮುಗಿಸಿ ಕೊಂಡು, ಪೂನಾಕ್ಕೆ ಹೋಗಿ, ಲಾಯರಾಗಿ ಬಂದ. ರಂಗಣ್ಣ, ಸೆಂಟ್ರಲ್ ಕಾಲೇಜಿನಿಂದ ಪಾಸಾಗಿ, ಇಂಜನಿಯರಿಂಗ್ ಕಾಲೇಜಿನಲ್ಲಿ ಮೂರನೇ ವರ್ಷ ದಲ್ಲಿದ್ದ. ಶಿವಸ್ವಾಮಿ, ಬಂದವನೇ ಬೋರ್ಡು ಹಾಕುವುದು ಬಿಟ್ಟು, ದಿವಾನರ ಆಫೀಸಿನಲ್ಲಿ ಕೆಲಸಕ್ಕೆ ಸೇರಿಕೊಂಡುಬಿಟ್ಟ. ಯಾರು ಯಾರೋ ಹೇಳಿದರು—ಬೇಡಾಂತ—ಕೇಳಲಿಲ್ಲ.

ಶಿವಸ್ವಾಮಿಯ ತಾಯಿ ತೀರಿಹೋಗಿ ಎರಡು ವರ್ಷಗಳಾಗಿತ್ತು. ಅವನು ಪೂನಾದಿಂದ ಬಂದಮೇಲೆ ತಂದೆಯೊಡನೆ ಜಗಳವಾಡಿಬಿಟ್ಟಿದ್ದ. ಇವನ ತಂದೆ, ತನ್ನ ಹೆಂಡತಿ ಸತ್ತ ಸೂತಕ ಮುಗಿಯುವುದರೊಳಗಾಗಿ, ಆಕೆಯ ತೌರುಮನೆ ಯಿಂದ ಬಂದಿದ್ದ ಒಡವೆ ವಸ್ತುಗಳನ್ನೆಲ್ಲಾ ಮಾರಿಬಿಟ್ಟದ್ದೇ ಕಾರಣ. ಶಿವ ಸ್ವಾಮಿ, ಬೇಡಾ—ಎಂದು ಇನ್ನಿಲ್ಲದ ಹಾಗೆ ಬೇಳಿಕೊಂಡ; ತಂದೆ ಹಿಡಿದ ಹಟವನ್ನು ಬಿಡಲಿಲ್ಲ. ತಂದೆ-ಮಕ್ಕಳಿಗೆ ಮಿತಿಮೀರಿದ ವ್ಯಾಜ್ಯವಾಯಿತು. ಶಿವಸ್ವಾಮಿ ಮನೆಯನ್ನು ಬಿಟ್ಟು, ಚಾಮರಾಜಪೇಟೆಯಲ್ಲಿ ಒಂದು ಕೊಠಡಿ ಯನ್ನು ಬಾಡಿಗೆಗೆ ತೆಗೆದುಕೊಂಡು, ಅಲ್ಲಿದ್ದ. ಅವನ ತಾಯಿ ತೀರುವುದಕ್ಕೆ

ಒಂದು ವರ್ಷ ಮುಂಚೆಯೇ ಮದುವೆಯಾಗಿತ್ತು. ಈಚೆಗೆ ಪ್ರಸ್ತವೂ ಆಯಿತು. ಹೀಗಿದ್ದರೂ ಅವನಿಗಿದ್ದ ಕೆಲಸ ಇನ್ನೂ ಖಾಯಂ ಆಗಿರಲಿಲ್ಲವಾದುದರಿಂದ, ಅವನು ಹೆಂಡತಿಯನ್ನು ಕರೆತಂದು ಸಂಸಾರ ಹೂಡುವ ಯೋಚನೆ ಮಾಡಿರಲಿಲ್ಲ. ಸದ್ಯದಲ್ಲಿಯೇ ಆಗುವ ಹಾಗಿತ್ತು. ಅದುವರೆಗೂ ಹೀಗೇ ಕಾಲ ಹಾಕೋಣವೆಂದಿದ್ದ. ಹೆಂಡತಿ, ಕೋಲಾರದಲ್ಲಿ ತೌರುಮನೆಯಲ್ಲಿದ್ದಳು.

ರಂಗಣ್ಣ ಬೆಂಗಳೂರಿಗೆ ಪರಕೀಯ. ಅವನೂ ಒಂದು ರೂಮಿನಲ್ಲಿದ್ದ. ಅವನಿಗೆ ಮದುವೆಯಾಗಿತ್ತು, ಅಷ್ಟೆ. ಶಿವಸ್ವಾಮಿ ರೂಮು ಮಾಡಿದಮೇಲೆ, ರಂಗಣ್ಣನಿಗೆ ತನ್ನ ಜೊತೆಯಲ್ಲೇ ಬಂದಿರುವಂತೆ ಹೇಳಿದ. ಶಿವಸ್ವಾಮಿ ಅತ್ಯಂತ ಸ್ನೇಹಪರ. ತಾಯಿಯನ್ನು ಕಳೆದುಕೊಂಡು—ತಂದೆಯೊಡನೆ ಜಗಳವಾಡಿ—ಹೆಂಡತಿಯನ್ನು ತೌರುಮನೆಯಲ್ಲಿ ಬಿಟ್ಟಿದ್ದ ಅವನು, ಬಾಲ್ಯದ ಗೆಳೆಯನ ಸ್ನೇಹದಲ್ಲಿ ಶಾಂತಿಯನ್ನು ಪಡೆಯಲೆಳಸಿದ. ಇದು ಆಂತರಿಕವಾದ ಕಾರಣ. ಬಾಯಿಬಿಟ್ಟು ಹೇಳಿದ್ದು—ರೂಮು ಬಾಡಿಗೆ, ದೀಪದ ಖರ್ಚು ಕಡಿಮೆಯಾಗುತ್ತೆ—ಎಂದು. ರಂಗಣ್ಣ ಸಂತೋಷದಿಂದ ಒಪ್ಪಿಕೊಂಡ. ಇಬ್ಬರೂ 'ಸಂಸಾರ'ವನ್ನು ಹೂಡಿದರು! ಹತ್ತಿರದಲ್ಲಿಯೇ ಇದ್ದ ಹೋಟಲಿನಿಂದ 'ಟಿಫಿನ್ ಕ್ಯಾರಿಯರ್'ನಲ್ಲಿ ಊಟ ತರಿಸುತ್ತಿದ್ದರು. ಬೆಳಿಗ್ಗೆ ಕಾಫಿ ತಾವೇ ಮಾಡಿಕೊಳ್ಳುತ್ತಿದ್ದರು. ಮಧ್ಯಾಹ್ನದ ಕಾಫಿ ತಿಂಡಿ, ಹೊರಗೆ ಕಾಫಿ-ಕ್ಲಬ್ಬುಗಳಲ್ಲಿ ಆಗುತ್ತಿತ್ತು.

ರಂಗಣ್ಣನಿಗೆ ಊಟ ಬಂದದ್ದು ಅವನ ಭಾವನ ಮನೆಯಿಂದ. ಭಾವ ಎಂದರೆ ಅವನ ದೊಡ್ಡಪ್ಪನ ಮಗಳ ಯಜಮಾನರು. ಅವರಿಗೆ ರಾಜಾ ಮಿಲ್ಲಿನಲ್ಲಿ ಕೆಲಸ; ಶೇಷಾದ್ರಿಪುರದಲ್ಲಿ ಮನೆ.

ಯುಗಾದಿಯ ಹಿಂದಿನ ದಿನ ಸಾಯಂಕಾಲ, ರಂಗಣ್ಣನ ಭಾವ ಅವನನ್ನು ಕಂಡು, ಮಾರನೆಯ ದಿನ ಊಟಕ್ಕೆ ಬರಹೇಳಿದರು. ಅವರು ಊಟಕ್ಕೆ ಕರೆದೊಡನೆಯೇ ಅವನಿಗೆ ಶಿವಸ್ವಾಮಿಯ ಯೋಚನೆ ಬಂತು. "ಅವನಿಗೆ ನಾಳೆ ಎಲ್ಲಿಯಾದರೂ ಊಟ ಬಂದಿದೆಯೋ ಇಲ್ಲವೋ? ಇಲ್ಲದೆ ಹೋದರೆ?.... ಹೋಟಲಿನಲ್ಲಿಯೂ ಬಹುಶಃ ಹಬ್ಬವಿರಬಹುದು.... ಆದರೇನು? ಯುಗಾದಿಯ ದಿನವೂ ಹೋಟಲೂಟವೆ!........ಇಲ್ಲ. ಅವನನ್ನು ಕರೆದುಕೊಂಡೇ ಹೋಗಬೇಕು...." ಈ ರೀತಿಯೆಲ್ಲಾ ಯೋಚಿಸಿ, ಕೊನೆಗೆ ಹೇಳಿದ:

"ಭಾವಾ, ನೋಡಿ, ಬಂದರೆ, ನಾನು ನನ್ನ ಸ್ನೇಹಿತ, ಇಬ್ಬರೂ ಬರುತ್ತೇವೆ. ಅವನನ್ನು ಬಿಟ್ಟು ನಾನೊಬ್ಬನೇ ಬರೋಕಾಗೊಲ್ಲ. ನೀವು 'ಇದೇನಪ್ಪ! ಒಬ್ಬರನ್ನು ಕರೆದರೆ ಇಬ್ಬರು ಬರುತ್ತಾರೆ' ಅಂತ........"

"ಅಯ್ಯೋ! ಅದಕ್ಕೇನಯ್ಯ!! ಅಗತ್ಯವಾಗಿ ಆಗಲಿ! ಇಬ್ಬರಲ್ಲದಿದ್ದರೆ ಇನ್ನಿಬ್ಬರು ಬನ್ನಿ. ನಾನೇ ಅವರನ್ನು ಕಂಡು ಹೇಳಲೇನು? ಅವರನ್ನು ಎಲ್ಲಿ ಕಾಣೋದು?"

"ಅದೇನೂ ಯೋಚಿಸಬೇಡಿ; ನಿಮ್ಮ ಪರವಾಗಿ ನಾನು ಹೇಳಿದರೆ ಸಾಕು. ನನ್ನ ಸ್ನೇಹಿತ ಬಹಳ ನಿಗರ್ವಿ."

ಆ ದಿನ ರಾತ್ರೆ ಎಂಟು ಗಂಟೆಗೆ ಶಿವಸ್ವಾಮಿ ರೂಮಿಗೆ ಬಂದ. ಆಗ ರಂಗಣ್ಣ ಅವನಿಗೆ ಊಟದ ಸಮಾಚಾರ ಹೇಳಿದ್ದು. ಶಿವಸ್ವಾಮಿ ಅಂಗಿ ಷರಾಯಿ ಬಿಚ್ಚುತ್ತ,

"ನಾಳೆ ನನಗೆ ಉಪವಾಸ" ಎಂದು ನಿಧಾನವಾಗಿ ಹೇಳಿದ.

"ಏನು ಬಂತೋ ನಿನಗೆ!....ನಾಳೆ!....ಎಲ್ಲಾ ಬಿಟ್ಟು ನಾಳೆ ಉಪವಾಸ!"

"ಇಲ್ಲಾ ರಂಗು, ಕ್ಷಮಿಸು. ನಾಳೆ ನಾನು ನಿನ್ನ ಜೊತೇಲಿ ಬರಲಾರೆ."

"ಇನ್ನೆಲ್ಲಾದರೂ ಊಟ ಗಟ್ಟಿಸಿದ್ದೀಯೋ?"

"ಹುಂ."

"ಎಲ್ಲಿ?"

"ಹೋಟಲ್ ಶ್ರೀ ಕೃಷ್ಣವಿಲಾಸ್ ಮತ್ತು ಬ್ರಾಹ್ಮಣರ ಕಾಫಿ ಕ್ಲಬ್ಬಿನಲ್ಲಿ."

"ಸರಿ! ಸರಿ! ಇದ್ದೇ ಇದೆ ಆ ಪಂಚಾಮೃತ ನಮ್ಮ ಪಾಲಿಗೆ—ದಿನಾ! ಅದಿರಲಿ, ಇನ್ನೆಲ್ಲಾದರೂ ಬಂದಿದೆಯೆ?"

"ಎಲ್ಲೂ ಇಲ್ಲ."

"ಹಾಗಾದರೆ?"

"ಇಲ್ಲಾ ರಂಗು, ನಾಳೆ ನಾನು ಬರೊಲ್ಲ—Very sorry."

"ಅಯ್ಯೋ ಹುಚ್ಚ! ನಾವಿಬ್ರೂ ಬರ್ತೀವೀಂತ ಹೇಳಿದೆನಲ್ಲೋ!"

"ನನ್ನ ಕೇಳದೆ ಹೇಳಿದವನು ನೀನು ಹುಚ್ಚನೋ ನಾನೋ?"

"ನಾನೇ ಅಗ್ತೀನಿ, ಬಾ."

"ಇಲ್ಲಾ ರಂಗು, ಬಲವಂತ ಮಾಡಬೇಡ. Please."

"ಅದೇನು ಕಾರಣ, ನನ್ನೊಡನೆ ಹೇಳಬಾರದೆ, ಶಿವು?"

"ಅದೇನು ಕಾರಣ ಅಂತ ಹೇಳಲಿ, ರಂಗು? ನಾಳೆ ಹಬ್ಬದೂಟ ನನ್ನ ಹಣೇಲಿ ಬರೆದಿಲ್ಲ—ಅಷ್ಟೆ."

"ನಾನು ಬರೀತೀನಿ."

"ಸರಿ, ನೀ–ನೊಬ್ಬ!"

"ಬಂದರೆ ಇಬ್ಬರೂ ಬರುತ್ತೇವೆ—ಇಲ್ಲದಿದ್ದರೆ ಇಲ್ಲ—ಅಂತ ಹೇಳಿದ್ದೇನೆ."

"ಛೆ! ಛೇ! Don't be silly! ನಾಳೆ ನೀನು ಹೋಗಲೇಬೇಕು!"

"ನೀನು ಇಲ್ಲಿ ಉಪವಾಸಮಾಡು; ನಾನು ಅಲ್ಲಿ ಹೋಗಿ ತಿಂದು, ತೇಗಿ...."

"ಏನೇನೋ ಹರಟಬೇಡ! ಒಳ್ಳೇ ಹುಡುಗನ ಹಾಗೆ ಊಟ ಮಾಡಿ, ಆರತಿ ಎತ್ತಿಸಿಕೊಂಡು ಬಾ!"

"ನೀನು ಏಕೆ ಬರೊಲ್ಲ, ಹೇಳು?"

"ಏಕೋ!—ನನಗೆ ಇಷ್ಟವಿಲ್ಲ—ಅಷ್ಟೆ."

ರಂಗಣ್ಣ ಸ್ವಲ್ಪಹೊತ್ತು ಸುಮ್ಮನಿದ್ದು, ಆಮೇಲೆ ಎಲ್ಲಿಯೋ ನೋಡುತ್ತ, "ಇಂದು ಕಂಡೆ!" ಎಂದ.

"ಏನು?" ಎಂದ ಶಿವಸ್ವಾಮಿ.

ರಂಗಣ್ಣ ಅಲುಗದೆ, ನಿಧಾನವಾಗಿ ಹೇಳಿದ:

"ನಮ್ಮ ಸ್ನೇಹ ಅನ್ನುವುದು ಸ್ನೇಹವಲ್ಲ—ಪರಸ್ಪರ ಶುದ್ಧ ಮೋಸ—ಮುಚ್ಚುಮರೆ, ಎಂದು."

"ಏನೋ ನಿನ್ನ ಮಾತು, ರಂಗು?"

"ಏನೂ ಇಲ್ಲ. ಸ್ನೇಹಕ್ಕೆ ನಾನು ಕಟ್ಟುವ ಬೆಲೆಯನ್ನು ನೀನು ಕಟ್ಟಲಾರೆ, ಅಲ್ಲ—ಕಟ್ಟಲೊಲ್ಲೆ, ಶಿವು."

"ನೋಡು ರಂಗು, ನಮ್ಮಪ್ಪನ ಮನೇನೂ ಶೇಷಾದ್ರಿಪುರದಲ್ಲಿದೆ. ನಾಳೆ ಎಲ್ಲೆಲ್ಲೂ ಹಬ್ಬ, ಎಲ್ಲೆಲ್ಲೂ ಸಂತೋಷ. ಆದರೆ...."

ಮುಂದೆ ಮಾತು ಹೊರಡಲಿಲ್ಲ,

"ಆದರೆ—ಏನು ?" ಎಂದ ರಂಗಣ್ಣ.

"ಆದರೆ ಆ ಮನೆಯಲ್ಲಿ ನಾಳೆ ಏನೂ ಸುಖವಿಲ್ಲ, ಸಂತೋಷವಿಲ್ಲ. ನನ್ನ ತಮ್ಮಂದಿರು ಇಬ್ಬರು, ತಂಗಿಯೊಬ್ಬಳು ಇದ್ದಾರೆ; ತಾಯಿ ಇಲ್ಲದ ತಬ್ಬಲಿಗಳು. ಅಪ್ಪನೋ!....ಅಪ್ಪನೇ ಸರಿ! ಆವಸಾಯ್ತು, ಅವನ ಸ್ನೇಹಿತ ರಾಯ್ತು. ಮನೆಯಲ್ಲಿ ನೋಡಿಕೊಳ್ಳೋರು ದಿಕ್ಕಿಲ್ಲ. ಹುಡುಗರು ಏನು ಹಬ್ಬದೂಟಮಾಡ್ತಾರೋ ನಾ ಕಾಣೆ. ಇಲ್ಲಿಗೆ ಬರೋಕೆ ಮುಂಚೆ, ಒಂದಿಷ್ಟು ಹಣ್ಣು-ತಿಂಡಿ ತೆಗೆದುಕೊಂಡು ಹೋಗಿ ಕೊಟ್ಟು ಬಂದೆ—ತಿನ್ನಲಿ ತಬ್ಬಲಿಗಳು ಎಂದು. ನಾನು ಮನೆ ಮಾಡುವವರೆಗೂ ಈ ಕಷ್ಟ ಆ ಮಕ್ಕಳಿಗೆ. ಬೆನ್ನಲ್ಲಿ ಬಿದ್ದವರು ಅವರ ಪಾಡು ಹಾಗಿರೋವಾಗ—ರಂಗೂ, ನಾನು ಯಾವ ಹೊಟ್ಟೆ ಇಟ್ಟುಕೊಂಡು, ನಾಳೆ ಹಬ್ಬದೂಟ ಮಾಡಲಿ? ನಾನು ಆ ಕಡೆ ಹೋಗಿ ನಾಲ್ಕು ತಿಂಗಳ ಮೇಲೆ ಆಗಿತ್ತು. ಆ ಮನೇನ ದೂರದಿಂದ ನೋಡುತ್ತಿದ್ದ ಹಾಗೆಯೇ ಹೊಟ್ಟೆಯಲ್ಲಿ ಏನೋ ತಡೆಯಲಾರದ ಸಂಕಟ—ತಳಮಳವಾಯ್ತು, ರಂಗು! ಅಮ್ಮ ಆ ಮನೆಗೆ ಜೀವದ ಹಾಗೆ ಇದ್ದಳು; ಈಗ ಅದು ಜೀವವಿಲ್ಲದ ಮನೆ. ನಿತ್ಯವೂ—ಅದರಲ್ಲೂ ನಾಳೆ—ಆ ಮನೆಯಲ್ಲಿ, ಆ ಹುಡುಗರು ಪಡಬಹುದಾದ ವ್ಯಥೆ ಸಂಕಟ ನೆನೆಸಿಕೊಂಡರೆ, ನಿಂತಲ್ಲಿ ನಿಲ್ಲಲಾರೆ—ಕೂತಲ್ಲಿ ಕೂರಲಾರೆ, ಹಾಗಾಗುತ್ತದೆ. ಇದು ನನ್ನ ಹಣೇಬರಹ! ಮನೆ ಇದ್ದೂ ಆ ಮನೆಯಲ್ಲಿ, ಯುಗಾದಿ ದಿನವೂ ಊಟವಿಲ್ಲವಾಯಿತು—ನನಗೆ."

ಉಕ್ಕಿಬಂದ ಎರಡು ಹನಿ ಕಣ್ಣೀರನ್ನು ಒರೆಸಿಕೊಂಡು, ದೊಡ್ಡದಾಗಿ ನಿಟ್ಟುಸಿರು ಬಿಟ್ಟ, ಶಿವಸ್ವಾಮಿ. ಅವನು ಈಸೀಛೇರ್ (Easy chair) ಮೇಲೆ ಕುಳಿತು, ತಾರಸಿ ನೋಡುತ್ತಿದ್ದ. ರಂಗಣ್ಣ ಹಾಸಿಗೆ ಸುರುಳಿಯ ಮೇಲೆ ಕುಳಿತು, ನೆಲವನ್ನು ನೋಡುತ್ತಿದ್ದ. ಸ್ವಲ್ಪ ಕಾಲ ಇಬ್ಬರೂ ಮೌನವಾಗಿದ್ದರು. ಆಮೇಲೆ ರಂಗಣ್ಣ,

"ಸರಿ! It is settled!" ಅಂದ.

"ಏನು ಸೆಟ್ಲಲ್ಡು ?"

"ನಾಳೆ ನಾನೂ ಚೆಕ್ಕರ್."

"ಬಹಳ ಯೋಗ್ಯ—ದೊಡ್ಡ ಮನುಷ್ಯ ಅಂತಾರೆ, ಕಣಯ್ಯ!"

" ಅಂದರೆ ಅನ್ನಲಿ."

" ನೋಡು ರಂಗು, ನೀನು ನಾಳೆ ಹೋಗದೆ ಇದ್ದರೆ, I will never forgive you! ನೀನು ಹೋಗಲೇಬೇಕು! ಮಾತು ಕೊಡು!"

" ಏನೋಪ್ಪ!.....ಆಗಲಿ; ನೀನು ಯಾಕೆ ಬರಲಿಲ್ಲಾಂತ ಕೇಳಿದರೆ, ಏನು ಹೇಳಲಿ?"

" ಬಿಟ್ಟ ಏನಾದರೂ ಒಂದು ಗಪ್ಪು! ಇನ್ನೆಲ್ಲೋ ಊಟಕ್ಕೆ ಒಪ್ಪಿಕೊಂಡು ಬಿಟ್ಟಿದ್ದಾಂತ ಹೇಳು. (ನಿಜಾ ಹೇಳೋದಾದರೆ ಹಿಂದು ಮುಂದು ನೋಡಬೇಕು —ಸುಳ್ಳಿಗೇನಯ್ಯ!)"

" ಒಳ್ಳೇ ಗೆಳೆಯ! ನಾಳೇನೂ ಸುಳ್ಳು ಹೇಳೂ ಅಂತೀಯಾ?"

" ನಾಳೇನೇ ಬಹಳ ಪ್ರಶಸ್ತವಾದ ದಿನ—ಸುಳ್ಳಿಗೆ!....ಆಯಿತು, ಏನಡಿಗೆ ಬಂದಿದೆ ನೋಡಿದೆಯಾ?"

" ಆಹಾ! ನೋಡಿದೆ! ಇವತ್ತು ಮಂಗಳವಾರ—ಅಮಂಗಳದ ತರಕಾರೀನೇ—ಎಲ್ಲ!"

" ಏನು ಹಾಗೆಂದರೆ?"

" ತಿಥೀ ತರಕಾರಿ!—ಬಾಳೇಕಾಯಿ, ಬದನೇಕಾಯಿ, ಹಾಗಲಕಾಯಿ!! ಉದ್ದಿನೊಡೆ—ರವೆ ಉಂಡೆ ಎರಡಿಲ್ಲ, ಅಷ್ಟೆ!"

* * * *

ಇಬ್ಬರೂ ಊಟಮಾಡಿ, ಸ್ವಲ್ಪಹೊತ್ತು ಮಾತನಾಡುತ್ತಿದ್ದು ಮಲಗಿದರು.

೨

ಯುಗಾದಿಯ ದಿನ ಬೆಳಿಗ್ಗೆ ಎಂಟು ಗಂಟೆಯಾಗಿತ್ತು. ಇಬ್ಬರೂ ಹಾಸಿಗೆ ಬಿಟ್ಟು ಎದ್ದಿರಲಿಲ್ಲ. ಶಿವಸ್ವಾಮಿ ಎಚ್ಚರವಾದೊಡನೆ ಒಂದು ಮಗ್ಗುಲಿಗೆ ತಿರುಗಿ, " ರಂಗು, ಎದ್ದಿದೀಯೋನೋ? Happy New Year, old chap!" ಎಂದ.

ರಂಗಣ್ಣನಿಗೆ ಎಚ್ಚರವಾಯಿತು. ಕಣ್ಣು ಉಜ್ಜಿಕೊಳ್ಳುತ್ತಾ ಮಗ್ಗುಲಾಗಿ, " ಆ—ಏನಂದೆ?" ಎಂದ.

"ನಿನಗೆ ಒಂದು Happy New Year wish ಮಾಡಿದೆ, ಕಣೋ."

"Oh! Yes! ನಿನಗೂ ಒಂದು dash fine ಯುಗಾದಿ!"

*   *   *   *

ಊಟದ ಹೊತ್ತು ಸಮೀಪಿಸುತ್ತಿದ್ದ ಹಾಗೆಯೇ ರಂಗಣ್ಣ ಪುನಃ ಪ್ರಾನ ಮೋಷಕ್ಕೆ ಪ್ರಾರಂಭಿಸಿದ. ಶಿವಸ್ವಾಮಿ ಬೈದು ಬಲವಂತ ಮಾಡಿದ. ರಂಗಣ್ಣ ಸೈಕಲ್ ಹತ್ತಿಕೊಂಡು ಹೊರಟ.

*   *   *   *

ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ ಹೋಟಲಿನಿಂದ ಊಟ ಬಂತು.

ಶಿವಸ್ವಾಮಿ ಬೆಳಿಗ್ಗೆ ಎದ್ದವನು, ರೂಮು ಬಿಟ್ಟು ಎಲ್ಲೂ ಹೊರಡಲಿಲ್ಲ. ಅವನಿಗೆ ಮನಸ್ಸಿನಲ್ಲಿ ಶಾಂತಿಯಿಲ್ಲ; ಏನೊ ತಳಮಳ. ತೀರಿಹೋದ ತಾಯಿ, ತಬ್ಬಲಿ ತಂಗಿತಮ್ಮಂದಿರು, ದೂರದಲ್ಲಿರುವ ಮಡದಿ, ಎಲ್ಲಾ ಇವನ ಮನಸ್ಸನ್ನು ದಿಕ್ಕುದಿಕ್ಕಿಗೆ ಎಳೆಯತೊಡಗಿದರು. ಸುಮ್ಮನೆ ಹಾಸಿಗೆಯ ಮೇಲೆ ಮಲಗಿ, ಅಂತರ್ಮುಖನಾಗಿ, ಯೋಚಿಸತೊಡಗಿದ. ಕಣ್ಣಲ್ಲಿ ನೀರು ತುಂಬಿ ಬಂತು. ತಾಯಿಯ ಸ್ಮರಣೆಗೆ ಅದೇ ಯುಗಾದಿಯು ಕಾಣಿಕೆಯಾಯಿತು...."ಮನೆಯಲ್ಲಿ ಹುಡುಗರು....ಅಮ್ಮ ಇದ್ದಿದ್ದರೆ ಅವರಿಗೆಲ್ಲಾ ನೀರೆರೆಯುತ್ತಿದ್ದಳು....ಆ ತಬ್ಬಲಿಗಳ ಪಾಡು ಏನೋ!" ಎಂದು ಚಿಂತಿಸತೊಡಗಿದ....ಇದ್ದಕ್ಕಿದ್ದ ಹಾಗೆಯೇ ಬಾಗಿಲು ತಟ್ಟಿದ ಹಾಗಾಯಿತು. "ಪೋಸ್ಟ್!" ಎಂದು ಕೂಗು ಕೇಳಿತು. ಎದ್ದು ಬಾಗಿಲು ತೆರೆದ. ಟಪಾಲಿನವನು ಇವನ ಕೈಗೆ ಎರಡು ಕವರುಗಳನ್ನು ಕೊಟ್ಟು ಹೋದ. ಒಂದು ಇವನಿಗೆ, ಇನ್ನೊಂದು ರಂಗಣ್ಣನಿಗೆ ಬಂದಿತ್ತು. ರಂಗಣ್ಣನ ಕಾಗದವನ್ನು ಮೇಜಿನ ಮೇಲಿಟ್ಟು, ತನ್ನ ಕಾಗದವನ್ನು ಒಡೆದ. ಅದು ಅವನ ಹೆಂಡತಿಯ ಕಾಗದ. ಅದರಲ್ಲಿ ಎಲ್ಲರಿಗೂ ಹೇಳಬಹುದಾದ ಭಾಗ ಹೀಗೆ ಇತ್ತು—

'........ನಾಳೆ, ಈ ಕಾಗದ ನಿಮಗೆ ತಲುಪೋ ಹೊತ್ತಿಗೆ, ಇಲ್ಲಿ ನಾವೆಲ್ಲಾ ಊಟಕ್ಕೆ ಕೂತಿರ್ತೀವಿ. ಆದರೆ ನೀವು ಇಲ್ಲಿ ಇಲ್ಲಾ—ಎಂದು ವ್ಯಾಕುಲವಾಗಿದೆ. ಬಂದಿದ್ದರೆ ಚೆನ್ನಾಗಿತ್ತು. ಬಡವಳ ಮೇಲೆ ದಯ

ಬರಲಿಲ್ಲ. ನಾನು ಇಲ್ಲಿದ್ದರೂ, ನನ್ನ ಮನಸ್ಸೆಲ್ಲಾ ನಿಮ್ಮ ಬಳಿಯೇ ಇದೆ. ನಾಳೆ ಎಲ್ಲಾ ನಿಮ್ಮ ಯೋಚನೇಲೇ ಕಾಲ ಕಳೀತೀನಿ. ನೀವು? ನಾಳೆ ನಿಮಗೂ ಎಲ್ಲಾದರೂ ಒಳ್ಳೇ ಊಟ ಸಿಗಲಿ—ನಿಮ್ಮ ಮನಸ್ಸೂ ಸಂತೋಷವಾಗಿರಲಿ, ನನ್ನ ಹತ್ರ ಇರಲಿ—ಎಂತ, ದೇವರಲ್ಲಿ ಈಗಿನಿಂದ ಬೇಡಿಕೊಳ್ಳುತ್ತಿದ್ದೇನೆ. ನೀವು ಯುಗಾದೀನ ಹೇಗೆ ಕಳೆದಿರಿ—ಅನ್ನೋದಕ್ಕೆ ನಾಳೇನೇ ಕಾಗದಾ ಹಾಕ್ಬೇಕು—ಇಲ್ಲವಾದರೆ ನನ್ನಾಣೆ. ಮರೀಬೇಡಿ—ಖಂಡಿತ ಮರೀಬೇಡಿ.

ನಿಮ್ಮ,

ರಮಾ.'

ಶಿವಸ್ವಾಮಿ ಕಾಗದ ಓದಿದ; ಕಣ್ಣಿಗೆ ಒತ್ತಿಕೊಂಡ. ಪುನಃ ಓದಿದ; ತುಟಿಗೆ ಒತ್ತಿಕೊಂಡ. ಕಾಗದದಲ್ಲಿದ್ದ ಅವಳ ಹಾರೈಕೆಗೂ ಇಂದಿನ ಅವನ ಮನಸ್ಸಿನ ಸ್ಥಿತಿಗೂ ಇದ್ದ ಅಂತರವನ್ನು ನೋಡಿ ಅವನಿಗೆ ನಗು ಬಂತು. ಹಾಸಿಗೆಯ ಮೇಲೆ ಮಲಗಿ, ಅದನ್ನು ಇನ್ನೂ ನಾಲ್ಕು ಸಲ ಓದಿದ. ಹೆಂಡತಿಯ ಪ್ರೇಮದ ಕಾಗದದಿಂದಲೂ ಅವನ ಮನಸ್ಸು ತಿಳಿಯಾಗಲಿಲ್ಲ—ಶಾಂತಿ ಮೂಡಲಿಲ್ಲ. ಹಾಸಿಗೆ ಬಿಟ್ಟು ಏಳುವುದಕ್ಕೆ ಬೇಸರ. ಊಟದ ಕಡೆ ಮನಸ್ಸು ಹೋಗಲೇ ಇಲ್ಲ. ಒಂಟಿಯಾಗಿ ತಿನ್ನುವುದೇ ಕಷ್ಟ; ಅದರಲ್ಲೂ ಮನಸ್ಸು ಬೇರೆ ಕಲಕಿಹೋಗಿದೆ.... "ಹುಂ! ಏನು ಊಟವೋ! ಇವತ್ತೊಂದು ದಿನ ಇಲ್ಲದಿದ್ದರೇನಾಯ್ತು!" ಎಂದು ತನಗೆ ತಾನೇ ಹೇಳಿಕೊಂಡ....ಹಾಗೆಯೇ ಮಲಗಿದ್ದ; ತೂಕಡಿಕೆ ಬರುವ ಹಾಗಾಯಿತು. ಅವನ ಜ್ಞಾನವು ಎಚ್ಚರ–ನಿದ್ರೆಗಳ ಮಧ್ಯೆ ತೂಗಾಡಲಾರಂಭಿಸಿತು.

*    *    *    *

ಪುನಃ ಇದ್ದಕ್ಕಿದ್ದ ಹಾಗೆಯೇ ಯಾರೋ ಬಾಗಿಲು ತಟ್ಟಿದ ಹಾಗಾಯಿತು. ಶಿವಸ್ವಾಮಿ ಎದ್ದುಹೋಗಿ ಬಾಗಿಲು ತೆರೆದ. ಬಂದವರು,

"ರಂಗಣ್ಣ ಇದ್ದಾನೆಯೆ, ಸಾರ್?" ಎಂದು ಕೇಳಿದರು.

ಶಿವಸ್ವಾಮಿ: "ಇಲ್ಲಾ, ಸಾರ್; ಅವನು ಬೆಳಿಗ್ಗೆ ಅವನ ಭಾವನವರ ಮನೆಗೆ ಊಟಕ್ಕೆ ಹೋದ—ಇನ್ನೂ ಬಂದಿಲ್ಲ, ಸಾರ್."

"ಇಲ್ಲಾ, ಸಾರ್; ನಾನೇ ಅವನ ಭಾವ. ಅವನು ಬರಲೇ ಇಲ್ಲ, ಸಾರ್! ನಿಮ್ಮನ್ನೂ ಕರಕೊಂಡು ಬರೋ ಹಾಗೆ ಹೇಳಿದ್ದೆ. ನೀವೂ ಬರಲಿಲ್ಲ, ಅವನೂ ಬರಲಿಲ್ಲ. ಮಧ್ಯಾಹ್ನ ಒಂದು ಗಂಟೆ ತನಕ ಕಾದಿದ್ದೆವು, ಸಾರ್. ಆಮೇಲೆ ಊಟ ಮಾಡಿಬಿಟ್ಟೆವು. ಈಗಾಗಲೆ ಮೂರು ಗಂಟೆಯಾಯಿತು! ಇನ್ನೂ ಬರಲಿಲ್ಲವಲ್ಲಾ—ಹೇಗಿದ್ದಾನೆಯೋ—ಎಂತ ಹುಡುಕಿಕೊಂಡು ಬಂದೆ, ಸಾರ್."

"ಅದೇನೋ ಸಾರ್, ಇಲ್ಲಿಂದ ಊಟಕ್ಕೆ ಅಂತಾನೇ ಹೊರಟ; ಬೈಸಿಕಲ್ ತಗೊಂಡು ಹೋದ...."

"ತಾವೇಕೆ ಸಾರ್, ಬರಲಿಲ್ಲ?"

"ನಾನೆಲ್ಲೋ ಒಪ್ಪಿಕೊಂಡುಬಿಟ್ಟದ್ದೆ, ಸಾರ್—ಅವನಿಗೆ ಗೊತ್ತಿಲ್ಲದೆ ಹೇಳಿಬಿಟ್ಟ."

"ಇನ್ನೆಲ್ಲಿ ಹೋಗಿದ್ದಾನು?—ತಮಗೆ ತಿಳೀದೆ?"

"ಇಲ್ಲಾ, ಸಾರ್—ಎಲ್ಲಿ ಹೋದನೋ ತಿಳೀದಲ್ಲಾ—ಬನ್ನಿ ಸಾರ್, ಒಳಗೆ."

"ಇಲ್ಲಾ ಸಾರ್, ಹೊರಡುತ್ತೀನಿ. ಅವನು ಬಂದ ಕೂಡಲೆ ನಾನು ಬಂದಿದ್ದೆ—ಅಂತ ಸ್ವಲ್ಪ ತಿಳಿಸಿಬಿಡಿ, ಸಾರ್....ನಮಸ್ಕಾರ."

* * * *

ಅವರು ಹೊರಟುಹೋದ ಒಂದು ಕ್ಷಣದಲ್ಲಿ, ಶಿವಸ್ವಾಮಿಯ ಮನಸ್ಸಿಗೆ ಎಲ್ಲಾ ಮಿಂಚಿನ ವೇಗದಿಂದ ಹೊಳೆಯಿತು...."ಕೊನೆಗೂ ರಂಗಣ್ಣ ಚಕ್ಕರ್ ಕೊಟ್ಟೇಬಿಟ್ಟ!........Rascal" ಅಂದುಕೊಂಡ.

ಹಾಗೆಯೇ ಹಾಸಿಗೆಯ ಮೇಲೆ ಬಿದ್ದುಕೊಂಡು, ರಂಗಣ್ಣನ ಸ್ನೇಹದ ಆಳವನ್ನು ಅಳೆಯತೊಡಗಿದ. ಶುದ್ಧವಾದ ಸ್ನೇಹವು ಯಾವ ಯಾವ ತೆರನಾಗಿ ವ್ಯಕ್ತವಾಗಬಹುದು? ಎಷ್ಟು ಆಳಕ್ಕಿಳಿಯಬಹುದು? ಅಥವಾ, ಎಷ್ಟು ಎತ್ತರಕ್ಕೆ ಹತ್ತಬಹುದು?—ಎಂಬ ಯೋಚನೆಗಳು ಅವನ ತಲೆಯಲ್ಲಿ ಸುಳಿಯಲಾರಂಭಿಸಿದುವು. ಆ ಒರಟು ಮುಖದ ಹಿಂದೆ ಎಂತಹ ನಯವಾದ ಸ್ನೇಹ ಇದೆ ಎಂದು, ಶಿವಸ್ವಾಮಿಗೆ ಇದುವರೆಗೂ ತಿಳಿದಿರಲಿಲ್ಲ ಇಂದು ಅವನು

ಮಮತೆಯನ್ನು ಸವಿದ. ಇದು ಸ್ನೇಹವೋ, ಹುಚ್ಚೋ?—ಎಂದು ಅವನಿಗೆ ಭ್ರಮೆಯಾಯಿತು. "ಹುಚ್ಚು! ಹುಚ್ಚು!....ಸ್ನೇಹ, ಪ್ರೇಮ—ಒಲವು, ಪ್ರಣಯ ಎಲ್ಲಾ ಒಂದು ಎಲ್ಲೆಯನ್ನು ದಾಟಿದಮೇಲೆ ಹಾಗೇ ಸರಿ!........... ಒಳ್ಳೇ ಯುಗಾದಿ ಆಯ್ತು ನಮಗೆ!....ಒಳ್ಳೇ ಉಡುಗೆರೆ ಕೊಟ್ಟ ರಂಗಣ್ಣ! ನಾನೇನು ಕೊಡಬಲ್ಲೆ?" ಎಂದು ಮನಸ್ಸಿನಲ್ಲೇ ಮಾತಾಡಿಕೊಂಡ. ಅವನಿಗೆ ಮುಂದೆ ಯೋಚನೆ ಹರಿಯಲಿಲ್ಲ. "ಹುಂ, ಏನೋ ಕೊಡಕು!" ಅಂದು ಕೊಂಡು ದೊಡ್ಡದಾಗಿ ನಿಟ್ಟುಸಿರುಬಿಟ್ಟ. "ರಂಗು, ರಂಗು" ಎಂದು ಎರಡು ಸಲ ಅಂದ. ಅವನ ಹೃದಯದಲ್ಲಿ ಸುಖವೂ ದುಃಖವೂ ಬೆರೆತು, ಅವನ ಕಣ್ಣಾಲಿಗಳು ನೀರಿನಲ್ಲಿ ತೇಲಲಾರಂಭಿಸಿದುವು. ಅವನು ಕಣ್ಣೀರನ್ನು ತಡೆಯ ಲಾರದೆ—ಅಲ್ಲ—ತಡೆಯಲೊಲ್ಲದೆ—ಹೋದ. ಅದು ದುಃಖದ ನೀರಲ್ಲ; ಅತಿ ಮಮತೆಯ, ಮಿತಿಮೀರಿದ ಸ್ನೇಹದ, ಕಾಣಿಕೆಯ ಹನಿಗಳು ಅವು. ಅವನ್ನು ತಡೆಯುವುದೆ?—ಆಗದು! ಹಾಸಿಗೆಯ ಮೇಲೆ ಮಲಗಿ ಸುಮ್ಮನೆ ಕಣ್ಣೀರನ್ನು ಸುರಿಸಿದ. ಅದೆಷ್ಟು ಸುರಿಸಿದನೋ ದೇವರೇ ಬಲ್ಲ. ಹಿಂದೆ—ಎರಡು ವರ್ಷಗಳ ಹಿಂದೆ—ತಾಯಿ ತೀರಿಹೋದಾಗ, ಇದೇ ರೀತಿಯಾಗಿ ಕಣ್ಣೀರು ಹರಿದಿತ್ತು. ತಾಯಿಯಂತೆ ಇತರರೂ ಕರುಳನ್ನು ಸೆಳೆಯಬಲ್ಲರು—ಎಂದು ಅವನಿಗೆ ಇದು ವರೆಗೂ ತಿಳಿದಿರಲಿಲ್ಲ. ಇಂದು—ಎರಡು ವರ್ಷಗಳ ಮೇಲೆ—ಈ ಯುಗಾದಿ ದಿನ, ರಂಗಣ್ಣ ಅವನ ಹೃದಯದ ಅಂತರಾಳವನ್ನು ಸೋಂಕಿ, ಅವನ ಮಮ ತೆಯ ಚಿಲುಮೆಯನ್ನು ಬಗೆದ. ಆ ಚಿಲುಮೆ, ಅವನ ಕಣ್ಣುಗಳಲ್ಲಿ ಯಾವ ತಡೆಯೂ ಇಲ್ಲದೆ, ಉಕ್ಕಿ ಉಕ್ಕಿ ಹರಿಯಿತು.

* * * *

ಸಾಯಂಕಾಲ ಐದು ಗಂಟೆಯಾಯಿತು. ರಂಗಣ್ಣನ ಸುಳಿವೇ ಇಲ್ಲ! ಶಿವಸ್ವಾಮಿಗೆ ಕಳವಳ ಹೆಚ್ಚಾಯಿತು...."ಸರಿ! ಅಲೆದಲೆದು ಜೋಲುಮುಖ ಹಾಕಿಕೊಂಡು ಬರ್‍ತಾನೆ! ಹೋಟಲಲ್ಲಿ ತಿಂಡಿ ಕಾಫೀನಾದರೂ ತಗೊಂಡು ಇರ್‍ತಾನೋ ಇಲ್ವೋ?....ಏನೋ!....ಹುಚ್ಚು ಗಿರಾಕಿ!!"—ಹೀಗೆಂದು ಯೋಚಿಸಿ, ಜೇಬಿನಲ್ಲಿ ದುಡ್ಡು ಹಾಕಿಕೊಂಡು, ಮಾರ್ಕೆಟ್ ಕಡೆ ಹೋಗಿ, ಒಂದಿಷ್ಟು ಹಣ್ಣು—ಹೋಟಲಿಂದ ಸ್ವಲ್ಪ ತಿಂಡಿ ತಂದ. ಆಮೇಲೆ ರೂಮು ಬಿಟ್ಟು ಕದಲಲೇ ಇಲ್ಲ. ಮೊದಲೇ ಕಲಕಿಹೋಗಿದ್ದ ಅವನ ಹೃದಯ

ಈ ಸ್ನೇಹದ ಅಪೂರ್ವವಾದ ಅನುಭವದಿಂದ ಮತ್ತೂ ಕಲಕಿಹೋಯಿತು. ಚಿತ್ತವು ನಾನಾ ರೀತಿಯಲ್ಲಿ ನಾನಾ ಕಡೆಗೆ ಓಡತೊಡಗಿತು.

* * * *

ರಾತ್ರಿ ಎಂಟು ಗಂಟೆಯಾಯಿತು. ಹೋಟಲಿಂದ ಊಟವೂ ಬಂತು. ರಂಗಣ್ಣ ಮಾತ್ರ ಇನ್ನೂ ಬರಲಿಲ್ಲ. ಶಿವಸ್ವಾಮಿ ಈಸೀಛೇರ್ ಮೇಲೆ ಕುಳಿತಿದ್ದವನು ಎದ್ದ. ಎದ್ದು, ರೂಮಿನಲ್ಲೇ ಹುಚ್ಚನಂತೆ ತಿರುಗಾಡಲಾರಂಭಿಸಿದ. ಆಮೇಲೆ ಒಂದು ಯೋಚನೆ ಹೊಳೆಯಿತು ಅವನಿಗೆ. "ಏನು, ಸಿನೀಮಾ ಗಿನೀಮಾಕ್ಕೇನಾದರೂ ಎದ್ದುಬಿಟ್ಟನೋ?" ಎಂದು ಗೊಣಗುತ್ತ, ಬಾಗಿಲು ತೆರೆದು ಹೊರಗೆ ಬಂದ. ಆ ಸಮಯಕ್ಕೆ ಸರಿಯಾಗಿ, ರಂಗಣ್ಣ ಸೈಕಲ್ಲನ್ನು ತಳ್ಳಿಕೊಂಡು, ಕಾಲುಗಳನ್ನು ಎಳೆದೆಳೆದು ಹಾಕುತ್ತ, ನಿಧಾನವಾಗಿ ಬಂದ. ಸೈಕಲ್ ಮುಂದುಗಡೆ ಒಂದು ವಸ್ತ್ರದ ಗಂಟು ತೂಗಾಡುತ್ತಿತ್ತು. ರಂಗಣ್ಣ ಸೈಕಲ್ಲನ್ನು ಒಳಗೆ ತಂದಿಟ್ಟು, "ಉಸ್ಸಪ್ಪ!" ಎಂದು ಈಸೀಛೇರ್ ಮೇಲೆ ಕುಸಿದುಬಿಟ್ಟ. ಶಿವಸ್ವಾಮಿ ಹಾಸಿಗೆ ಸುರುಳಿಯ ಮೇಲೆ ಕುಳಿತ. ಇಬ್ಬರಿಗೂ ಸ್ವಲ್ಪ ಹೊತ್ತು ಮಾತು ಹೊರಡದಾಯ್ತು. ರಂಗಣ್ಣನ ಕಣ್ಣು ಅರ್ಧ ಮುಚ್ಚಿತ್ತು. ಸ್ವಲ್ಪ ಮುಗುಳ್ನಗೆ ನಕ್ಕ. ಶಿವಸ್ವಾಮಿ ಅದನ್ನು ನೋಡಿ,

"ಏನ್ರಾಜಾ! ಯುಗಾದಿ ಬಲು ಜೋರಾಗಿ ನಡೆದಿರುವ ಹಾಗೆ ಕಾಣುತ್ತೆ!" ಎಂದ.

ರಂಗಣ್ಣ ಕಣ್ಣನ್ನು ದೊಡ್ಡದಾಗಿ ತೆರೆದು, ತಾರಸಿಯ ಮೇಲೆ ದೃಷ್ಟಿಯನ್ನು ನೆಟ್ಟು, ಸ್ವಲ್ಪ ನಕ್ಕ ಹಾಗೆ ಮಾಡಿ, "ಹೂಂ,....ಸ್ವಲ್ಪ ಜೋರೇ!" ಎಂದ.

ಸುಳ್ಳು ಎಷ್ಟು ದೂರ ಹೋಗುತ್ತೆ ನೋಡಬೇಕೆಂದು,

"ಊಟ ಜೋರಾಗಿತ್ತೂಂತ ಕಾಣುತ್ತೆ! ತಂಗೀ ಮನೆ, ಕೇಳ್ಬೇಕೇ! ....ಏನು ಊಟ?" ಎಂದು ಕೇಳಿದ ಶಿವಸ್ವಾಮಿ.

"ಚಿರೋಟಿ ಮಾಡಿದ್ದರು. ಖೀರು, ಜೋಂಟ, ಬಿಸಿಬೇಳೇ ಅನ್ನ. ಸರಿ, ಇನ್ನುಳಿದದ್ದು ಗೊತ್ತೇ ಇದೆಯಲ್ಲ—common factors! ಕೋಸುಂಬರಿ, ಪಲ್ಯ, ಹುಳಿ— ಇತ್ಯಾದಿ."

"ಇಷ್ಟು ಹೊತ್ತೇಕಾಯ್ತು?"

" ಎರಡು ಗಂಟೆಗೆ ಊಟ ಮುಗೀತು ; ಭರ್ಜರಿ ಊಟ! ಉಂಡೋನೆ ಮಲಗಿಬಿಟ್ಟೆ. ಎದ್ದಾಗ ಆರು ಗಂಟೆಯಾಗಿತ್ತು. ಟೀ ತಕ್ಕೊಂಡು ವಾಪಸು ಬರ್‍ತಾ ಇದ್ದೆ. ಮೆಜೆಸ್ಟಿಕ್‌ನಲ್ಲಿ Buster Keaton in '*Free and Easy*' ಇತ್ತು. ನುಗ್ಗಿದೆ. ಎಂಟೂಮುಕ್ಕಾಲಿಗೆ ಮುಗೀತು. ಇಗೋ, ಇಲ್ಲಿ ಒಂಬತ್ತಕ್ಕೆ ಹಾಜರು."

ಈ ಕಾಗಕ್ಕ–ಗುಬ್ಬಕ್ಕನ ಕಥೆಯನ್ನು ಕೇಳಿ, ಶಿವಸ್ವಾಮಿಯ ಹೊಟ್ಟೆಯಲ್ಲಿನ ನಗು ನುಗ್ಗಿಬರಲೆಳಸುತ್ತಿತ್ತು. ಬಲು ಕಷ್ಟದಿಂದ ತಡೆದುಕೊಂಡ. ಆಮೇಲೆ,

" ಸರಿ, ಈ ಊಟದ ವಿವರಣೆ ಹೇಳಿದೆಯಲ್ಲಾ, ಇದು—ಯಾರ ಮನೇಲಿ ? " ಎಂದು ಕೇಳಿದ.

" ಇದೇನೋ !....' ಯಾರ ಮನೇಲಿ ' ಅಂದ್ರೆ ?—ನನ್ನ ಭಾವನವರ ಮನೇಲಿ ! " ಎಂದು ಹೇಳಿ, ರಂಗಣ್ಣ ಎದ್ದು ಕೆಮ್ಮುತ್ತ, ಉಗುಳುವವನಂತೆ ಕಿಟಕಿಯ ಸಮೀಪಕ್ಕೆ ಹೋದ. ಅವನಿಗೆ, ಸಿಕ್ಕಿಬೀಳುವುದರಲ್ಲಿರುವ ಕಳ್ಳನ ಮನಸ್ಸಿನ ಅನುಭವವಾಗಿತ್ತು. ಶಿವಸ್ವಾಮಿ ನಗುತ್ತ,

" ಲೋ, ಕಿಲಾಡಿ !—ಹೀಗ್ತಿರುಗು ! " ಎಂದ.

ರಂಗಣ್ಣ ಸರ್‍ರನೆ ತಿರುಗಿದ. ಅವನ ಹುಬ್ಬು ಗಂಟುಬಿದ್ದಿತು. ಶಿವಸ್ವಾಮಿ ಅವನ ಮುಖವನ್ನೇ ನೋಡುತ್ತ,

" ಪರವಾಗಿಲ್ಲ !—ಒಳ್ಳೇ ಪ್ರಾರಂಭ ! " ಎಂದ.

" ಏನು ?....ಒಳ್ಳೇ ಪ್ರಾರಂಭ ? "

" ಸುಳ್ಳು ಹೇಳೋಕೆ ! "

" ಏನೋ, ಬಹಳ ಗುಂಭವಾಗಿ ಮಾತಾಡ್ತೀಯ ? "

" ಏನಿಲ್ಲ...ಮಧ್ಯಾಹ್ನ ಮೂರು ಗಂಟೆಗೆ—ನಿನ್ನ ಹುಡುಕಿಕೊಂಡು ಬಂದಿದ್ದರು."

" ಯಾರು ? "

" ಅದ್ಯಾರೋ ಗೊತ್ತಿಲ್ಲ—ನೀನು ನಿನ್ನ ಭಾವನವರ ಮನೆಗೆ ಊಟಕ್ಕೆ ಹೋದೆ ಅಂತ ಹೇಳಿದೆ. ಅದಕ್ಕೆ ಅವರು—"

" ಹುಂ ? "

"'ಇಲ್ಲಾ, ಸಾರ್—ನಾನೇ ಅವನ ಭಾವ'—"

ಶಿವಸ್ವಾಮಿ ಮಾತು ಮುಗಿಸುವುದಕ್ಕೆ ಮುಂಚೆ ರಂಗಣ್ಣ ದೊಡ್ಡದಾಗಿ ನಗುತ್ತ ಈಸೀಛೇರ್ ಮೇಲೆ ಧೊಪ್ಪನೆ ಕುಸಿದುಬಿಟ್ಟ.

* * * *

ಇಬ್ಬರೂ ತಿಂಡಿ–ಹಣ್ಣು ತಿನ್ನುತ್ತ ಮಾತನಾಡುತ್ತಿದ್ದರು.

"ನಮಗೆ ಈವಾಗ ಪ್ರಾರಂಭ—ಯುಗಾದಿ!" ಅಂದ ಶಿವಸ್ವಾಮಿ. ರಂಗಣ್ಣ ಮಾತನಾಡಲಿಲ್ಲ. ಶಿವಸ್ವಾಮಿ ಪುನಃ,

"ಈ ಯುಗಾದೀನ ಎಂದೆಂದಿಗೂ ಮರೆಯೋ ಹಾಗಿಲ್ಲ!" ಅಂದ.

ರಂಗಣ್ಣ ಕಿತ್ತಲೆಹಣ್ಣಿನ ತೊಳೆಯನ್ನು ಬಿಡಿಸಿ—ಬಿತ್ತವನ್ನು ತೆಗೆದು, ನಿಧಾನವಾಗಿ ತಿನ್ನುತ್ತಿದ್ದ; ಮಾತಿಲ್ಲ. ಶಿವಸ್ವಾಮಿ ಪುನಃ,

"ಲೋ, ಒಳ್ಳೇ ಯುಗಾದಿ ದಿನವೇ ಪ್ರಾರಂಭಿಸಿದೆಯಲ್ಲ, ಸುಳ್ಳು ಹೇಳೋಕೆ!" ಅಂದ.

"ಮರೆತುಬಿಟ್ಟೆಯಾ? ನೀನೇ ಹೇಳಿದೆ ಬೆಳಿಗ್ಗೆ—ಸುಳ್ಳು ಹೇಳೋಕೆ ಇವತ್ತೇ ಬಹಳ ಶುಭ ದಿನ ಅಂತ!"

"ಹೌದು—ಹೌದು, ರಂಗು. ಇದು ಬಹಳ ಶುಭ ದಿನ!—ಬಹಳ ಸುಖದ ದಿನ! ಸುಳ್ಳೋ ಪಳ್ಳೋ—ಊಟವೋ ಉಪವಾಸವೋ....ಸುಖದ ದಿನವೇ ಶುಭದ ದಿನ!"

ರಂಗಣ್ಣ ನಗುತ್ತ, "ಬೆಳಿಗ್ಗೆ, ಸಾಯಂಕಾಲಕ್ಕೆ ನೀನು ಇಷ್ಟು ಬದಲಾಯಿಸಿರುತ್ತೀ ಎಂದು ಯೋಚಿಸಿರಲಿಲ್ಲ, ಶಿವು" ಎಂದ.

"ಏನು ಬದಲಾವಣೆ?"

"ನಾನು ಬಂದಾಗ ರೂಮೆಲ್ಲಾ ಕೊಚ್ಚೆಯಾಗಿರುತ್ತೆ, ಅಂತ ತಿಳಿದಿದ್ದೆ!"

"ಹೇಗೆ?"

"ನಿನ್ನ ಕಣ್ಣೀರಿಂದ!"

"ಅದಿರಲಿ, ನೀನು ಯಾಕೆ ಹೋಗಲಿಲ್ಲ?"

"ನೀನು ಯಾಕೋ ಹೀಗಾಡ್ತೀಯ!—ಬೆಲ್ಲ ತಿನ್ನುತ್ತಿರಬೇಕಾದರೆ ಬೇವು ಸೇರಿಸುತ್ತೀಯಲ್ಲ!"

"ಹೋಗಲಿ, ವಾಪಸು ಯಾಕೆ ಬರಲಿಲ್ಲ?"

"ಯಾಕೆ ಬರಲಿಲ್ಲವೋ ಏನೋ, ಆ ಪರಮಾತ್ಮನಿಗೇ ಗೊತ್ತು!"

"ಒಳ್ಳೇ ಪರಮಾತ್ಮ!........ಹೋಗಲಿ, ಎಲ್ಲೆಲ್ಲಿ ಅಲ್ದೆ ಹೇಳು."

"ಬಹಳ ಸುತ್ತಿದೆ—ಆದರೆ ತಮಾಷೆಯಾಗಿತ್ತು! ಎರಡು ಗಂಟೆ ತನಕ ಸಿಟಿ ಲಿಮಿಟ್ಸ್ ಬಿಡಲಿಲ್ಲ. ಮಾರ್ಕೆಟ್ ಹತ್ತಿರ ಕೋತಿ ಆಡಿಸೋದು ನೋಡಿದೆ. ಅಲ್ಲಿಂದ ಮೆಜೆಸ್ಟಿಕ್ ಸಿನಿಮಾ ಹತ್ತಿರ ಎರಡು ಗುಂಪು ನೋಡಿದೆ; ಒಂದು ದೊಂಬರಾಟ; ಇನ್ನೊಂದು ಹಾವಾಡಿಗನ ಆಟ. ಬಹಳ ಚೆನ್ನಾಗಿತ್ತೊ! ಅದರಲ್ಲೂ ಆ ದೊಂಬರ ಹುಡುಗಿ—ಓ!........"

"ನಿಧಾನ! ನಿಧಾನ! ಎಲ್ಲಾದರೂ ಎಚ್ಚರ ತಪ್ಪೀತು!"

"ನೀನು ನೋಡಿದ್ದರೆ ಏನು ಹೇಳುತ್ತಿದ್ದೆಯೋ!"

"ನಾನೂ ದೊಡ್ಡದಾಗಿ—ಓ!........ಅಂತಿದ್ದೆ!"

"ಆಮೇಲೆ ಹಾಸ್ಟಲಿಗೆ ಹೋದೆ........ಭೀಮಣ್ಣ ಹಬ್ಬದೂಟ ತಿಂದು ನಿದ್ದೆ ಹೊಡೀತಾ ಇದ್ದ. ಅವನನ್ನು ಎಬ್ಬಿಸಿ, ಏನೇನೋ ಕಾಡುಹರಟೆ ಹೊಡೀತಾ, ಐದು ಗಂಟೇತನಕ ಅಲ್ಲೇ ಇದ್ದುಬಿಟ್ಟೆ. ಆಮೇಲೆ ಸೈಕಲ್ ಹತ್ತಿಕೊಂಡು ಕಂಟೋನ್ಮೆಂಟ್ ಕಡೆ ಹೊರಟೆ. ಅಲ್ಲೊಂದು ಫುಟ್‌ಬಾಲ್ ಮ್ಯಾಚ್ ಆಗ್ತಿತ್ತು. ಅಲ್ಲಿ ಸ್ವಲ್ಪ ಹೊತ್ತಿದ್ದೆ. ಆರೂವರೇಗೆ ಕಬ್ಬನ್‌ಪಾರ್ಕಿಗೆ ಬಂದೆ. ಅಲ್ಲಿ, ಮನಸ್ಸಿನಲ್ಲೇ ದೊಂಬರ ಹುಡುಗಿ ಕೈಲಿ ಲಾಗಾ ಹಾಕಿಸುತ್ತ, ಎಂಟೂವರೆ ತನಕ ಕೂತಿದ್ದೆ. ಆಮೇಲೆ 'ಓ! ಲಕ್ಷ್ಮಣಾ'ಂತ ಗೂಡು ಸೇರಿಕೊಂಡೆ...."

"ಮತ್ತೆ, ಊಟ–ತಿಂಡಿ–ಗಿಂಡಿ....?"

"ಆ ದೊಂಬರ ಹುಡುಗಿ ನೋಡಿ ಹೊಟ್ಟೆ ತುಂಬಿದ ಹಾಗಾಯ್ತು!"

"ಸರಿ! ನಿನ್ನ ಹೆಂಡ್ತಿಗೆ ಹೇಳು!—ಹೊಟ್ಟೆಗೆ ಹಾಲು ಹುಯ್ಕೊಳ್ಳಲಿ! ....ಅರರೇ! ಸ್ವಲ್ಪ ತಡಿ, ಇನ್ನೂ ಮುಗಿದಿಲ್ಲ, ಯುಗಾದಿ!"

ಹೀಗೆಂದು ಹೇಳಿ, ಶಿವಸ್ವಾಮಿ ಎದ್ದು, ರಂಗಣ್ಣನ ಕಾಗದವನ್ನು ತೆಗೆದು, ಅವನ ಕೈಗೆ ಕೊಟ್ಟ.

ರಂಗಣ್ಣ ಅದನ್ನು ಒಡೆದು ಓದಿದ; ಓದಿದವನೇ ನೆಲದ ಮೇಲೆ ಉರುಳುರುಳಿ ನಗಲಾರಂಭಿಸಿದ. ಶಿವಸ್ವಾಮಿ, "ಏನೋ ವಿಚಾರ?" ಎಂದು ಕೇಳಿದ. ರಂಗಣ್ಣ ಎದ್ದು ಕುಳಿತು,

"ಏನೂ ಇಲ್ಲ, ಇದು ಒಳ್ಳೇ ಸಮಾಪ್ತಿ!—ನಮ್ಮ ಯುಗಾದೀಗೆ!" ಎಂದ.

"ಏನು?"

"ನನ್ನ ಧರ್ಮಾಂಗಿ, ನನಗೆ ಯುಗಾದಿ Greetings ಕಳ್ಸಿದಾಳೆ!—ಒಳ್ಳೇ ಯುಗಾದಿ!! ಹ ಹ್ಹ ಹ್ಹಾ! ನಮ್ಮ ಯುಗಾದಿ ಮೂಟೆಗೆ ಇದು ಚಿನ್ನದ ಮುದ್ರೆ! ಅಲ್ವೆ?"

"ಏನಪ್ಪಿ? ನನಗೂ ಒಂದು ಬಂದಿದೆ! ಅಲ್ಲದೆ, ನಾನು ಯುಗಾದೀನ ಹೇಗೆ ಕಳೆದೆ ಅನ್ನೋದಕ್ಕೆ detail ಆಗಿ ಕಾಗದ ಬರೀಬೇಕಂತೆ!"

"ಹೌದು! ನಮ್ಮ ಯುಗಾದಿ ಸ್ವಲ್ಪ detail-ಏ ಸರಿ!"

ಸ್ವಲ್ಪ ಹೊತ್ತು ಇಬ್ಬರೂ ಮಾತನಾಡಲಿಲ್ಲ. ಬಹುಶಃ ತಮ್ಮ ತಮ್ಮ ಮಡದಿಯರಿಗೆ ಕಾಗದ ಹೇಗೆ ಬರೆಯಬೇಕೆಂದು ಯೋಚಿಸುತ್ತಿದ್ದರೋ ಏನೋ! ಆಮೇಲೆ ರಂಗಣ್ಣ ದೊಡ್ಡದಾಗಿ ಆಕಳಿಸುತ್ತ, "ಸಾಕಾಗಿ ಹೋಗಿದೆಯೊ, ಬಿದ್ಕೋತೀನಿ" ಎಂದು ಎದ್ದು ಹಾಸಿಗೆ ಹಾಸತೊಡಗಿದ.

* * * *

ಇನ್ನೂ ದೀಪ ಆರಿಸಿರಲಿಲ್ಲ. ಇಬ್ಬರೂ ಯೋಚಿಸುತ್ತ, ನಿಶ್ಶಬ್ದವಾಗಿ ಮಲಗಿದ್ದರು. ಇದ್ದಕ್ಕಿದ್ದ ಹಾಗೆಯೇ ಶಿವಸ್ವಾಮಿ,

"ಲೋ, ನಿದ್ದೆ ಬಂತೇನೋ, ರಂಗೂ?" ಎಂದು ಕೇಳಿದ.

"ಅದು ಹೇಗೋ ಬರುತ್ತೇ? ಈ ಸೆಕೆ, ಈ ಸೊಳ್ಳೆಕಾಟ, ಜೊತೆಗೆ ನಿನ್ನ ಕಾಟ!.... ಇದರಲ್ಲಿ ನಿದ್ದೆ ಅಲ್ಲ, ಸಾವೂ ಹತ್ತಿರ ಬರೋಲ್ಲ!"

"ನನಗೊಂದು ಯೋಚನೆ ಬರ್ತಾ ಇದೆ."

"ದೊಡ್ಡದೋ, ಸಣ್ಣದೋ?"

"ಬಹಳ ವಿಚಿತ್ರವಾದ್ದು!"

"ಬೇಗ ಮುಗಿಸೋದಾದರೆ...."

"ಬಹಳ ತಮಾಷೆಯಾದ್ದು!"

"ಅದೇನು ಹೇಳು."

"ನೋಡು ರಂಗು, ಅದೊಂದು ಒಗಟೆಯಾಗಿದೆ ನನಗೆ."

"ಯಾವುದೋ?"

"'ಸ್ನೇಹ' ಅನ್ನೋದು."

"ಸರಿ! ಇದು ಬೆಳಗ ತನಕ ಆಗುತ್ತೆ! Good Night!....ದೀಪ ಆರಿಸು! ಅದಿದ್ದರೆ ಹುಚ್ಚು ಕೆರಳುತ್ತೆ!"

"ಅಲ್ಲಾ ರಂಗು, ಇಲ್ಲಿ ಕೇಳು—"

"ಮೊದಲು ದೀಪಾ ಆರಿಸು!"

ಶಿವಸ್ವಾಮಿ ದೀಪ ಆರಿಸಿದ.

"ಹುಂ, ಅದೇನು ಬೇಗ ಹೇಳಿ ಮುಗಿಸು!"

"ಸ್ನೇಹ ಹೆಚ್ಚೋ—ಪ್ರಣಯ ಹೆಚ್ಚೋ?"

ರಂಗಣ್ಣ ಆಕಳಿಸಿ, ಬಾಯಿಯ ಮುಂದೆ ಚಿಟಿಕೆ ಹೊಡೆಯುತ್ತ,

"ಆ ಸರ್ವಜ್ಞಮೂರ್ತಿಗೇ ಗೊತ್ತು!" ಎಂದ.

"ಇದಕ್ಕೆ—ಈ ಸ್ನೇಹಕ್ಕೆ, ಎಲ್ಲೆ ಇಲ್ಲಾಂತ ನನಗೆ ತೋರುತ್ತೆ. ಹೇಗೆ ಹುಟ್ಟುತ್ತೋ ಹುಟ್ಟುತ್ತೆ; ಹೇಗೆ ಬೆಳೆಯುತ್ತೋ ಬೆಳೆಯುತ್ತೆ—"

"ಹುಂ."

"ನಿಜವಾದ ಸ್ನೇಹದ ಮೂಲ, ಒಂದು ಜನ್ಮದ ಜ್ಞಾಪಕಕ್ಕೆ ಸಿಕ್ಕುವುದಲ್ಲ; ಒಂದು ಜನ್ಮದಲ್ಲಿ ಹುಟ್ಟಿ ಅದೇ ಜನ್ಮದಲ್ಲಿ ಸಾಯುವುದಲ್ಲ—ಸ್ನೇಹ."

"ಇದೇನೋ, ಜನ್ಮಾಂತರ ತೆಗೆದಲ್ಲೋ!"

"ಹೌದೋ, ಜನ್ಮಜನ್ಮಾಂತರಗಳನ್ನು ಹಾಯ್ದು ಹರಿಯುವ ತಿಳಿನೀರಿನ ತೊರೆ ಸ್ನೇಹ—ಎಂದು ನನಗೆ ತೋರುತ್ತೆ. ಇದಕ್ಕೆ ಮೊದಲು ಎಲ್ಲಿ? ಕೊನೆ ಎಲ್ಲಿ?—ಎಂದು ಯಾರು ಹೇಳಬಲ್ಲರು?"

"ಅದು ಯಾರಿಗೆ ಬೇಕು ಹೇಳು? ತಿಳಿನೀರಿನಲ್ಲಿ ಧುಮುಕಿ ಸ್ನಾನ ಮಾಡಿದ್ದೆಲ್ಲಾ ಒಂದು!"

"ನಮ್ಮ ದೇಹಕ್ಕೆ ಎಲ್ಲೆ ಇದೆ; It is limited ಅಲ್ವೆ?"

ರಂಗಣ್ಣ ಉತ್ತರ ಕೊಡಲಿಲ್ಲ.

"ನಿದ್ದೆ ಬಂತೇನೋ?"

"ಒಂದು ಕಣ್ಣಿಗೆ ಬಂದಿದೆ!"

"ಎಂಥ ವಿಚಿತ್ರ! ನೋಡು, ರಂಗು! ಅಣುವಿನಂಥ ದೇಹದಲ್ಲಿ, ಭೂಮಿ ಆಕಾಶಗಳನ್ನು ಆವರಿಸುವ ಸ್ನೇಹ ಅಡಗಬಹುದಲ್ಲಾ! ಜೀವನದಲ್ಲಿ ರುಚಿ

ಹುಟ್ಟಿಸುವುದು ಸ್ನೇಹ! ಕಷ್ಟ–ಸಂಕಟಗಳನ್ನು ಹಗುರ ಮಾಡುವುದು ಸ್ನೇಹ! ಸುಖಕ್ಕೆ ರಂಗು ಕೊಡುವುದು ಸ್ನೇಹ!........ಜೀವನದಲ್ಲಿ ನನ್ನ ಹಾದಿ ಯಾವುದೋ ?—ನಿನ್ನ ಹಾದಿ ಯಾವುದೋ ?........ಜನ್ಮಜನ್ಮಗಳನ್ನು ದಾಟಿದರೂ, ಪುನಃ ಪುನಃ ತಿಳಿಯಾದ ತೊರೆಯಲ್ಲಿ........ಒಟ್ಟಿಗೇ ಧುಮುಕ ಬಲ್ಲೆವಾದರೆ, ಓ, ರಂಗೂ!.... ಈ ಕ್ಷಣದಲ್ಲಿ ಇದೇ ನನ್ನ ಹಾರೈಕೆ—ರಂಗು!.... ರಂಗೂ, ರಂಗೂ! ಮಲಗಿಬಿಟ್ಟೆಯೇನೋ? ”

ರಂಗಣ್ಣ ಹಗುರವಾಗಿ ಗೊರಕೆ ಹೊಡೆಯುತ್ತ, ನಿದ್ರೆಯ ಆಳಕ್ಕೆ ಮೆಲ್ಲ ಮೆಲ್ಲನೆ ಇಳಿಯುತ್ತಿದ್ದ ; ದಿನವೆಲ್ಲಾ ಅನ್ನ ನೀರಿಲ್ಲದೆ ಆಲೆದ ಜೀವ!

ಶಿವಸ್ವಾಮಿಯ ಕಣ್ಣು ಒದ್ದೆಯಾಗಿತ್ತು. ಅವನು ನಾಳೆ ರವಾಗೆ ಬರೆಯುವ ಕಾಗದದ ಒಕ್ಕಣೆಯನ್ನು ಯೋಚಿಸುತ್ತ ಯೋಚಿಸುತ್ತ, ಹಾಗೇ ನಿದ್ದೆಹೋದ.

---

# ಅಶ್ವಾರೋಹಿ*

೧

" ದಾದಾ—"

" ಏನು ?.... ಏನು, ರಸೂಲ್ ? "

" ಕೇಳಿದಿರಾ ? "

" ಏನನ್ನು ?.... ಹೇಳು ? "

" ಔರಂಗಷಹನು ಹಿಂದೂ ಯಾತ್ರಿಕರ ಮೇಲೆ ಜೆಸಿಯಾ ತೆರಿಗೆ ಹಾಕಿರುವುದನ್ನು ! "

" ಕೇಳಿದೆ, ರಸೂಲ್.... ಕೇಳಿದೆ ! "

" ಅದನ್ನು ತಡೆಯುುವವರು ಯಾರೂ ಇಲ್ಲವೆ ? "

" ಯಾರು ತಡೆಯಬಲ್ಲರು, ಬೇಟಾ ? ಅವನು ಸರ್ವಶಕ್ತನಾಗಿದ್ದಾನೆ ! "

" ಏನಂದಿರಿ ?.... ಸರ್ವಶಕ್ತನೆ ?.... ಸ-ರ್ವ-ಶ-ಕ್ತ ! ! ಇಂತಹ ನೂರು ಔರಂಗರನ್ನು ನುಚ್ಚುನುರಿ ಮಾಡುವವನೊಬ್ಬನಿದ್ದಾನೆ !.... ದಾದಾ, ಅವನು ಸರ್ವಶಕ್ತ ! "

ಕ್ಷಣಕಾಲ ಇಬ್ಬರೂ ನೀರವ. ಆಮೇಲೆ,

" ಇಲ್ಲ ದಾದಾ, ಇನ್ನು ಒಂದು ದಿನವೂ ನಾನು ಈ ದೇಶದಲ್ಲಿರಲಾರೆ " ಎಂದ.

" ಬೇಟಾ !—ಬೇಟಾ !—ಏನಂದೆ ? "

" ಇನ್ನು ಒಂದು ದಿನವೂ ನಾನು ಈ ದೇಶದಲ್ಲಿರಲಾರೆ."

" ಎಲ್ಲಿಗೆ ಹೋಗುವೆ ?—ಕಂದಾ, ಏನು ಮಾಡುವೆ ? "

" ಈ ರಾಕ್ಷಸ ಚಕ್ರಾಧಿಪತ್ಯದ ಗಡಿಯನ್ನು ದಾಟ ಹೋಗುತ್ತೇನೆ !

---

* ಈ ಕಥೆಯು, ಅಮೇರಿಕಾ ದೇಶದ ಪ್ರಸಿದ್ಧ ಕತೆಗಾರನಾದ ಆಂಬ್ರೋಸ್ ಬಿಯರ್ಸ್ ಎಂಬಾತನ 'A Horseman in the Sky' ಎಂಬ ಕಥೆಯ ಮೂಲಭಾವವನ್ನು ತೆಗೆದುಕೊಂಡು, ಔರಂಗಷಹನ ಕಾಲದಲ್ಲಿ ನಡೆಯಿತೆಂಬಂತೆ ತೋರಲು ಬೇಕಾದ ಮಾರ್ಪಾಟುಗಳನ್ನು ಮಾಡಿ ಬರೆದುದಾಗಿದೆ.

ನಮ್ಮ ಜನರು ಮತಾಭಿಮಾನದಿಂದ ಹಿಂದುಗಳ ಮೇಲೆ ಮಾಡುತ್ತಿರುವ ಅತ್ಯಾಚಾರವು ಸಹನಾತೀತವಾಗಿದೆ!"

"ಅತ್ಯಾಚಾರವೇನು?"

"ಅ-ತ್ಯಾ-ಚಾ-ರ-ವೇ-ನು!....ಅಯ್ಯೋ, ಎಲ್ಲವೂ ಅತ್ಯಾಚಾರವೇ!! ಇದು ಅವರ ದೇಶ. ನಾವು ಇಲ್ಲಿಗೆ ಬಂದಿರುವುದು ಆಳುವುದಕ್ಕಲ್ಲ!—ಡಕಾಯಿತಿ ಮಾಡುವುದಕ್ಕೆ!! ಇಲ್ಲಿ ನೆಲಸಿ, ಇಲ್ಲಿಯವರನ್ನು ಕಾಲಿನಿಂದ ತುಳಿದು ಮಣ್ಣು ಮುಕ್ಕಿಸುತ್ತಿದ್ದೇವೆ!........ಇದು ಅತ್ಯಾಚಾರವಲ್ಲವೇನು? ಸ್ನೇಹದಿಂದ ಸಾಧಿಸುವುದನ್ನು ಕತ್ತಿಯಿಂದ ಸಾಧಿಸುತ್ತಿದ್ದೇವೆ! ವಿಜಯೋನ್ಮತ್ತರಾದ ನಮ್ಮ ಜನರ ಹಾವಳಿಯಲ್ಲಿ, ಅವರ ಹೆಂಗಸರ ಮಾನಮರ್ಯಾದೆಗಳಿಗೆ ಉಳಿಗಾಲವಿಲ್ಲದಂತಾಗಿದೆ!—ಅವರ ಗುಡಿಗೋಪುರಗಳು ನೆಲಸಮವಾಗುತ್ತಿವೆ!!........ಮಾನಾಪಹಾರವೂ, ಜಾತಿದ್ವೇಷವೂ ನಮ್ಮ ಮತಕ್ಕೆ ಚಿಹ್ನೆಯಾಗುವುದಾದರೆ, ಇದೋ ಇಂದೇ ಅದನ್ನು ಬಿಟ್ಟುಬಿಡುತ್ತೇನೆ! ಅಯ್ಯೋ! ದಾದಾ, ಹೆಸರಿನಲ್ಲಿ ಮಾತ್ರ ಮಹಮ್ಮದೀಯರು ನಮ್ಮವರು!.... ಈ ಸಮಯದಲ್ಲಿ ದೇವಪುರುಷನಾದ ಮಹಮ್ಮದನು, ಸ್ವರ್ಗೀಯವಾದ ತನ್ನ ಉಚ್ಚಸ್ಥಾನದಿಂದ, ಕ್ಷಣಕಾಲ ಮಾತ್ರ ಈ ನಿರ್ಭಾಗ್ಯ ಹಿಂದೂಸ್ಥಾನದ ಮೇಲೆ ತನ್ನ ಕರುಣಾಮಯ ದೃಷ್ಟಿಯನ್ನು ಬೀರಿದುದೇ ಆದರೆ, ಅವನ ಧರ್ಮಾನುಚರರೆಂದು ಹೇಳಿಕೊಳ್ಳುತ್ತ, ನಮ್ಮವರು ಮಾಡುತ್ತಿರುವ ಅತ್ಯಾಚಾರಗಳನ್ನು ನೋಡಿ ಅವನ ಎದೆ ಒಡೆದುಹೋದೀತು!!....ದಾದಾ, ಆಗದು! ಇನ್ನು ಇಲ್ಲಿ ಇದ್ದುಕೊಂಡು, ಇವರ ಅತ್ಯಾಚಾರಗಳಲ್ಲಿ ಭಾಗಿಯಾಗಲಾರೆ!"

ಮಗನ ಈ ವಾಕ್ಸರಣಿಯಿಂದ, ತಂದೆ ಅವಾಕ್ಕಾಗಿ, ದೃಷ್ಟಿಯನ್ನು ಬೇರೆ ಕಡೆಗೆ ತೇಲಿಸಿದನು. ಹುಬ್ಬುಗಳು ಗಂಟಿಕ್ಕಿದವು. ನಿಟ್ಟುಸಿರೊಂದು ಹೊರಟಿತು. ಆಮೇಲೆ ಮಗನನ್ನು ನೋಡುತ್ತ ಹೇಳಿದನು :

"ಬೇಟಾ—ರಸೂಲ್, ನಾನು ಬಾದಷಹನ ಉಪ್ಪನ್ನು ತಿಂದಿದ್ದೇನೆ. ಅವನ ಉಪ್ಪು ತಿಂದ ಈ ದೇಹವು ಅವನಿಗಾಗಿ ಮೀಸಲು. ನಾವು ಮಾಡುವ ಪಾಪದ ಅಥವಾ ಪುಣ್ಯದ ಕೆಲಸಗಳು ಅವನ ಆಜ್ಞೆ; ಅದರ ಫಲಾಫಲಗಳು ಅವನಿಗೆ. ರಸೂಲ್, ನೀನು ಸ್ವತಂತ್ರ; ನಿನಗೆ ತೋರಿದಂತೆ ಮಾಡು. ನಿನ್ನ ಯೋಚನೆ ತಪ್ಪೆಂದು ಹೇಳಲು ನನಗೆ ಬಾಯಿಯಿಲ್ಲ. ಆದರೆ ಇಷ್ಟು ಮಾತ್ರ

ಸತ್ಯ; ನೀನು ಮೊಗಲ್ ಸಾಮ್ರಾಜ್ಯಕ್ಕೆ ಮಾತ್ರ ದ್ರೋಹಿ!....ಹೋಗು!.... ನಿನ್ನಿಂದ ಅದಕ್ಕೆ ಆಗಬೇಕಾದುದೇನೂ ಇಲ್ಲ. ಆದರೆ....ರಸೂಲ್....ರಸೂಲ್, ನೀನು ಯಾವುದನ್ನು ಕರ್ತವ್ಯ—ಎಂದು ತಿಳಿಯುವೆಯೋ ಅದನ್ನು, ಏನು ಬಂದರೂ ಬಿಡದೆ ಮಾಡು!....ತಿಳಿಯಿತೇ?....ಹೋಗು!....ಹೋಗು!! ಬಾದಷಹನು ರಜಪೂತರ ಮೇಲೆ ಯುದ್ಧಸನ್ನಾಹ ಮಾಡುತ್ತಿದ್ದಾನೆ. ಯುದ್ಧ ಮುಗಿದಮೇಲೆ ನೋಡೋಣ!....ಬದುಕಿದ್ದರೆ!"

ರಸೂಲ್‌ಖಾನನ ಮುಖವು ಗಂಭೀರವಾಯಿತು. ಕ್ರಮೇಣ ಆರಕ್ತಮಯವಾಯಿತು. ಅವನು ಉಕ್ಕಿಬರಲೆಳಸುತ್ತಿದ್ದ ದುಃಖವನ್ನೂ ಕೋಪವನ್ನೂ ಹೃದಯಲ್ಲಿಯೇ ದಮನಮಾಡಲು ಸರ್ವಪ್ರಯತ್ನ ಮಾಡುತ್ತಿದ್ದನು. ಅವನ ಕಣ್ಣುಗಳು ಅಪೂರ್ವವಾದ ಹೊಳಪಿನಿಂದ ಮಿಂಚಿದುವು. ಮನಸ್ಥೈರ್ಯವು ಮುಖದಲ್ಲಿ ಒಡೆದು ಮೂಡಿತು. ನೀಳವಾಗಿ ನಿಟ್ಟುಸಿರುಬಿಟ್ಟು ಗಂಭೀರವಾಗಿಯೂ ನಿಧಾನವಾಗಿಯೂ ಹೇಳಿದನು:

"ಹೌದು, ದಾದಾ. ನಾನು ದ್ರೋಹಿ! ಯಾರಿಗೆ?....ದ್ರೋಹಿಗಳಿಗೆ!! ಯಾರು ದೇವಪುರುಷನಾದ ಪೈಗಂಬರನ ಧರ್ಮಕ್ಕೆ ದ್ರೋಹಿಗಳೋ ಅವರಿಗೆ!"

ಕ್ಷಣಕಾಲ ಸುಮ್ಮನಿದ್ದು ಕಂಪಿತ ಕಂಠದಿಂದ ಕೇಳಿದ:

"ಅಪ್ಪಾ, ನಿನಗೆ ನನ್ನ ಮೇಲೆ ಸಿಟ್ಟಿಲ್ಲವಷ್ಟೆ?"

"ಕಂದಾ, ನಿನ್ನ ಮಾತುಗಳು ಒಂದೊಂದೂ ಯಾವ ಉತ್ತರಕ್ಕೂ ಆಸ್ಪದ ಕೊಡುವಂತಿಲ್ಲ; ಇನ್ನು ಸಿಟ್ಟು ಹೇಗೆ ಬಂದೀತು, ರಸೂಲ್?.... ಸಿಟ್ಟಿಲ್ಲ....ಮಗೂ, ಸಿಟ್ಟಿಲ್ಲ?"

* * * *

ಮರುದಿನ ಪ್ರಭಾತದಲ್ಲಿ, ರಸೂಲ್‌ಖಾನನು ದೇಶತ್ಯಾಗಿಯಾಗಲನುವಾದನು. ಅವರ ಮನೆಯ ಮುಂದೆ, ಸುಂದರವೂ ಬಲಿಷ್ಠವೂ ಆದ ಕುದುರೆಯೊಂದು ಸವಾರಿಗೆ ಸಿದ್ಧವಾಗಿ ನಿಂತಿತ್ತು. ಮನೆಯೊಳಗಿನಿಂದ ತಂದೆಮಕ್ಕಳಿಬ್ಬರೂ ಹೊರಗೆ ಬಂದರು. ಬಂದವರೇ ಒಬ್ಬರನ್ನೊಬ್ಬರು ತಬ್ಬಿಕೊಂಡರು. ರಸೂಲನು ಅವನ ತಂದೆಗೆ ಏಕಮಾತ್ರ ಪುತ್ರ. ಇಪ್ಪತ್ತು ವರ್ಷಗಳು ತಂದೆಯ ಕಣ್ಣಿಗೆ ರತ್ನದಂತಿದ್ದ ಆ ವೀರ ಯುವಕನು, ಕ್ಷಿಪ್ರದಲ್ಲಿಯೇ ತಾಯಿ–ತಂದೆ, ಮನೆ–ಮಠ, ಬಂಧು–ಮಿತ್ರರು ಇವರೆಲ್ಲರನ್ನೂ ತೊರೆದು, ಹಿಂದಿರುಗಿ ನೋಡದೆ,

ಹೊರಟುಹೋಗುವುದರಲ್ಲಿದ್ದಾನೆ! ಮಿತಿಮೀರಿದ ದುಃಖದಿಂದ ಇಬ್ಬರೂ ಮಾತು ಮರೆತಿದ್ದಾರೆ. ಮಗನು ಆಲಿಂಗನವನ್ನು ಬಿಟ್ಟು, ತನ್ನ ತಲೆಯ ರುಮಾಲನ್ನು ತೆಗೆದು, ಪಿತನ ಪಾದಗಳಿಗೆ ಸೋಂಕಿಸಿ ಪುನಃ ಧರಿಸಿದನು. ಆಮೇಲೆ ಆ ವೀರ ಯುವಕನು ತನ್ನಲ್ಲಿದ್ದ ಧೈರ್ಯವನ್ನೆಲ್ಲಾ ಒಟ್ಟುಗೂಡಿಸಿ, ಎರಡು ಮಾತನಾಡಿದನು :

" ಹೊರಡುತ್ತೇನೆ. ಆಶೀರ್ವಾದ ಮಾಡಲಾರೆಯಾ ನನಗೆ, ದಾದಾ ? "

" ರಸೂಲ್ ! ರಸೂಲ್ ! !....ರಸೂಲ್ ! ! ! "

" ಏನು, ದಾದಾ ? "

" ಹೊರಡು ರಸೂಲ್, ಹೊರಡು. ಏನು ಬಂದರೂ ಕರ್ತವ್ಯದಿಂದ ಪರಾಙ್ಮುಖನಾಗಬೇಡ !.....ಇದೇ ನನ್ನ ಆಶೀರ್ವಾದ !....ಹೊರಡು."

ಕುದುರೆಯು ತನ್ನ ಸೊಗಸಾದ ಕುತ್ತಿಗೆಯನ್ನು ಅವರ ಕಡೆಗೆ ತಿರುಗಿಸಿ, ಗೊರಸಿನಿಂದ ಭೂತಾಡನೆ ಮಾಡುತ್ತ, ತನ್ನ ಅವಸರವನ್ನು ಸೂಚಿಸಿತು. ರಸೂಲನು ಕುದುರೆಯನ್ನು ನೋಡಿದನು. ಅದು " ಬಾ, ಹೊತ್ತಾಯಿತು, ವೀರವರ ! " ಎಂದು ಹೇಳಿದಂತೆ ತೋರಿತು. ರಸೂಲನು ಕೊನೆಯ ಸಲ ತಂದೆಯನ್ನಾಲಿಂಗಿಸಿ, ರಭಸದಿಂದ ಕುದುರೆಯನ್ನು ಸಮೀಪಿಸಿ, ಒಂದೇ ನೆಗೆತಕ್ಕೆ ಅದನ್ನು ಏರಿದನು. ಕುಳಿತಿದ್ದ ಹಾಗೆಯೇ ತಿರುಗಿ, ತಂದೆಯನ್ನೊಮ್ಮೆ —ಕೊನೆಯ ಸಲ—ನೋಡಿದನು. ಶಿಲಾಪ್ರತಿಮೆಯಾಗಿದ್ದಾನೆ, ತಂದೆ. ರಸೂಲ್‌ಖಾನನು ಕಡಿವಾಣವನ್ನು ಸಡಿಲಬಿಡುತ್ತ, " ಛಲ್, ಗುಲಾಬ್ ! " ಅಂದನು. ಕುದುರೆಯು ಕುಣಿಯುತ್ತ ಕುಣಿಯುತ್ತ ಹೊರಟಿತು. ನಾಲ್ಕು ಮಾರು ಹೋಗುವುದರಲ್ಲಿ ತಂದೆ ಕೂಗಿದಂತಾಯಿತು. ರಸೂಲನು ಕುದುರೆಯನ್ನು ನಿಲ್ಲಿಸಿ, ಹಿಂತಿರುಗಿ ನೋಡಿದನು. ತಂದೆ ಕೈಯೆತ್ತಿ, ಎತ್ತಿದ ಕಂಠದಿಂದ ಕೂಗಿ ಹೇಳಿದನು : " ಬೇಟಾ, ರಸೂಲ್, ಜ್ಞಾಪಕವಿರಲಿ !....ಮೊದಲು ಕರ್ತವ್ಯ....ಆಮೇಲೆ...."

ಕುದುರೆ ನಾಲ್ಗಾಲೋಟದಿಂದ ಓಡಲಾರಂಭಿಸಿತು. ಅದರ ಗೊರಸಿನ ಹೊಡೆತದಿಂದೆದ್ದ ಧೂಳಿನ ತೆರೆಯಲ್ಲಿ, ತಂದೆಯ ಕಣ್ಣುಗಳಿಗೆ ರಸೂಲನೂ ಅವನ ಕುದುರೆಯೂ ಮಬ್ಬುಮಬ್ಬಾಗುತ್ತಬಂದು, ಕೊನೆಗೆ ಮಾಯವಾದರು. ಗೊರಸಿನ ಧ್ವನಿ ಮಾತ್ರ ಕೇಳಿಬರುತ್ತಿತ್ತು. ಅದೂ ಬರಬರುತ್ತ ಕ್ಷೀಣವಾಗಿ, ಕೊನೆಗೆ

ನಿಂತೇಹೋಯಿತು. ರಸೂಲನ ತಂದೆಯ ಕಣ್ಣುಗಳಲ್ಲಿ ನೀರು ಉಕ್ಕಿ ಹರಿಯಿತು. ಗದ್ಗದ ಕಂಠದಿಂದ, ನಿಧಾನವಾಗಿ "ರಸೂಲ್–ರಸೂಲ್!........ನೀನು ಕೆಟ್ಟ ಕಾಲದಲ್ಲಿ, ಕೆಟ್ಟ ಜನರ ಮಧ್ಯೆ ಹುಟ್ಟಿದೆ!.....ಬೇಟಾ, ನಿನಗೆ ಮಂಗಳವಾಗಲಿ" ಎಂದು ಹೇಳುತ್ತ, ಮೆಲ್ಲನೆ ಮನೆಯೊಳಕ್ಕೆ ಹೊರಟುಹೋದನು.

೨

ಅದ್ಭುತಕಾಯದಿಂದ ತಲೆಯೆತ್ತಿ ಮೆರೆಯುತ್ತಿರುವ ಆರಾವಳೀ ಪರ್ವತ ಮಾಲೆಯು, ಹಿಂದುಗಳಲ್ಲಿ ಅಪ್ರತಿಮ ವೀರರೆಂದೆನಿಸಿಕೊಂಡ ರಜಪೂತರು, ಸನಾತನವಾದ ಆರ್ಯಧರ್ಮವನ್ನೂ ಸ್ತ್ರೀಯರ ಮಾನವನ್ನೂ ಕಾಪಾಡುವುದರಲ್ಲಿ, ಮೇಲಿಂದಮೇಲೆ ತೋರಿದ ಶೌರ್ಯಸಾಹಸಗಳಿಗೆ ಚಿರಸಾಕ್ಷಿಯಾಗಿರುವುದು. ಇಂದಿಗೆ ಸುಮಾರು ಇನ್ನೂರೈವತ್ತು ವರ್ಷಗಳ ಹಿಂದೆ, ರಜಪೂತರಿಗೂ ಮೊಗಲರಿಗೂ ಯುದ್ಧ ಪ್ರಾಪ್ತವಾಗಿ, ಆರಾವಳೀ ಪರ್ವತದ ಉಪತ್ಯಕೆಯು ಆ ನರ ಬಲಿಯ ವೇದಿಕೆಯಾಯಿತು. ಔರಂಗಜೇಬನ ತಡೆಯಿಲ್ಲದ ಕ್ರೂರ ವರ್ತನೆಯಿಂದ ಖತಿಗೊಂಡ ರಜಪೂತಕುಲಚೂಡಾಮಣಿಯಾದ ಉದಯಪುರದ ರಾಣಾ ರಾಜ ಸಿಂಹನು, ಅವನ ಸೊಕ್ಕನ್ನು ಮುರಿಯಲು ಸೊಂಟಕಟ್ಟಿದನು. ಅತ್ಯಲ್ಪ ಕಾಲ ದಲ್ಲಿಯೇ "ಹರ—ಹರ—ಮಹಾದೇವ್!.....ಅಲ್ಲಾ—ಹೋ!—ಅಕ್ಬರ್!" ಎಂಬ ಸಮರಘರ್ಜನೆಗಳ ಘಾತ–ಪ್ರತಿಘಾತದಿಂದುಂಟಾದ ಭೀಷಣ ನಿನಾದವು, ಪರ್ವತಮಾಲೆಯ ಮೂಲೆಮೂಲೆಗೂ ಪ್ರಸರಿಸಿ ಪ್ರತಿಧ್ವನಿಗೈಯುವುದರಲ್ಲಿತ್ತು.

ಅಂದು ನಡುಬೇಸಗೆಯ ಮಧ್ಯಾಹ್ನ. ರಜಪೂತ ಪಕ್ಷಕ್ಕೆ ಸೇರಿದ ಸೈನಿಕ ನೊಬ್ಬನು ಆರಾವಳೀ ಪರ್ವತಮಾಲೆಯ ಇಕ್ಕಟ್ಟಾದ ಕಣಿವೆಯ ದಾರಿಯೊಂದ ರಲ್ಲಿ, ನಿಬಿಡವಾದ ಪೊದರಿನ ಮರೆಯಲ್ಲಿ ಮಲಗಿ ನಿದ್ರೆಹೋಗುತ್ತಿದ್ದನು. ಎಡದ ಮುಂದೋಳನ್ನು ತಲೆಗೆ ಒತ್ತಾಗಿಟ್ಟುಕೊಂಡು, ಬೋರಲಾಗಿ ಮಲ ಗಿದ್ದನು. ಬಲದ ತೋಳು ಸ್ವಲ್ಪ ಚಾಚಿದಂತಿದ್ದು, ಅದರ ಸಡಿಲಗೊಂಡ ಹಿಡಿತದಲ್ಲಿ ಕೋವಿಯೊಂದಿತ್ತು. ಆ ಯೋಧನು ಮಲಗಿದ್ದ ರೀತಿಯಿಂದಲೂ ಅವನು ಬೆನ್ನಿಗೆ ಕಟ್ಟಿಕೊಂಡಿದ್ದ ಸಣ್ಣದೊಂದು ಗಂಟು, ಅವನ ಉಸಿರಿನ ಏರಿಳಿತಗಳಿಗೆ ಸಮನಾಗಿ ಚಲಿಸುತ್ತಿದ್ದುದರಿಂದಲೂ, ಅವನು ಸಜೀವಿಯಂತೆ ತೋರುತ್ತಿದ್ದನೇ ಹೊರತು, ಆಕಸ್ಮಾತ್ತಾದ ದೃಷ್ಟಿಗೆ ಮೃತನಂತೆಯೇ ತೋರು ತ್ತಿದ್ದನು.

ರಜಪೂತರು ಆ ಸೈನಿಕನನ್ನು ಆ ಕಣಿವೆಯ ದಾರಿಯಲ್ಲಿ ಕಾವಲಿಟ್ಟಿದ್ದರು. ಯಾವ ಸ್ಥಳದಲ್ಲಿ ಬಹು ಎಚ್ಚರಿಕೆಯಿಂದಲೂ ಜಾಗರೂಕತೆಯಿಂದಲೂ ಪಹರೆ ಇರಬೇಕಾಗಿತ್ತೋ ಅಲ್ಲಿ, ಆ ನಿರ್ಭಾಗ್ಯ ಸೈನಿಕನು ಮೈಮರೆತು ನಿದ್ದೆ ಹೋಗುತ್ತಿದ್ದನು. ಸೈನಿಕವೃತ್ತಿಯಲ್ಲಿ—ಅದರಲ್ಲೂ ಯುದ್ಧಕಾಲದಲ್ಲಿ—ಈ ತೆರನಾದ ಅಜಾಗರೂಕತೆಯು ಗುರುತಮವೂ ಅಕ್ಷಮ್ಯವೂ ಆದ ಅಪರಾಧ. ಈ ಅಪರಾಧವು ಅವನ ಮೇಲಿನ ಅಧಿಕಾರಿಗಳಿಗೆ ತಿಳಿದರೆ ಅವನ ಆಯುಸ್ಸು ಅಲ್ಲಿಗೆ ಮುಗಿಯುವುದು. ಏಕೆಂದರೆ, ಸೈನ್ಯದ ಶಿಕ್ಷಾಪ್ರಕರಣದಲ್ಲಿ, ಆ ಅಪರಾಧಕ್ಕೆ ಮರಣವು ಯಥಾರ್ಥವಾದ ಶಿಕ್ಷೆ.

ಹತಭಾಗ್ಯ ಸೈನಿಕನು ಮಲಗಿದ್ದ ಸ್ಥಳವು, ಡೊಂಕುಡೊಂಕಾಗಿ ಹರಿದು ಹೋಗಿದ್ದ ಹಾದಿಯ ಒಂದು ಮುರುವಿನಲ್ಲಿತ್ತು. ಆ ಪ್ರದೇಶದಲ್ಲಿ ರಸ್ತೆಯು ಸ್ವಲ್ಪ ದೂರ ದಕ್ಷಿಣಕ್ಕೆ ಹರಿದುಹೋದಂತೆ ಇದ್ದು, ಬಲಗಡೆಗೆ ತಿರುಗಿ, ಪಶ್ಚಿಮಕ್ಕೆ ಸ್ವಲ್ಪ ದೂರ ಸಾಗಿ, ಪುನಃ ದಕ್ಷಿಣಕ್ಕೆ ತಿರುಗಿ ಹರಿದುಹೋಗಿ, ಮುಂದಿದ್ದ ಕಣಿವೆಯಲ್ಲಿ ಬಳಸಿಕೊಂಡು ಇಳಿದು, ಕೆಳಗಿನ ನಿಬಿಡ ವನರಾಶಿಯಲ್ಲಿ ಮಾಯವಾಗಿತ್ತು. ಮಾರ್ಗವು ಎರಡನೆಯ ಕಡೆ ತಿರುಗಿದ ಮೂಲೆಯಲ್ಲಿ, ದೊಡ್ಡ, ಚಪ್ಪಟೆಯಾದ ಬಂಡೆಯೊಂದು ಉತ್ತರ ದಿಕ್ಕಿಗೆ ಚಾಚಿಕೊಂಡಿತ್ತು. ಅದರ ಮೇಲೆ ನಿಂತು ನೋಡುವವರಿಗೆ, ಎದುರಿನಲ್ಲಿ ಆಳವಾದ ಕಣಿವೆಯೂ, ಅದರಿಂದ ಅಲ್ಲಿ ತಿರುಗಿ ಇಲ್ಲಿ ಬಳಸಿ ಹತ್ತಿಬರುವ ಇಕ್ಕಟ್ಟಾದ ಮಾರ್ಗವೂ ಗೋಚರಿಸುವುದು. ಆ ಚಾಚಿದ ಬಂಡೆಯು, ಪರ್ವತದ ಅತ್ಯಂತ ಕಡಿದಾದ ಉತ್ತರ ಪಾರ್ಶ್ವದ ತುತ್ತತುದಿಯಲ್ಲಿತ್ತು. ಪ್ರಪಾತದ ಆಳವು ಸುಮಾರು ಒಂದು ಸಾವಿರ ಅಡಿಗಳಿಗೆ ಮೀರಿದ್ದಿತು. ಸೈನಿಕನು ಮಲಗಿದ್ದ ಪ್ರದೇಶವು ಆ ತುದಿಬಂಡೆಯ ಪೂರ್ವಕ್ಕೆ ಸ್ವಲ್ಪ ದೂರವಾಗಿ, ಒಂದು ತಗ್ಗಿನಲ್ಲಿತ್ತು. ಆ ಸ್ಥಳದಿಂದ, ಮೇಲೆ ಹರಿದುಬರುತ್ತಿದ್ದ ರಸ್ತೆಯ ಭಾಗವೂ, ಆ ತುದಿಬಂಡೆಯೂ, ಆ ಘೋರವಾದ ಪ್ರಪಾತದ ತಲೆ ತಿರುಗಿಸುವಂತಹ ಆಳವೂ ಕಾಣಿಸುತ್ತಿದ್ದುವು.

ಸುತ್ತಮುತ್ತಲಿನ ಬೆಟ್ಟಪ್ರದೇಶವೆಲ್ಲಾ, ದಟ್ಟವಾದ ವನರಾಶಿಯಿಂದ ತುಂಬಿ, ಅತ್ಯಂತ ದುರ್ಗಮವಾಗಿತ್ತು. ಪ್ರಪಾತದ ಉತ್ತರದ ಕಣಿವೆಯ ತಳದಲ್ಲಿ ಮಾತ್ರ ಸ್ವಲ್ಪ ಪ್ರದೇಶವು, ಸ್ವಭಾವವಾದ ಹುಲ್ಲುಗಾವಲಿನಂತೆ ಕಂಗೊಳಿಸುತ್ತಿತ್ತು. ಬೆಟ್ಟದ ತುದಿಯಲ್ಲಿ ನಿಂತವರಿಗೆ ಕಂಡೂ ಕಾಣದ ಹಾಗೆ,

ಸಣ್ಣದೊಂದು ತೊರೆಯು ಅಲ್ಲಿ ಹರಿದು, ಇಲ್ಲಿ ಸುಳಿದು, ಆ ಹಸುರು ಕಾನನವನ್ನು ಸೀಳಿಕೊಂಡು ಹರಿಯುತ್ತಿತ್ತು. ಆ ಬಯಲಿನ ಆಚೆ, ಮೊದಲು ಹೇಳಿದ ಪ್ರಪಾತಕ್ಕೆ ಎದುರಾಗಿ, ಸುಮಾರು ಅಷ್ಟೇ ಎತ್ತರದ ಇನ್ನೊಂದು ಪ್ರಪಾತವು ಪ್ರತಿಸ್ಪರ್ಧಿಯಂತೆ ಎದೆಗೊಟ್ಟು ಎದ್ದಿತ್ತು. ನಾವು ಹೇಳುವ ಸ್ಥಳದಲ್ಲಿ ನಿಂತು ನೋಡಿದರೆ, ಪ್ರಕೃತಿಯು ಎಲ್ಲೆಲ್ಲಿಯೂ ಭೀಷಣಾಕಾರವನ್ನು ತಾಳಿ ತೋರುತ್ತಿತ್ತು. ಪ್ರದೇಶವು ಅಷ್ಟು ದುರ್ಗಮವೂ ಭಯಂಕರವೂ ಆಗಿದ್ದರೂ ಅದು ಮಾನವರಿಗೆ ಸಮರಾಂಗಣವಾಗಿದ್ದಿತು. ಕಣಿವೆಯನ್ನು ತುಂಬಿ ಮಾಲೆ ಮಾಲೆಯಾಗಿ ಹಬ್ಬಿದ್ದ ಘೋರಾಟವಿಯಲ್ಲಿ, ಸಶಸ್ತ್ರರಾದ ಐನೂರು ಮಂದಿ ರಜಪೂತ ವೀರರು ಅವಿತುಕೊಂಡಿದ್ದರು. ಬೋನಿನಂತಹ ಆ ಪ್ರದೇಶದಿಂದ ಹೊರಹಾಯ್ದುಹೋಗುತ್ತಿದ್ದ ಇಕ್ಕಟ್ಟಾದ ಹಾದಿಯನ್ನು ಆಕ್ರಮಿಸಿಕೊಂಡು, ಐವತ್ತೇ ಜನಗಳ ಒಂದು ಸಣ್ಣ ದಳವು, ಶತ್ರುವಿನ ಒಂದು ಪಡೆಯನ್ನಾದರೂ ಅನ್ನ-ನೀರಿಲ್ಲದೆ ಕಂಗೆಡಿಸಬಹುದಾಗಿತ್ತು. ರಜಪೂತ ಸೈನಿಕರು ಹಿಂದಿನ ದಿನ ಹಗಲೂ ರಾತ್ರಿಯೂ ನಡೆದುಬಂದು, ಈಗ ಆ ಅಡವಿಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ರಾತ್ರಿಯಾದೊಡನೆಯೇ ರಸ್ತೆಯನ್ನು ಸೇರಿ, ಈಗ ಅವರ ಅಜಾಗರೂಕನಾದ ಸೈನಿಕನು ಎಲ್ಲಿ ಮೈಮರೆತು ಮಲಗಿದ್ದನೋ ಅಲ್ಲಿಗೆ ಹತ್ತಿಬಂದು, ದಕ್ಷಿಣದ ಕಣಿವೆಯಲ್ಲಿಳಿದು, ನಡುರಾತ್ರಿಗೆ ಸರಿಯಾಗಿ ಕೆಳಗಿದ್ದ ಶತ್ರುಶಿಬಿರದ ಮೇಲೆ ಬೀಳಬೇಕೆಂದು ಅವರ ಅಭಿಪ್ರಾಯವಿತ್ತು. ಅಜಾಗರೂಕತೆಯಿಂದಲಾಗಲಿ, ಅಕಸ್ಮಾತ್ತಾಗಿಯಾಗಲಿ, ರಜಪೂತರ ಈ ರಹಸ್ಯವು ಮೊಗಲರಿಗೆ ತಿಳಿಯಿತೆಂದರೆ, ರಜಪೂತರ ಅಭೀಷ್ಟವು ಕೈಗೂಡುವಂತಿರಲಿಲ್ಲ!

* * * *

ನಿದ್ರಿಸುತ್ತಿದ್ದ ಆ ನಿರ್ಭಾಗ್ಯ ಸೈನಿಕನು, ತನ್ನ ಶೌರ್ಯಸಾಹಸಗಳಿಂದಲೂ, ಸೌಜನ್ಯದಿಂದಲೂ, ರಜಪೂತ ಸೈನ್ಯದಲ್ಲಿ ಹೆಸರುಪಡೆದಿದ್ದನು. ಅರಾವಳೀ ಪರ್ವತಮಾಲೆಯ ಕಣಿವೆಗಳೂ ಹಾದಿಗಳೂ ಅವನಿಗೆ ಚೆನ್ನಾಗಿ ಪರಿಚಿತವಾಗಿದ್ದುದರಿಂದ, ಅವನನ್ನು ಇಂತಹ ಗುರುತರವಾದ ಕೆಲಸದಲ್ಲಿ ನೇಮಿಸಿ, ಆ ಸ್ಥಳದಲ್ಲಿ ಕಾವಲಿಟ್ಟಿದ್ದರು. ಆದರೂ, ಆಯಾಸವು ಮನಸ್ಥೈರ್ಯವನ್ನು ಮೀರಿದ್ದರಿಂದ, ಆ ಹತಭಾಗ್ಯನು ತಡೆಯಲಾರದೆ ನಿದ್ರೆಯಲ್ಲಿ ಮುಳುಗಿದನು. ಈ ಅಜಾಗರೂಕವಾದ ನಿದ್ರೆಯು ಆಳದಿಂದ ಎತ್ತಲು, ಆ ಕ್ಷಣದಲ್ಲಿ, ಅವನ

ಕನಸಿನಲ್ಲಿ ಸುಳಿದ ರೂಪವು, ಮೋಹಿನಿಯೋ ಪಿಶಾಚಿಯೋ ಹೇಳುವರಾರು? ಆ ದಿನ ಮಧ್ಯಾಹ್ನದಲ್ಲಿ, ಅಗೋಚರವಾದ ವಿಧಿಯು ನಿಶ್ಶಬ್ದವಾಗಿ ಬಂದು, ಅವನ ನಿದ್ರೆಯು ಮುಚ್ಚಳದಂತಿದ್ದ ಕಣ್ಣೆವೆಗಳನ್ನು ಅರಿಯದಂತೆ ಬಿಡಿಸಿ, ಅವನ ಜೀವಾತ್ಮನ ಕಿವಿಯಲ್ಲಿ ಉಚ್ಚರಿಸಲೂ ಆಗದ, ಜ್ಞಾಪಕಕ್ಕೆ ತಂದುಕೊಳ್ಳಲೂ ಆಗದ, ಅಪೂರ್ವವೂ ಗೂಢತಮವೂ ಆದ, ಒಂದು ಎಚ್ಚರದ ಶಬ್ದವನ್ನು ಊದಿ ಹೇಳಿತು!....ಎಚ್ಚರಗೊಂಡ ಸೈನಿಕನು ನಿಶ್ಶಬ್ದವಾಗಿ ತಲೆಯನ್ನು ಮುಂದೋಳಿನಿಂದ ಎತ್ತಿ, ಕೋವಿಯನ್ನು ಹತ್ತಿರಕ್ಕೆ ಎಳೆದುಕೊಳ್ಳುತ್ತ, ಮಲಗಿದ್ದಹಾಗೆಯೇ ತನಗೆ ಮರೆಯಾಗಿದ್ದ ಪೊದರಿನ ಸಂದಿನಲ್ಲಿ ನೋಡಿದನು. ನೋಡಿದೊಡನೆಯೇ ಸೊಗಸಾದ ಚಿತ್ರವೊಂದನ್ನು ಕಂಡಂತಾಗಿ, ಅವನ ಹೃದಯವು ಹಿಗ್ಗಿತು! ಎದುರಿಗೆ, ಪೀಠದಂತಿದ್ದ ಆ ತುದಿಬಂಡೆಯ ಮೇಲೆ, ನೀಲಗಗನಕ್ಕೆದುರಾಗಿ, ಅಶ್ವಾರೋಹಿಯ ಭವ್ಯಾಕೃತಿಯೊಂದು ಕಾಣಿಸಿತು. ನಿಶ್ಚಲವಾಗಿದ್ದ ಆ ಅಪೂರ್ವ ಚಿತ್ರದಲ್ಲಿ, ಕುದುರೆಯೂ ಗಂಭೀರ—ಸವಾರನೂ ಗಂಭೀರ! ದೃಢಾಂಗನಾದ ಆ ಯೋಧನು, ಭೀಮಕಾಯವುಳ್ಳ ಆ ಕುದುರೆಯ ಮೇಲೆ ಕುಳಿತಿದ್ದ ರೀತಿಯನ್ನು ನೋಡಿದರೆ, ಪೂರ್ವಕಾಲದ ಗ್ರೀಕರ ಸುಂದರವಾದ ಯಾವುದೋ ದೇವತಾಪ್ರತಿಮೆಯಂತೆ ಕಂಗೊಳಿಸುತ್ತಿದ್ದನು! ಶುಭ್ರವಾದ ಗಗನದ ಪ್ರಭೆಗೆ ಎದುರಾಗಿದ್ದುದರಿಂದ, ಕುದುರೆಯಲ್ಲಿಯೂ ಸವಾರನಲ್ಲಿಯೂ, ಅಂಗರಚನೆಯ ಉಬ್ಬು-ತಗ್ಗುಗಳು ಕಾಣದೆ, ದೃಶ್ಯವು ಕಪ್ಪಾದ ನೆರಳಿನಂತೆ ತೋರುತ್ತಿತ್ತು. ಆಕಾಶಕ್ಕೆ ಅಂಟಿಸಿದಂತಿದ್ದ ಆ ಛಾಯಾಚಿತ್ರದ ಅಂಚು ರೇಖೆಗಳು, ಹರಿತವಾದ ಕತ್ತಿಯಿಂದ ಕತ್ತರಿಸಿ ಎಳೆದಂತೆ ಕಾಣುತ್ತಿತ್ತು. ಕುದುರೆಯು ತಾನು ನಿಂತಿದ್ದ ಸ್ಥಳದಿಂದ ಮುಂದಿನ ಆಳವಾದ—ವನಾವೃತವಾದ—ಕಣಿವೆಯನ್ನೂ, ಅದರಾಚೆಯಿದ್ದ ಇನ್ನೊಂದು ಪ್ರಪಾತವನ್ನೂ ನೋಡಿ, ಆ ರುದ್ರರಮಣೀಯವಾದ ದೃಶ್ಯದಿಂದ ಸ್ತಂಭಿತವಾದಂತೆ ಕಾಣುತ್ತಿತ್ತು. ಸವಾರನೂ ಕದಲದಂತೆ ಕುಳಿತು, ಎದುರಿನ ಕಣಿವೆಯನ್ನೇ ನೋಡುತ್ತಿದ್ದನು. ಸೈನಿಕನ ಮನಸ್ಸಿನಲ್ಲಿ, ಸನ್ನಿಹಿತರಾಗಿದ್ದ ಶತ್ರುಗಳು ಪ್ರಬಲರಾಗಿದ್ದಾರೆಂಬ ಹೊಸ ಭಾವನೆಯೊಂದು ಹರಿದುಬರುತ್ತಿತ್ತು. ಈ ಕಾರಣದಿಂದಲೂ, ಉಜ್ಜ್ವಲವಾದ ಆಕಾಶದಲ್ಲಿ ಎದ್ದು ಕಾಣುತ್ತಿದ್ದುದರಿಂದಲೂ, ಅಶ್ವಾರೋಹಿಯ ಚಿತ್ರವು ಅವನ ಕಣ್ಣಿಗೆ ಅದ್ಭುತವಾದ ವೀರಾಕೃತಿಯಂತೆ ಕಾಣಿಸುತ್ತಿತ್ತು!

ಕ್ಷಣಕಾಲ ಸೈನಿಕನ ಮನಸ್ಸಿನಲ್ಲಿ, ಅಪೂರ್ವವೂ ಅರ್ಥ ಸ್ಫುಟವೂ ಆದ ಭಾವನೆಯೊಂದು ತಲೆದೋರಿತು. ಯುದ್ಧ ಮುಗಿಯುವವರೆಗೂ ತಾನು ನಿದ್ರಾವಸ್ಥೆಯಲ್ಲಿಯೇ ಇದ್ದ ಹಾಗೂ, ಈಗ ಎಚ್ಚರವಾಗಿ, ತಾನು ನೋಡುತ್ತಿರುವ ಆ ಅದ್ಭುತವೂ ಗಂಭೀರವೂ ಆದ ಅಶ್ವಾರೋಹಿಯ ಪ್ರತಿಮೆಯು, ವಿಜಯದ ಕುರುಹಿಗಾಗಿ ಆ ಉಚ್ಚಸ್ಥಾನದಲ್ಲಿ ಸ್ಥಾಪಿಸಲ್ಪಟ್ಟ ಶಿಲ್ಪದ ಕೆಲಸವೆಂದೂ, ತಾನು ಅವಿವೇಕಿಯೂ ಅಯೋಗ್ಯನೂ ಆಗಿ, ಅಂತಹ ವಿಜಯದಲ್ಲಿ ಭಾಗಿಯಾಗಲಿಲ್ಲವೆಂದೂ ಭಾವಿಸಿಕೊಂಡನು. ಆದರೆ ಈ ಭಾವನೆಯು ಅವನ ಮನದಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ. ಪ್ರತಿಮೆಯಂತಿದ್ದ ಆ ರೂಪವು ಸ್ವಲ್ಪ ಚಲಿಸಿದ್ದರಿಂದ, ಸೈನಿಕನ ವಿಚಿತ್ರವಾದ ಭಾವನೆಯು ಚೆದುರಿಹೋಯಿತು. ಕುದುರೆಯು ತನ್ನ ಕಾಲುಗಳನ್ನು ಚಲಿಸದೆ ದೇಹವನ್ನು ಮಾತ್ರ ಸ್ವಲ್ಪ ಹಿಂದಕ್ಕೆ ಎಳೆದುಕೊಂಡಿತು. ಸವಾರನು ಮಾತ್ರ ಮೊದಲಿನಂತೆಯೇ ನಿಶ್ಚಲವಾಗಿದ್ದನು. ಈಗ ಸೈನಿಕನು ಸಂಪೂರ್ಣವಾಗಿ ಎಚ್ಚತ್ತು, ಸಂದರ್ಭವನ್ನು ತಿಳಿದುಕೊಂಡನು! ನಿಶ್ಶಬ್ದವಾಗಿ ಕೋವಿಯನ್ನು ಕೈಗೆ ತೆಗೆದುಕೊಂಡು, ಅದರ 'ಕುದುರೆ'ಯನ್ನು ಎಳೆದು, ಅಶ್ವಾರೋಹಿಯ ಎದೆಗೆ ಸರಿಯಾಗಿ ಗುರಿಯಿಟ್ಟನು. ಕೀಲನ್ನು ಒತ್ತುವುದೇ ತಡ, ಕಾರ್ಯವು ಮುಗಿದುಹೋಗುತ್ತಿತ್ತು! ಆ ಸಮಯದಲ್ಲಿ, ಅಶ್ವಾರೋಹಿಯು ರಜಪೂತ ಸೈನಿಕನು ಅವಿತುಕೊಂಡಿದ್ದ ದಿಕ್ಕಿಗೆ ಮುಖವನ್ನು ತಿರುಗಿಸಿದನು. ಸೈನಿಕನಿಗೆ ಆ ಅಶ್ವಾರೋಹಿಯ ದೃಷ್ಟಿಯು ಹೃದಯವನ್ನು ಭೇದಿಸುವಂತೆ ಅನುಭವವಾಯಿತು! ಅವನ ಮುಖದಲ್ಲಿ ರಕ್ತವು ಇಂಗಿಹೋಗಿ ವಿವರ್ಣವಾಯಿತು!! ಅಂಗಾಂಗಗಳು ಥರಥರನೆ ನಡುಗಲಾರಂಭಿಸಿದುವು! ಸ್ಮೃತಿ ಜಾರತೊಡಗಿತು!! ಕುದುರೆಯೂ ಸವಾರನೂ ಅವನ ಕಣ್ಣುಗಳಿಗೆ ಕಪ್ಪಾಗಿ ಕಂಡು, ಜ್ವಾಲಾಮಯವಾದ ಗಗನದಲ್ಲಿ ಏಳುತ್ತ ಬೀಳುತ್ತ, ಚಕ್ರಾಕಾರವಾಗಿ ಸುತ್ತುತ್ತಿರುವಂತೆ ತೋರಿತು! ಕೋವಿ ಕೈಯಿಂದ ಜಾರಿತು. ಎತ್ತಿದ್ದ ಅವನ ತಲೆ, ಮೆಲ್ಲನೆ ಬಾಗಿ, ಭೂಸ್ಪರ್ಶಮಾಡಿತು. ಈ ಧೀರನೂ, ಶೂರನೂ ಆದ ಸೈನಿಕನು, ಉಕ್ಕಿಬಂದ ಹೃದಯದ ಕ್ಷೋಭೆಯಿಂದ ಮೂರ್ಛೆಹೋಗುವುದರಲ್ಲಿದ್ದನು!.... ಹಾಗಾದರೆ, ಯುದ್ಧಕಾಲದಲ್ಲಿ ಒಬ್ಬ ಶತ್ರುವನ್ನು ಸಂಹರಿಸುವುದು ಅಷ್ಟು ಭಯಾನಕ ವ್ಯಾಪಾರವೆ? ಯಾವ ಶತ್ರುವು—ತನ್ನ ಮತ್ತು ತನ್ನ ಕಡೆಯವರ ಗುಟ್ಟನ್ನರಿಯುವುದರಿಂದ—ಹೆಚ್ಚು ಭಯಂಕರನೋ

ಆ ಶತ್ರುವನ್ನು ಕೊಲ್ಲುವುದು ಅಷ್ಟು ಕಷ್ಟವೇ ?....ಆದರೆ, ಸೈನಿಕನು ಬಹಳ ಹೊತ್ತು ಹಾಗೆ ಇರಲಿಲ್ಲ; ಮರುಕ್ಷಣದಲ್ಲಿಯೇ ಚೇತರಿಸಿಕೊಂಡು, ತಲೆಯ ನ್ನೆತ್ತಿ, ಕೋವಿಯನ್ನು ತೆಗೆದುಕೊಂಡು, ಪುನಃ ಗುರಿಯಿಟ್ಟನು. ಮನಸ್ಸು ತಿಳಿಗೊಂಡು, ಹೃದಯವು ದೃಢವಾಗಿ, ದೃಷ್ಟಿಯು ಸ್ಥಿರವಾಯಿತು. ನಿರ್ದೋಷ ವಾದ ವಿವೇಚನೆ—ನಿರ್ಮಲವಾದ ಆತ್ಮ! ಅವನಿಗೆ ಆ ಶತ್ರುವನ್ನು ಸೆರೆ ಹಿಡಿಯುವ ಭರವಸೆ ಕಾಣಲಿಲ್ಲ. ಸ್ವಲ್ಪ ಸುಳುವು ಕೊಟ್ಟರೂ, ಅವನು ಇವರ ರಹಸ್ಯವನ್ನು ತಿಳಿದುಕೊಂಡು, ತನ್ನ ಶಿಬಿರಕ್ಕೆ ದೌಡಾಯಿಸಿಬಿಡುತ್ತಾನೆ! ಸೈನಿಕನು ಕ್ಷಣಮಾತ್ರದಲ್ಲಿ ತನ್ನ ಕರ್ತವ್ಯವನ್ನು ಅರಿತುಕೊಂಡನು. ಆ ಅಶ್ವಾ ರೋಹಿಯನ್ನು ತಾನು ಅವಿತಿದ್ದ ಸ್ಥಳದಿಂದಲೇ, ಸ್ವಲ್ಪವೂ ಎಚ್ಚರಿಕೆ ಕೊಡದೆ, ಕ್ಷಣಹೊತ್ತೂ ಯೋಚಿಸದೆ—ಕೋವಿಯಿಂದ ಸುಟ್ಟುಬಿಡಬೇಕೆಂದು ನಿರ್ಧರಿಸಿ ದನು. ಆದರೆ ಉತ್ತರಕ್ಷಣದಲ್ಲಿಯೇ ಇನ್ನೊಂದು ಯೋಚನೆ ತಲೆದೋರಿತು : “ನಿಲ್ಲು!....ಇನ್ನೂ ಆಸೆ ಇದೆ!” ಅಂದಹಾಗಾಯಿತು. “ಆ ಅಶ್ವಾರೋಹಿಗೆ ಏನೂ ಗೊತ್ತಿಲ್ಲದೆ ಇರಬಹುದು! ಸುಮ್ಮನೆ ಅಲ್ಲಿ ನಿಂತು, ಸುತ್ತಮುತ್ತಲಿನ ಪರ್ವತಮಾಲೆಯನ್ನೂ ವನರಾಶಿಯನ್ನೂ ನೋಡಿ ಆನಂದಪಡುತ್ತಿರಬಹುದು! ಸುಮ್ಮನಿದ್ದರೆ ಅವನು ಬಂದ ದಾರಿಯಲ್ಲಿ ತನ್ನಷ್ಟಕ್ಕೆ ತಾನು ಹೋಗುವನೋ ಏನೋ? ಅವನು ಹಿಂತಿರುಗಿ ಹೋಗುವುದರಲ್ಲಿ ನಿಜಾಂಶವು ತಿಳಿದೇ ತಿಳಿಯು ವುದು. ಆ ಸವಾರನ ಅಚಂಚಲವಾದ ದೃಷ್ಟಿಯು....” ಸೈನಿಕನು ಈ ರೀತಿ ಯೋಚಿಸುತ್ತ, ಹಾಗೆಯೇ ಆ ಕ್ಷಣದಲ್ಲಿ, ತನ್ನ ತಲೆಯನ್ನು ಮೆಲ್ಲನೆ ತಿರುಗಿಸಿ, ಆಳವಾದ ಕಣಿವೆಯ ತಳಕ್ಕೆ ದೃಷ್ಟಿಯನ್ನು ಬೀರಿದನು. ಕೆಳಗೆ, ದೂರದ ಹಚ್ಚನೆಯ ಮೈದಾನದಲ್ಲಿ, ತನ್ನ ಕಡೆಯ ಸೈನಿಕರೂ ಕುದುರೆಗಳೂ ಸಾಲುಗಟ್ಟಿ ಹೋಗುತ್ತಿದ್ದುದು ಕಂಡಿತು! ಯಾರೋ ಅವಿವೇಕಿಯಾದ ದಳಪತಿಯು— ಸುತ್ತಮುತ್ತಲಿನ ನೂರಾರು ಶಿಖರಗಳಿಂದ ಕಾಣುವ ಹಾಗೆ—ಕುದುರೆಗಳಿಗೆ ನೀರು ಕುಡಿಸಲು ತನ್ನ ಕಡೆಯವರಿಗೆ ಅಪ್ಪಣೆ ಕೊಟ್ಟಿದ್ದಂತೆ ತೋರಿತು. ಸೈನಿಕನು ತಲೆಯನ್ನು ತಿರುಗಿಸಿ, ದೃಷ್ಟಿಯನ್ನು ಪುನಃ ಕೋವಿಯ ನಲ್ಲಿಗೆ ಜೋಡಿಸಿ, ಅಶ್ವಾರೋಹಿಯ ಮೇಲೆ ನೆಟ್ಟನು. ಈ ಬಾರಿ ಕುದುರೆಗೆ ಗುರಿ ಯಿಟ್ಟನು. ಗೃಹತ್ಯಾಗಿಯಾದ ಸಮಯದಲ್ಲಿ ತಂದೆಯು ಹೇಳಿದ್ದ ಮಾತುಗಳು ಅವನ ಹೃದಯಾಂತರಾಳದಲ್ಲಿ ಭಗವದ್ವಾಕ್ಯದಂತೆ ಧ್ವನಿಗೈದುವು : “ನೀನು

—ಯಾವುದನ್ನು—ಕರ್ತವ್ಯವೆಂದು ತಿಳಿಯುವೆಯೋ ಅದನ್ನು—ಏನು ಬಂದರೂ ಬಿಡದೆ ಮಾಡು!" ....ಈಗ ಅವನು ಶಾಂತನಾದನು, ಅವಡುಗಚ್ಚಿದನು. ಅವನ ನರಗಳು, ನಿದ್ರಿಸುವ ಹಸುಳೆಯ ನರಗಳಂತೆ ಪ್ರಶಾಂತವಾದುವು; ಶಿಲಾಮೂರ್ತಿಯಂತೆ ನಿಶ್ಚಲನಾದನು; ಸಮನಾಗಿ, ನಿಧಾನವಾಗಿ ಉಸಿರಾಡುತ್ತಿದ್ದನು. ಆತ್ಮವು ಹೇಳಿತು: "ಅಲುಗಬೇಡ!—ಶಾಂತನಾಗಿರು!" ಎಂದು. ಕರ್ತವ್ಯವು ಕರುಳನ್ನು ಮೆಟ್ಟಿತು! ಸೈನಿಕನು ಗೋಲಿಯನ್ನು ಹಾರಿಸಿದನು.

ಆ ಸಮಯದಲ್ಲಿ ರಜಪೂತರ ದಳಪತಿಯೊಬ್ಬನು ಪ್ರಕೃತಿಸೌಂದರ್ಯವನ್ನು ನೋಡಬೇಕೆಂತಲೋ, ಅಥವಾ ಅಲ್ಲಿಯ ಸನ್ನಿವೇಶವನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂತಲೋ, ತನ್ನ ಶಿಬಿರವನ್ನು ಬಿಟ್ಟು, ಅಲ್ಲಿ ಇಲ್ಲಿ ಸಂಚಾರ ಮಾಡುತ್ತ, ಪ್ರಪಾತದ ಬುಡವನ್ನು ಸಮೀಪಿಸಿ, ಅಲ್ಲಿ ಒಂದು ಸಣ್ಣ ತಿಟ್ಟಿನ ಮೇಲೆ ನಿಂತು, ಮುಂದೆ ಯಾವ ದಾರಿಯನ್ನು ಹಿಡಿಯಬೇಕೆಂದು ಯೋಚಿಸುತ್ತಿದ್ದನು. ಅವನಿಗೆ ಎದುರಾಗಿ, ಸುಮಾರು ಕಾಲು ಮೈಲಿ ದೂರದಲ್ಲಿದ್ದರೂ ಕೇವಲ ಸಮೀಪದಲ್ಲಿಯೇ ಇದೆ ಅನ್ನುವ ಹಾಗೆ ತೋರುತ್ತಿದ್ದ ಆ ಪ್ರಪಾತದ ಶಿಲಾಮಯ ಪಾರ್ಶ್ವವು, ದುರ್ಗಮವಾದ ಕೋಟೆಯ ಗೋಡೆಯಂತೆ ಎದ್ದು ಕಾಣುತ್ತಿತ್ತು. ಗೊತ್ತುಗುರಿಯಿಲ್ಲದೆ, ಸಂಚಾರಾರ್ಥಿಯಾಗಿ ಬಂದ ಆ ದಳಪತಿಯು, ಸುತ್ತಮುತ್ತಲಿನ ವನಶ್ರೀಯ ಸೊಬಗನ್ನೂ ಪ್ರಪಾತವನ್ನೂ ನೋಡುತ್ತ ನೋಡುತ್ತ, ಹಾಗೆಯೇ ಕತ್ತೆತ್ತಿ, ಆ ಪ್ರಪಾತದ ಮೇಲಿನ ಅಂಚಿಗೆ ದೃಷ್ಟಿಯನ್ನು ಬೀರಿದನು. ಆ ಕ್ಷಣದಲ್ಲಿ ಅವನು, ಒಂದು ಅತ್ಯಂತ ವಿಸ್ಮಯಕರವಾದ ದೃಶ್ಯವನ್ನು ನೋಡಿ ಸ್ತಂಭೀಭೂತನಾದನು! ಅಶ್ವಾರೋಹಿಯೊರ್ವನು ವಾಯುಮಂಡಲದಲ್ಲಿ ಅತಿವೇಗದಿಂದ ಕೆಳಗಿನ ಕಣಿವೆಗೆ ಇಳಿಯುತ್ತಿದ್ದುದನ್ನು ನೋಡಿದನು! ಪಳಗಿದ ಯೋಧನಂತೆ ಕುಳಿತು, ಕಡಿವಾಣವನ್ನು ಬಿಗಿಯಾಗಿ ಹಿಡಿದೆಳೆದುಕೊಂಡಿದ್ದ ಸವಾರನ ತಲೆಯ ಕೂದಲೂ ಜಟ್ಟಿಯೂ ಗಾಳಿಯ ರಭಸಕ್ಕೆ ಹಾರಾಡುತ್ತಿತ್ತು! ಕುದುರೆಯ ರೀತಿಯನ್ನು ನೋಡಿದರೆ, ಅದರ ಪ್ರತಿಯೊಂದು ಗೊರಸೂ ಸ್ಥೂಲವಾದ ಭೂಮಿಯನ್ನು ತಾಡನೆಮಾಡುತ್ತ ನಾಲ್ಕಾಲೋಟದಿಂದ ಓಡುತ್ತಿರುವಂತೆ ತೋರುತ್ತಿತ್ತು! ದಳಪತಿಯು ನೋಡುತ್ತಿದ್ದಹಾಗೆಯೇ, ಕುದುರೆಯು ಭೂಮಿಗೆ ಇಳಿಯುವುದೋ—ಎನ್ನುವಂತೆ, ನಾಲ್ಕು ಕಾಲುಗಳನ್ನೂ ಒಟ್ಟಿಗೆ ಮುಂದಕ್ಕೆ ಚಾಚಿತು. ಕ್ಷಣಮಾತ್ರದಲ್ಲಿ

ನಡೆದ ಈ ಭೀಕರ ದೃಶ್ಯವನ್ನು ನೋಡಿ ದಳಪತಿಯು, ದಿಗ್ಭ್ರಮೆಯಿಂದ ಎದೆಯನ್ನು ತಟ್ಟಿಕೊಂಡು, "ಅಬ್ಬಾ!" ಎನ್ನುತ್ತ, ಆಶ್ಚರ್ಯದಿಂದಲೂ ಭಯದಿಂದಲೂ ತುಂಬಿದವನಾಗಿ, ಮನದಲ್ಲಿ ಸಹಿಸಲಸಾಧ್ಯವಾದ ಭಾವನೆಯೊಂದು ಮೂಡಲು, ನಿಲ್ಲಲಾರದೆ, ಕೆಳಗೆ ಬಿದ್ದುಬಿಟ್ಟನು. ಆ ಮುಹೂರ್ತದಲ್ಲಿಯೇ, ದೂರದಲ್ಲಿ, ವನಾಂತರಾಳದಿಂದ ಏನೋ ಅಪ್ಪಳಿಸಿಬಿದ್ದ ಶಬ್ದವೊಂದು ಕೇಳಿಬಂದು, ಪ್ರತಿಧ್ವನಿಯಿಲ್ಲದೆ ಉಡುಗಿಹೋಯಿತು! ಎಲ್ಲವೂ ನಿಶ್ಶಬ್ದ!

ದಳಪತಿಯು ಒಂದೆರಡು ಕ್ಷಣಗಳ ಮೇಲೆ ಚೇತರಿಸಿಕೊಂಡೆದ್ದು ಚೆದುರಿದ ಬುದ್ಧಿಯನ್ನು ಆಯ್ದುಕೊಳ್ಳುತ್ತ, ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತ, ಅರ್ಧಗಂಟೆಯ ಮೇಲೆ ತನ್ನ ಶಿಬಿರವನ್ನು ಸೇರಿದನು.

೩

ಸೈನಿಕನು ಗೋಲಿಯನ್ನು ಹಾರಿಸಿದೊಡನೆಯೇ ಪುನಃ ಕೋವಿಗೆ ಗೋಲಿಯನ್ನು ತುಂಬಿ, ಮೊದಲಿನಂತೆಯೇ ಕಾವಲಿದ್ದನು. ಹತ್ತು ನಿಮಿಷ ಕಳೆಯುವುದರೊಳಗಾಗಿ, ರಜಪೂತ ಹವಾಲ್ದಾರನೊಬ್ಬನು ಇವನ ಸಮೀಪಕ್ಕೆ ಮೆಲ್ಲನೆ ಹರಿದುಬಂದನು. ಸೈನಿಕನು ತಲೆಯನ್ನಾಗಲಿ, ದೃಷ್ಟಿಯನ್ನಾಗಲಿ ಅವನ ಕಡೆಗೆ ತಿರುಗಿಸದೆ, ಅವನನ್ನು ಗುರ್ತಿಸಿದ ಹಾಗೂ ತೋರಿಸಿಕೊಳ್ಳದೆ, ನಿಶ್ಚಲವಾಗಿದ್ದನು. ಬಂದವನು ಪ್ರಶ್ನೆ ಮಾಡಿದನು :

"ನೀನು ಗುಂಡು ಹಾರಿಸಿದೆಯಾ ?" ಎಂದು.

"ಹೌದು."

"ಯಾರ ಮೇಲೆ ?"

"ಒಂದು ಕುದುರೆಯ ಮೇಲೆ; ಅದೋ—ಆ ತುದಿಬಂಡೆಯ ಮೇಲೆ ನಿಂತಿತ್ತು. ಏಟು ಬಿದ್ದು ಮುಂದಕ್ಕೆ ಹಾರಿತು."

"ಕುದುರೆಯು ಮಾತ್ರ ಇದ್ದಿತೆ ?"

"ಇಲ್ಲ—"

"ಹಾಗಾದರೆ ?...."

ಸೈನಿಕನು ಮಾತಾಡಲಿಲ್ಲ. ಅವನ ಮುಖವು ಬಿಳುಪೇರಿಹೋಗಿದ್ದಿತು. ಆದರೆ ಅದರಲ್ಲಿ ಇನ್ನಾವ ಕಳವಳದ ಚಿಹ್ನೆಯೂ ತೋರಲಿಲ್ಲ. ಹವಾಲ್ದಾರನ

ಪ್ರಶ್ನೆಗೆ ಉತ್ತರ ಹೇಳಲಾರದೆ ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡನು. ಹವಾಲ್ದಾರನು ಕ್ಷಣಕಾಲ ಸುಮ್ಮನಿದ್ದು, ಆಮೇಲೆ, "ಇಲ್ಲಿ ಕೇಳು, ಗುಟ್ಟು ಮಾಡುವುದರಿಂದ ಪ್ರಯೋಜನವಿಲ್ಲ; ನಾನು ಆಜ್ಞೆಮಾಡುತ್ತೇನೆ—ಹೇಳು; ಆ ಕುದುರೆಯ ಮೇಲೆ ಯಾರಾದರೂ ಇದ್ದರೆ?" ಎಂದು ಸ್ಥಿರದೃಷ್ಟಿಯಿಂದ ಕೇಳಿದನು. ಸೈನಿಕನು ಅಧೋದೃಷ್ಟಿಯಿಂದ, "ಇದ್ದರು" ಎಂದನು.

"ಯಾರು?"

"ನನ್ನ ತಂದೆ."

"ಹ!—ಯಾರು?"

"ನನ್ನ ತಂದೆ."

"ಏನು ಹಾಗೆಂದರೆ, ವಿಕ್ರಮ?"

"ನಾನು ವಿಕ್ರಮನಲ್ಲ!"

"ಯಾರು ಹಾಗಾದರೆ—ನೀನು?"

"ನಾನು ಔರಂಗನನ್ನು ತ್ಯಜಿಸಿ ಬಂದ ರಸೂಲ್!"

ಹೀಗೆಂದು ಹೇಳಿ, ರಸೂಲ್‌ಖಾನನು ದೊಡ್ಡದಾಗಿ ನಿಟ್ಟುಸಿರುಬಿಟ್ಟು, ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಿದನು. ಹವಾಲ್ದಾರನು "ಅಬ್ಬಾ!" ಎನ್ನುತ್ತ ಎದೆಯನ್ನು ತಟ್ಟಿಕೊಂಡು, ಮರುಮಾತಿಲ್ಲದೆ ಎದ್ದು ಹೊರಟು ಹೋದನು.

---

# ಹೆಂಡತಿಯ ಕಾಗದ*

ಅಂದು ಭಾನುವಾರ! ಭಾನುವಾರ ವಾರಕ್ಕೊಂದು ಸಲ ಹೇಗೆ ಬರುತ್ತಿಯೋ ಹಾಗೆಯೇ, ರಾಮನಾಥನಿಗೆ ಅವನ ದೇವಿಯಿಂದ ವಾರಕ್ಕೊಂದು ಸಲ ಕಾಗದ ಬರುತ್ತಿತ್ತು. ಅದೂ ಭಾನುವಾರವೇ ಬರುತ್ತಿತ್ತು. ಭಾನುವಾರ— ಒಂದು ವೇಳೆ ತಪ್ಪಿದರೂ ತಪ್ಪಬಹುದು! ಆದರೆ ಅವನ ಹೆಂಡತಿಯ ಕಾಗದ ಬರುವುದು ಮಾತ್ರ ತಪ್ಪುತ್ತಿರಲಿಲ್ಲ! ಅದು, ಅವನು ವಾಣಿಯ ಸಂಗಡ ಮಾಡಿಕೊಂಡಿದ್ದ ಕರಾರಿನಲ್ಲಿ ಒಂದು ಮುಖ್ಯವಾದ ಷರತ್ತು. ಈಗ ವಾಣಿ ಮೈಸೂರಿನಲ್ಲಿ ತನ್ನ ತೌರುಮನೆಯಲ್ಲಿದ್ದಳು. ಇವನು ಬೆಂಗಳೂರಿನಲ್ಲಿ ತನ್ನ ಚಿಕ್ಕಪ್ಪನ ಮನೆಯಲ್ಲಿ ಇದ್ದುಕೊಂಡು, ಮೆಡಿಕಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ.

ರಾಮನಾಥ ಪೂರಾ ರಸಿಕ. ಅವನ ರಸಿಕತೆ ಕಲಿತುದಲ್ಲ. ಅದು ಜನ್ಮ ಜನ್ಮಾಂತರಗಳಿಂದಲೂ ಒಟ್ಟುಗೂಡಿ ಅವನ ಜೀವಕ್ಕೆ ಅಂಟಿಬಂದ ಗುಣ. ಮಾವಿನ ಹಣ್ಣನ್ನು ತಿನ್ನುತ್ತಾ ಮುಖದಲ್ಲಿ ಸಂತೋಷದ ಭಾವವನ್ನು ತೋರುವುದು ಹೆಚ್ಚಲ್ಲ; ಬೇವಿನಕಾಯನ್ನು ತಿನ್ನುತ್ತಾ, ಮುಖದಲ್ಲಿ ಮಾವಿನ ಹಣ್ಣಿನ ಸವಿಯ ಭಾವವನ್ನು ತೋರುವುದೀಗ ರಸಿಕತೆ! ರಾಮನಾಥನ ರಸಿಕತೆ ಈ ಜಾತಿಗೆ ಸೇರಿದುದು. ಒಂದು ದಿನ ವಾಣಿಗೆ ಇವನ ಮೇಲೆ ಯಾತಕ್ಕೋ ಬಹಳ ಕೋಪ ಬಂತು. ಇವನೂ ಬಹಳ ರೇಗಿಸಿದ. ಅವಳು ಎಷ್ಟು ಕೋಪಮಾಡಿಕೊಂಡರೂ ಇವನು ಒಂದು ಮಾತೂ ಆಡಿಸದೆ, ಸುಮ್ಮನೆ ನಗುತ್ತಿದ್ದ. ಅವಳ ಕೋಪವನ್ನು ಮತ್ತೂ ಕೆಣಕಿದಹಾಗಾಯಿತು. ಅದು ಕರಗಿ ಕಣ್ಣಿನಲ್ಲಿ ಕಾಣಿಸಿಕೊಂಡಿತು. ಬರೀ ಕೋಪದಲ್ಲಿದ್ದಾಗ ಅವಳು ಗಂಡನಿಂದ ಸ್ವಲ್ಪ ದೂರವಾಗಿಯೇ ಇದ್ದಳು. ಕಣ್ಣು ನೀರಿನಲ್ಲಿ ತೇಲಿತೋ ಇಲ್ಲವೋ, ಬೇಗ ಬಂದು, ಅವನ ದೇಹಕ್ಕೆ ಹಬ್ಬಿದ ಹಾಗೆ ನಿಂತು, ಅವನ ಎದೆಗೆ ತನ್ನ ತಲೆಯನ್ನು ಒತ್ತಿ, ಬಿಕ್ಕಳಿಸಿ ಅಳಲಾರಂಭಿಸಿದಳು. ಆಮೇಲೆ ಶಾಂತಿ ಸಮಾಧಾನಗಳ ಪ್ರಯತ್ನಕ್ಕೆ

*Dedicated to my pals of my College Cricket Team, 1930.

ಪ್ರಾರಂಭ. ರಾಮನಾಥ ಅವಳ ಸೆರಗಿನ ತುದಿಯಿಂದಲೇ ಅವಳ ಕಣ್ಣೀರನ್ನು ಒರಸತೊಡಗಿದ. ವಾಣಿ, ದುಃಖವನ್ನೂ ಕೋಪವನ್ನೂ ಸಮತೂಕದಲ್ಲಿ ಬೆರಸಿ, ಮಧ್ಯೆ ಮಧ್ಯೆ ಬಿಕ್ಕಳಿಸುತ್ತ, "ಈಗ ಬಂದ್ರೇನೋ—ಮುದ್ದಿಸೋಕೆ!—ಹೋಗೀ ಅಂದ್ರೆ!—ನೀವು ನನ್ನನ್ನು ಮುಟ್ಟಬೇಡಿ!" ಅಂದವಳು, ಅವನನ್ನು ಬಿಟ್ಟು ಒಂದಂಗುಲವೂ ಕದಲಲಿಲ್ಲ! ಅವನ ಹೆಗಲ ಮೇಲೆ ಕೈಹಾಕಿ, ಪುನಃ ಅಳತೊಡಗಿದಳು. ರಾಮನಾಥನಿಗೆ ಅವಳ ಆಟವನ್ನು ನೋಡಿ ನಗು ಬಂತು. ಅವನು ಒಂದು ಕೈಯಿಂದ ಅವಳ ಬೆನ್ನುತಟ್ಟುತ್ತ, ಇನ್ನೊಂದು ಕೈಯಿಂದ ಅವಳ ಮುಂದಲೆಯನ್ನು ಸವರುತ್ತ, "ವಾಣೀ, ನಾನು ಮೊದಲೇ ಸಮಾಧಾನ ಮಾಡಿದ್ದರೆ ನಿನ್ನ ಕೋಪ ನೋಡೋಕಾಗ್ತಿತ್ತೆ? ನಿನ್ನ ರೇಗಿಸಿ, ಕೋಪದಲ್ಲಿ ನಿನ್ನ ರೂಪ ಹೇಗಿರುತ್ತೆ—ನೋಡ್ಬೇಕೊಂತಿದ್ದೆ! ಅದಕ್ಕೇ ಮೊದಲು ಸಮಾಧಾನ ಮಾಡಲಿಲ್ಲ. ಅಬ್ಬಬ್ಬಾ! ಅದೇನು ಕೋಪ!—ಆ ಹುಬ್ಬುಗಂಟೋ—ಆ ತುಟಿಗಳೋ! ಆ ನಿಲುವಿನ ಠೀವಿಯೋ!—ಆ...." ಅವನ ಮಾತು ಮುಗಿಯುವುದಕ್ಕೆ ಮೊದಲೇ ವಾಣಿ ತನ್ನ ಕೈಯಿಂದ ಅವನ ಬಾಯನ್ನು ಒತ್ತಿ, "ಸಾಕು, ನಿಲ್ಲಿಸಿ! ನೀವೇನೀಗ ವರ್ಣಿಸಬೇಕಾಗಿಲ್ಲ!—ಮೂಗಂತೆ, ಕವಿಯಂತೆ! ಹೋಗಿ ಅಂದ್ರೆ! ನೀವು ನನ್ನ ಮುಟ್ಟಬೇಡಿ!" ಅಂದಳು. ಈಗಲೂ ಅವನನ್ನು ಬಿಟ್ಟು ಕದಲಲಿಲ್ಲ. ರಾಮನಾಥ ನಕ್ಕು, "ಅಲ್ವೇ, 'ನನ್ನ ಮುಟ್ಬೇಡಿ' ಅಂತೀಯ; ನೀನೇ ನನ್ನ ಮುಟ್ಕೊಂಡಿದೀಯಲ್ಲೇ!" ಅಂದ. ಅವಳಿಗೂ ಸ್ವಲ್ಪ ನಗು ಬಂತು. ಒಂದು ಒಯ್ಯಾರದಿಂದ ತನ್ನ ದೇಹಲತೆಯನ್ನು ಬಳುಕಿಸುತ್ತಾ, "ನಾನು ಹೇಳಿದ್ದೇನು? ನೀವು—ನನ್ನ ಮುಟ್ಬೇಡಿ—ಅಂತ" ಎಂದಳು. ನಗು ಅವಳ ದೇಹವನ್ನೆಲ್ಲಾ ವ್ಯಾಪಿಸಿತ್ತು. ಅವಳು ರಾಮನಾಥನ ತೋಳುಗಳಲ್ಲಿ ಸೆರೆಯಾದಳು. ಅವನು, "ಅಹ-ಹ-ಹ-ಹ! ಎಷ್ಟು ಜಾಣತನ! ಒಪ್ಪಿದೆ, ವಾಣಿ! ಎಲ್ಲಿ, ಹೀಗೆ ತಿರುಗು!" ಎಂದು, ಮೆಲ್ಲಗೆ ಅವಳ ಗಲ್ಲವನ್ನು ಎತ್ತಿದ. ವಾಣಿ ನಗುತ್ತ ಬಳುಕುತ್ತ "ಯಾಕೆ?" ಎಂದಳು.

"ಇಷ್ಟು ಜಾಣತನದಿಂದ ಮಾತಾಡಿದೆ! ಸ್ವಲ್ಪ ಬಹುಮಾನ ಕೊಡದಿದ್ರೆ ಆಗುತ್ತದೆಯೋ?"

"ಎಲ್ಲಾ ಆಗುತ್ತೆ!"

"ಛೆ! ಎಲ್ಲಾದರೂ ಉಂಟೇ!"

" ಅಬ್ಬಾ !—ಎಷ್ಟು ಆಸೆಯೋ ! "

ಅವನ ಆಸೆಯನ್ನು ಎಷ್ಟು ಎಂದು ಹೇಳೋಣ! ಶಬ್ದಗಳಿಗೆ ನಿಲುಕದ ಅವನ ಆಸೆಯ ಪರಿಮಾಣವನ್ನು, ಶಬ್ದಗಳಿಂದ ವರ್ಣಿಸಲು ಪ್ರಯತ್ನಿಸುವುದು —ಸಮುದ್ರವನ್ನು ಬೊಗಸೆಯಲ್ಲಿ ಅಳೆಯಲು ಹೊರಟ ಹಾಗೆ. ರಾಮನಾಥ ರಸಿಕ; ಅವನು ಆ ಹುಚ್ಚು ಕೆಲಸಕ್ಕೆ ಹೋಗಲಿಲ್ಲ. ವಾಣಿಗೆ ತನ್ನ ಆಸೆಯ ಆಳವನ್ನು ನಿಶ್ಶಬ್ದವಾಗಿಯೇ ತೋರಿಸಿದ.

* * * *

ದೇವರು, ವಾಣಿ–ರಾಮನಾಥ ಇವರ ಜೀವನವನ್ನು ಒಂದಾಗಿ ಸೇರಿಸುವುದರಲ್ಲಿ ಬಹಳ ಮುತುವರ್ಜಿ ವಹಿಸಿದ್ದಂತೆ ತೋರುತ್ತದೆ. ವಾಣಿ ರಾಮನಾಥನ ರಸಿಕತೆಗೆ ತಕ್ಕ ಹೆಣ್ಣು ; ಅವನ ಮೆಚ್ಚಿನ ಮಡದಿ. ಇತರರು ಜೀವನವನ್ನು ಒಂದು ಪ್ರಯಾಣ ಎಂದು ತಿಳಿದಿದ್ದರೆ, ಇವರು, ತಮ್ಮ ಜೀವನವನ್ನು ಒಂದು ಆಟ ಎಂದು ತಿಳಿದಿದ್ದರು. ಅವನ ಪ್ರೇಮ, ಮೇರೆಯಿಲ್ಲದ ಮಹಾಸಮುದ್ರ ; ಅವಳ ಒಲವು, ತಡೆಯಿಲ್ಲದ ತುಂಬಿದ ಪ್ರವಾಹ.

ವಾಣಿ ಓದುಬರಹ ಚೆನ್ನಾಗಿ ಬಲ್ಲಳು. ಗಂಡನನ್ನು ಮರುಳುಮಾಡುವ ಹಾಗೆ ಕಾಗದ ಬರೆಯುತ್ತಿದ್ದಳು. ರಾಮನಾಥ ನಾಲ್ಕು ಪುಟ ಬರೆದರೆ, ಅವಳು ಎಂಟು ಪುಟ ಬರೆಯುತ್ತಿದ್ದಳು. ಎಲ್ಲಾ ಹುಚ್ಚು ! ಹುಚ್ಚು—ಎನ್ನುವಿರೋ ? ಹೌದು, ಹುಚ್ಚುತನವೇ ಸರಿ ! ಆದರೆ ಇದು ಪ್ರೇಮಿಗಳಾದ ಎಲ್ಲಾ ದಂಪತಿಗಳೂ ಅನುಭವಿಸುವ ಹುಚ್ಚುತನ ! ಯೌವನದ ದಾಂಪತ್ಯದ ಎಳೆಯ ದಿನಗಳು ಈ ವಿಧವಾದ ಹುಚ್ಚಿನಿಂದ ತುಂಬಿರುತ್ತವೆ. ರಾಮನಾಥನಿಗೆ, ಅವನ ಮೋಹದ ಮಡದಿ, ಈ ಹುಚ್ಚನ್ನು ಚೆನ್ನಾಗಿ ಹಿಡಿಸಿಬಿಟ್ಟಿದ್ದಳು.

* * * *

ಸರಿ, ಅಂದು ಭಾನುವಾರ ಎಂದು ಹೇಳಿದೆವಲ್ಲವೆ ? ಅಂದು ವಾಣಿಯ ಕಾಗದ ಬರುವ ದಿನ. ರಾಮನಾಥ ಬಹಳ ಆಸೆಯಿಂದ ಕಾದಿದ್ದ. ಅವನ ಆಸೆ ಶನಿವಾರ ರಾತ್ರಿಯಿಂದಲೇ ಪ್ರಾರಂಭವಾಗಿತ್ತು ! ಆ ರಾತ್ರಿ, ನಿದ್ರೆ ಬರುವ ಮೊದಲು, ವಾಣಿಯ ಕಾಗದದ ಯೋಚನೆಯೇ ಕೊನೆಯದಾಗಿತ್ತು. ಭಾನುವಾರ ಬೆಳಗಿನ ಜಾವ ಒಂಬತ್ತು ಗಂಟೆಗೆ ಎದ್ದಾಗ, ಅದೇ ಮೊದಲನೆಯ

ಯೋಚನೆ! ಹಿಂದಿನ ವಾರ, ವಾಣಿಯ ಕಾಗದ ಬಹಳ ಸಂಕ್ಷೇಪವಾಗಿತ್ತು. ಆದರಲ್ಲಿ '....ಈಗ ಹೆಚ್ಚು ಬರೆಯೋಕೆ ಪುರಸತ್ತಿಲ್ಲ ; ಮುಂದಿನ ವಾರ ದೊಡ್ಡದಾಗಿ ಕಾಗದ ಬರೀತೀನಿ, ಕ್ಷಮಿಸಬೇಕು....' ಎಂದು ಕೊನೆಯಲ್ಲಿ ಆಸೆ ಹುಟ್ಟಿಸುವ ಒಂದು ಮಾತು ಸೇರಿಸಿದ್ದಳು. ಅವನಿಗೆ ಆ ಕಾಗದ ಓದಿದಾಗ ವಿಪರೀತ ಕೋಪ ಬಂತು. ಆದರೂ ಕೊನೆಯಲ್ಲಿ ಬರೆದಿದ್ದ ಮಾತುಗಳನ್ನು ಓದಿ, ಕೋಪವನ್ನು ನುಂಗಿಕೊಂಡ. ವಾಣಿ ಚತುರೆ! ರಾಮನಾಥ ಹೇಗೆ ಹೇಗೋ ಒಂದು ವಾರವನ್ನು ಕಳೆದ. ಅಂದು ಪುನಃ ಭಾನುವಾರ! ವಾಣಿ ಹಿಂದಿನ ಕಾಗದದಲ್ಲಿ ಒಡ್ಡಿದ್ದ ಆಸೆ, ಅವನ ಮನಸ್ಸಿನಲ್ಲಿಯೇ ಸುಳಿದಾಡುತ್ತಿದ್ದುದು, ಅಂದು ಅವನ ಮನಸ್ಸನ್ನೆಲ್ಲಾ ತುಂಬಿತು. ಅಲ್ಲದೆ, ಅವಳ ಆ ಸಂಕ್ಷೇಪವಾದ ಕಾಗದಕ್ಕೆ ಉತ್ತರವಾಗಿ ಇವನು ಹುಚ್ಚಾಪಟ್ಟೆ ರೇಗಿ, ಆರು ಪುಟಗಳಷ್ಟು ಕಾಗದ ಬರೆದಿದ್ದ. ಅದರ ಯೋಚನೆ ಬೇರೆ! ತಾನು ರೇಗಿ ಬರೆದಿದ್ದಕ್ಕೆ ವಾಣಿ ಏನೇನು ಸಮಾಧಾನ ಹೇಳಿ, ಯಾವ ಯಾವ ಪ್ರೇಮದ ಮಾತುಗಳನ್ನು ಬರೆದು, ತನ್ನನ್ನು ಒಲಿಸಿಕೊಳ್ಳುವ ಪ್ರಯತ್ನಮಾಡಿದ್ದಳೋ!—ಎಂದು ಯೋಚಿಸತೊಡಗಿದ. ಅಂದು ಭಾನುವಾರವಾದ್ದರಿಂದ, ಅಂಚೆಯವನು ಬರುವುದು ಎಂದಿಗಿಂತಲೂ ಸ್ವಲ್ಪ ಹೊತ್ತು. ನೋಡಿ, ಭಾನುವಾರದಲ್ಲಿ ಅದೊಂದೇ ಕುಂದಕ! ಅದರಲ್ಲೂ, ಬೇರೆ ಊರಲ್ಲಿರುವ ಪ್ರೇಯಸಿಯಿಂದ, ಪ್ರೇಮದ ಕಾಗದವನ್ನು ನಿರೀಕ್ಷಿಸುವವರ ಗಣನೆಯಲ್ಲಿ, ಆ ಕುಂದಕ ಅಷ್ಟಿಷ್ಟಲ್ಲ! ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಅಂಚೆಯವನು ಬಂದ. ಅವನು ದೂರದಲ್ಲಿದ್ದಾಗಲೇ ರಾಮನಾಥ, "ಏನಪ್ಪಾ, ರಾಮಯ್ಯಾ, ಏನಾದರೂ ಉಂಟೇ?" ಎಂದು ಕೇಳಿದ. ಅವನು, "ಇದೆ, ಸ್ವಾಮಿ" ಎಂದು ಹೇಳುತ್ತಾ, ದೂರದಲ್ಲಿದ್ದ ಹಾಗೆಯೇ ಒಂದು ಕಾಗದವನ್ನು ಆರಿಸಿ ತೆಗೆದ. ವಾಣಿಯ ಕಾಗದವೇ ಇರಬೇಕು! ವಾಣಿ ಎಷ್ಟು ಒಳ್ಳೆಯವಳು! ರಾಮಯ್ಯ ಹತ್ತಿರ ಬಂದು ಕಾಗದವನ್ನು ಕೈಗೆ ಕೊಟ್ಟ. ಹೌದು—ವಾಣಿಯ ಕಾಗದ! ದಪ್ಪವಾಗಿತ್ತು! ಇನ್ನೇನು, ಕಾಗದವನ್ನು ಒಡೆಯುವುದರಲ್ಲಿದ್ದ; ಆ ಸಮಯಕ್ಕೆ ಸರಿಯಾಗಿ, ಗಣೇಶ ಅವಸರವಾಗಿ ಬೈಸಿಕಲ್ ಮೇಲೆ ಬರುತ್ತಿದ್ದವನು, ದೂರದಲ್ಲಿಯೇ ಇವನನ್ನು ನೋಡಿ, "ರಾಮನಾಥ!" ಎಂದು ಕೂಗಿದ. ರಾಮನಾಥ ಕಾಗದ ಒಡೆಯುವುದನ್ನು ನಿಲ್ಲಿಸಿ, ತಿರುಗಿ ನೋಡಿದ. ಗಣೇಶ ಇವನ ಹತ್ತಿರ

ಬಂದು ಇಳಿದು, “ ಲೋ ! ಹೊತ್ತಾಗ್ಲಿಲ್ವೇನೋ ಮ್ಯಾಚಿಗೆ ! ಇನ್ನೂ ಬಟ್ಟೇನೇ ಹಾಕ್ಕೊಂಡಿಲ್ವಲ್ಲೋ ನೀನು ! ” ಎಂದ. ರಾಮನಾಥ, ಹೆಂಡತಿಯ ಕಾಗದದ ನಿರೀಕ್ಷಣೆಯಲ್ಲಿ, ಅಂದು ಇದ್ದ ಕ್ರಿಕೆಟ್ ಮ್ಯಾಚನ್ನೇ ಮರೆತುಬಿಟ್ಟಿದ್ದ ! ಸರಿ, ಇನ್ನು ಕಾಗದ ಓದೋದು ಹೇಗೆ ? ಮ್ಯಾಚಿಗೆ ಹೊತ್ತು ಮೀರಿದೆ; ಅಲ್ಲದೆ ಗಣೇಶ ಬೇರೆ ಜೊತೆಯಲ್ಲಿದ್ದಾನೆ. ಕಾಗದ ದೊಡ್ಡದಾಗಿರುವ ಹಾಗಿದೆ ! ಓದುವುದಕ್ಕೆ ಸಮಯವಲ್ಲ. ಬೇಗ ಬೇಗ ಬಟ್ಟೆ ಹಾಕಿಕೊಂಡು, ವಾಣಿಯ ಕಾಗದವನ್ನು ಷರಾಯಿ ಜೇಬಿನಲ್ಲಿ ತುರುಕಿಕೊಂಡು, ಸೈಕಲ್ ಹತ್ತಿ, ಗಣೇಶನ ಜೊತೆಯಲ್ಲಿ ಹೊರಟ. ಮ್ಯಾಚಿಗೆ ಬಹಳ ಹೊತ್ತಾಗಿಬಿಟ್ಟಿತ್ತು. ಅದರ ಯೋಚನೆ ಬೇರೆ. ಇತ್ತ, ಮಧ್ಯೆ ಮಧ್ಯೆ ಗಣೇಶ ನೂರೆಂಟು ಪ್ರಶ್ನೆಗಳಿಗೆ ಪ್ರಾರಂಭಿಸಿದ. ಇವನ ಮನಸ್ಸೋ, ವಾಣಿಯ ಕಾಗದದ ಸೆಳೆತದಲ್ಲಿ ಸಿಕ್ಕು ಲಿಬಿ ಲಿಬಿ ಒದ್ದಾಡುತ್ತಿತ್ತು. ಕಾಗದ ದಪ್ಪವಾಗಿತ್ತು. ಸುಮಾರು ಹತ್ತು ಹನ್ನೆರಡು ಪುಟ ಬರೆದಿರಬಹುದು !—ವಾಣಿ ಬಲು ಒಳ್ಳೆಯ ಹುಡುಗಿ ! ಮಾತು ಕೊಟ್ಟಿದ್ದಕ್ಕೆ ಸರಿಯಾಗಿ ಬರೆದಿದ್ದಾಳೆ !—ಏನೇನು ಬರೆದಿದ್ದಾಳೋ ! ಅವಳು ಮನಸ್ಸಿಟ್ಟು ಬರೆದರೆ ಬಲು ಸುಖವಾಗಿರುತ್ತೆ ಶೈಲಿ !.... ಇನ್ನೇನು ಒಂದು ಮುದುಕಿಯ ಮೇಲೆ ಬಿಟ್ಟುಬಿಡುತ್ತಿದ್ದ ಬೈಸಿಕಲ್ಲನ್ನ ! ಅನಾಹುತ ಆಗೋಕೆ ಮುಂಚೇನೇ ಗಣೇಶ, “ ಲೋ ! ಮುದುಕಿ ! ಎಲ್ನೋಡ್ತಿಯೋ ? ” ಎಂದ. ದೈವಾಧೀನ ! ರಾಮನಾಥ ಹೇಗೋ ತಪ್ಪಿಸಿಕೊಂಡು ಮುಂದಕ್ಕೆ ಹೋದ. ಆದರೆ, ಮುಂದಿನ ಚಕ್ರ ಇವನ ಸಮೇತ ಚರಂಡಿಗೆ ಇಳೀತು. ರಾಮನಾಥ, “ ಇವತ್ತು ಎದ್ದ ಹೊತ್ತು ಚೆನ್ನಾಗಿಲ್ಲ ! ” ಅಂದುಕೊಂಡು, ಬೈಸಿಕಲ್ಲಿಂದ ಇಳಿದು ಅದನ್ನು ಪುನಃ ರಸ್ತೆಗೆ ಎಳೆದುಕೊಂಡು ಹತ್ತಿದ. ಗಣೇಶ “ ಏನೋ ರಾಮು, ಇವತ್ತು ನಿನ್ನ ಬುದ್ಧಿ ನೆಟ್ಟಗಿರೋ ಹಾಗೆ ಕಾಣೊಲ್ಲ ! ಈಗಲೇ ಹೊತ್ತಾಗಿದೆ ಮ್ಯಾಚಿಗೆ ! ಈ ಮಧ್ಯೆ ನೀನು ಪೋಲೀಸ್ ಸ್ಟೇಷನ್ ದಾರಿ ಹಿಡಿದಿದ್ದೆಯಲ್ಲಾ ! ಸ್ವಲ್ಪ ರಸ್ತೆಯ ಮೇಲೆ ನಿಗಾ ಇರ್ಲಿ ” ಎಂದ.

ರಾಮನಾಥ “ ಏನೂ ಇಲ್ಲಾ ಕಣೋ. ಇವತ್ತು ಊರಿಂದ ದುಡ್ಡು ಬರಬೇಕಾಗಿತ್ತು, ಬರಲಿಲ್ಲ—ಯೋಚಿಸ್ತಾ ಇದ್ದೆ, ಅಷ್ಟೆ ! ” ಎಂದ.

“ ಗುಗ್ಗೂ ! ಇವತ್ತು ಭಾನುವಾರ ಅಲ್ವೇನೋ ! ”

“ ಓ ! ಇವತ್ತು ಭಾ-ನು-ವಾ-ರಾ-ನೇ ! ನಾನು ಶನಿವಾರಾಂತಿದ್ದೆ ;

ಸರಿ, ಹುಂ!" ಸುಳ್ಳಿಗೆ ತಡೆಯುಂಟೆ!

* * * *

ಇಬ್ಬರೂ ಸೆಂಟ್ರಲ್ ಕಾಲೇಜು ತಲುಪಿದರು. ಅಲ್ಲೇ ಆಟ ಇದ್ದದ್ದು. ಆಗಲೇ ಪ್ರಾರಂಭವಾಗಿಬಿಟ್ಟಿತ್ತು. ಇವರು ಹೊತ್ತಾಗಿ ಬಂದದ್ದಕ್ಕೆ ಎಲ್ಲರೂ ಆಕ್ಷೇಪಿಸುವವರೇ! ಗಣೇಶ, ತಾನು ಹೊತ್ತಾಗಿ ಬಂದದಕ್ಕೆ ರಾಮನಾಥನ ಮೇಲೆ ತಪ್ಪು ಹೊರಿಸಿದ. ರಾಮನಾಥ ಏನು ಹೇಳಬೇಕು? ವಾಣಿಯ ಕಾಗದದ ಮೇಲೆ ತಪ್ಪು ಹಾಕಬೇಕು! ಛೆ! ಪಾಪ, ಆ ಕಾಗದ ಏನು ಮಾಡೀತು? ಅಂಚೆಯವನು ಹೊತ್ತಾಗಿ ಬಂದ. ಅದು ಅವನ ತಪ್ಪಲ್ಲ; ಭಾನುವಾರ ಒಂದೇ 'ಡೆಲಿವರಿ'; ಮಧ್ಯಾಹ್ನದ ಮೇಲೆ. ತಪ್ಪು—ಅಂಚೆಯ ಇಲಾಖೆಯದು! ತರ್ಕವೇನೋ ಸರಿಯಾಗಿದೆ! ಆದರೆ ಕೇಳುವವರಾರು?

ರಾಮನಾಥನ ಎದುರು ಪಕ್ಷದವರು ಆಡುತ್ತಿದ್ದರು. ಅದ್ದರಿಂದ, ಇವರು ಹೋದೊಡನೆಯೇ, ಅಂಗಿ ಬಿಚ್ಚಿ 'ಫೀಲ್ಡಿ'(field)ಗೆ ಇಳಿಯಬೇಕಾಗಿಬಂತು. ಇಬ್ಬರೂ ಹೋಗಿ ತಮ್ಮ ತಮ್ಮ ಸ್ಥಳದಲ್ಲಿ ನಿಂತುಕೊಂಡರು. ಕಾಗದವೇನೋ ರಾಮನಾಥನ ಷರಾಯಿ ಜೇಬಿನಲ್ಲೇ ಇತ್ತು. ಅದರ ದೆಸೆಯಿಂದ ಅವನ ಮನಸ್ಸು, ಗಾಳದ ಕೊಕ್ಕೆಯನ್ನು ಕಚ್ಚಿದ ಮೀನಿನ ಹಾಗೆ ಆಗಿತ್ತು! ಅದರ ವಿಷಯವಾಗಿ ಯೋಚಿಸತೊಡಗಿದ. ಯೋಚನೆಗೂ ಭಂಗಬರುತ್ತಿತ್ತು! ಮಧ್ಯೆ ಮಧ್ಯೆ, ಇವನ ಕಡೆ ಚೆಂಡು ಬಂದು, ತೋಳ ಕುರಿಮಂದೇನ ಚೆದುರಿಸಿದ ಹಾಗೆ, ಇವನ ಯೋಚನೆಗಳನ್ನೆಲ್ಲಾ ಚೆದುರಿಸಿಬಿಡುತ್ತಿತ್ತು. ಭಂಗ ಬಂದ ಹಾಗೆಲ್ಲಾ, ಇವನು ಪುನಃ ಪುನಃ, ಮೊದಲಿನಿಂದ ಪ್ರಾರಂಭಿಸುತ್ತಿದ್ದ! "ಏನೋ ಈ ಸಲ ಪೂರಾ ಬರೆದಿರೋ ಹಾಗೆ ಕಾಣುತ್ತೆ!—ನಾನು ಆರು ಪೇಜು ಬರೆದಿದ್ದೆ!—ವಾಣಿ ಕಡೆಯ ಪಕ್ಷ ಹತ್ತು ಪೇಜಾದರೂ ಬರೆದಿರಬೇಕು?—ಹತ್ತು ಪೇಜುಗಳಲ್ಲಿ ಅದೆಷ್ಟು ಪ್ರೇಮವನ್ನು ನೆಯ್ದಿದ್ದಾಳೋ! ಈ ಸಲ ಏನು ಹೆಸರಿಟ್ಟು ಕರೆದಿದ್ದಾಳೋ ನನ್ನ?—ಹೋದ ಸಲ 'ಸುಂದರಾ' ಎಂದು ಬರೆದಿದ್ದಳು! ಈ ಸಲ ಏನಿರ...." ಯೋಚನೆಗೆ ದೊಡ್ಡ ಭಂಗ ಬಂತು! ಇದ್ದಕ್ಕಿದ್ದ ಹಾಗೆಯೇ ಅವನ ಕಡೆಯವರೆಲ್ಲಾ ಒಂದೇ ಕಂಠದಿಂದ "ರಾಮನಾಥ!" ಎಂದು ಕೂಗಿದರು. ರಾಮನಾಥ ಇದ್ದ ಕಡೆಗೆ ಒಂದು 'ಕ್ಯಾಚ್' (catch) ಹೋಗಿ, ಅವನು ಅದನ್ನು ಹಿಡಿಯಲಿ ಎಂದು, ಎಲ್ಲರೂ ಅವನ ಹೆಸರನ್ನು

ಕೂಗಿದರು. ಆದರೆ ರಾಮನಾಥ ಭೂಮಿಯ ಮೇಲೆ ಇರಲಿಲ್ಲ; ಆಕಾಶದಲ್ಲಿ ಮಂಟಪ ಕಟ್ಟುತ್ತಿದ್ದ! ಅಷ್ಟು ಜನರ ಒಂದೇ ಕೂಗಿನಿಂದ, ಆ ಮಂಟಪ ಒಂದೇ ಸಲಕ್ಕೆ ಕಳಚಿ, ಭೂಮಿಗೆ ಬಿದ್ದಂತಾಯಿತು! ಅವನು ಚೆಂಡನ್ನು ಹಿಡಿಯಲಿಲ್ಲ. ಸುತ್ತುಮುತ್ತಲಿಂದ ಎಲ್ಲಾ "ಸ್ಟೆಡೀ (steady), ರಾಮು! —ಸ್ಟೆಡೀ, ರಾಮನಾಥ್" ಎಂಬ ಕೂಗು ಕೇಳಿಬಂತು. ರಾಮನಾಥ, ಅಂದು ಏಕೋ ತನ್ನ ಗ್ರಹಚಾರ ಚೆನ್ನಾಗಿಲ್ಲ ಅಂದುಕೊಂಡ. ಸ್ವಲ್ಪ ಹೊತ್ತಾದ ಮೇಲೆ ಅವನ 'ಕ್ಯಾಪ್ಟನ್' (Captain) ಚೆಂಡನ್ನು ಅವನ ಕೈಗೆ ಕೊಟ್ಟು 'ಬೋಲ್' (bowl) ಮಾಡಹೇಳಿದ. 'ಕ್ಯಾಚ್' ಬಿಟ್ಟದ್ದೇ ಅವನ ಮನಸ್ಸು ಭೂಮಿಗೆ ಇಳಿದುಹೋಗಿತ್ತು. 'ಬೋಲಿಂಗ್'(bowling)ನಲ್ಲೂ ಅವನ ಅದೃಷ್ಟ ಜಳ್ಳಾಯಿತು! ಒಂದು 'ವಿಕೆಟ್ಟೂ' (wicket) ದೊರಕಲಿಲ್ಲ!

ನಾಲ್ಕು ಗಂಟೆಯ ಹೊತ್ತಿಗೆ 'ಟೀ'(tea)ಗೋಸ್ಕರ ಆಟ ನಿಲ್ಲಿಸಿದರು. ಎಲ್ಲರೂ 'ಟೀ'ಗೆ ಕುಳಿತರು. ಅವರೆಲ್ಲಾ ಅಲ್ಲಿ ಕುಳಿತಿದ್ದಾಗ, ರಾಮನಾಥ ನಿಗೆ, ತಾನು ಎಲ್ಲಾದರೂ ಗಲಾಟೆಯಿಲ್ಲದ ಸ್ಥಳಕ್ಕೆ ಹೋಗಿ ವಾಣಿಯ ಕಾಗದ ವನ್ನು ಓದೋಣವೆನ್ನಿಸಿತು. ಆದರೆ ಎಲ್ಲಿ ಹೋಗುವುದು? ಅಲ್ಲದೆ 'ಟೀ' ತಪ್ಪಿಹೋಗುತ್ತೆ. 'ಬಿಟ್ಟ ಟೀ ಬಲುರುಚಿ!' ಎಲ್ಲಿ ನೋಡಿದರೂ ಗಡಿಬಿಡಿ! ಹೊರಗಿನ ಗಡಿಬಿಡಿಗಿಂತ ಅವನ ಒಳಗಿನ ಗಡಿಬಿಡಿಯೇ ಅಸಾಧ್ಯವಾಗಿತ್ತು! ಹತ್ತು ಪೇಜು ಪ್ರೇಮದ ಕಾಗದವನ್ನು ಓದಿ ಮುಗಿಸುವುದಕ್ಕೆ ಅಲ್ಪ ಸ್ವಲ್ಪ ಕಾಲ ಸಾಲದು! ಅಲ್ಲದೆ, ವಾಣಿಯ ಕಾಗದವನ್ನು ಓದುತ್ತಾ ಇರಬೇಕಾದರೆ, ಇನ್ನೊಬ್ಬರ ಸುಳುವಿರಕೂಡದು! ಮುಖ್ಯವಾಗಿ ಮನಸ್ಸಿನಲ್ಲಿ ಶಾಂತಿಯಿರ ಬೇಕು. ಎಷ್ಟು ಸಲ ಓದಿದರೂ ಯಾರೂ ಅಡ್ಡಿಬರುವವರಿಲ್ಲ—ಎಂಬ ಭಾವನೆ ಯಿದ್ದರೆ, ಆಗ ಪ್ರೇಮಪತ್ರದ ರುಚಿ ಹೆಚ್ಚುತ್ತದೆ. ಇಲ್ಲ! ವಾಣಿಯ ಪತ್ರ ವನ್ನು ಓದುವುದಕ್ಕೆ ಈಗ ಎಷ್ಟುಮಾತ್ರವೂ ಸಮಯವಲ್ಲ! ಆಟ ಮುಗಿದ ಕೂಡಲೆ, ಎಲ್ಲಾದರೂ ಒಂದು ಏಕಾಂತವಾದ ಸ್ಥಳಕ್ಕೆ ಹೋಗಿ, ನಿಧಾನವಾಗಿ, ತಡೆತಡೆದು—ಒಂದೊಂದು ಮಾತನ್ನೂ ಸವಿಯುತ್ತ, ಓದಬೇಕು. ಅದೇ ಸರಿ!....ಮನಸ್ಸಿನಲ್ಲಿ ಹೀಗೆ ತೀರ್ಮಾನಿಸಿಕೊಂಡು, ರಾಮನಾಥ ಎಲ್ಲರೊಡನೆ ತಾನೂ 'ಟೀ'ಗೆ ಕುಳಿತ. ಜೊತೆಯವರೆಲ್ಲಾ ಇವನನ್ನು ಹಾಸ್ಯಮಾಡ ತೊಡಗಿದರು. ಗಣೇಶ "ಇವತ್ತು ರಾಮೂಗೆ ಗ್ರಹಣ ಹಿಡಿದಿದೆ!" ಅಂದ.

ನಾಣಿ "ಪಿಶಾಚಿ ಹಿಡಿಯೋದು ಬಾಕಿ!" ಅಂದ. ವಿಜು (ಅವನ 'ಕ್ಯಾಪ್ಟನ್') "ಏನೋ ರಾಮು, 'ಕ್ಯಾಚ್' ಬಂದಾಗ ಎಲ್ನೋಡ್ತಿದ್ಯೋ?" ಎಂದು ಕೇಳಿದ. ಗೋಪಾಲೈಂಗಾರಿ "ಆಕಾಶದಲ್ಲಿ ನಕ್ಷತ್ರ ಎಣಿಸ್ತಿದ್ದ ಕಣ್ರೋ!" ಎಂದ. ಕೃಷ್ಣ "ಇಲ್ಲಾ, ಇಲ್ಲಾ! ಸ್ವರಾಜ್ಯ ಯಾವಾಗ ಕೊಡ್ತಾರೆ ಅಂತ ಯೋಚಿಸ್ತಿದ್ದ! ಅಲ್ವೇನೋ, ರಾಮು?" ಎಂದು ಕೇಳಿದ. ಹೀಗೆ, ಒಬ್ಬೊಬ್ಬರದ್ದು ಒಂದೊಂದು ತರಹ ಟೀಕೆ. ರಾಮುನಾಥ ಒಂದು ಮಾತೂ ಆಡಲಿಲ್ಲ; ಒಳಗೊಳಗೇ ನಗುತ್ತಿದ್ದ. ಅವನ ಗುಟ್ಟು ಅವನಲ್ಲಿಯೇ ಇತ್ತು. ಏನು ಮಾಡುವುದು! ಇವತ್ತು ವಾಣಿಯ ಕಾಗದ ಬಂದು, ಅದನ್ನು ಅವನು ಇನ್ನೂ ಓದಲು ಆಗದೇ ಇದ್ದದ್ದೇ ಇಷ್ಟು ಅನಾಹುತಕ್ಕೆ ಕಾರಣವಾಯಿತು! ಏನು ಬೇಕಾದರೂ ಆಗಲಿ! ಅವಳ ಕಾಗದ—ಪ್ರೇಮದ ಕಾಗದ!—ಹತ್ತು ಪುಟಗಳ ಕಾಗದ!—ಅವನ ಷರಾಯಿ ಜೇಬಿನಲ್ಲಿ ಭದ್ರವಾಗಿತ್ತು! ಆದರೇನು? ಅವಳ ಪ್ರೇಮಭರಿತವಾದ ಕಾಗದವನ್ನು ಅಷ್ಟು ಸಮೀಪದಲ್ಲಿ ಇಟ್ಟುಕೊಂಡೂ, ಅದನ್ನು ಓದಿ, ಸವಿದು, ತೃಪ್ತಿಪಡಲಾಗದಿರುವುದು ಎಂತಹ ದುರದೃಷ್ಟ! —ಎಷ್ಟು ಸಂಕಟಕರ!

'ಟೀ' ಮುಗಿಯಿತು. ರಾಮುನಾಥನ ಕಡೆಯವರ ಆಟಕ್ಕೆ ಪ್ರಾರಂಭವಾಯಿತು. ರಾಮುನಾಥನಿಗೆ ಅದರ ಕಡೆ ಗಮನವೇ ಇಲ್ಲ. ಅವನಿಗೆ, ವಾಣಿಯ ಕಾಗದ ಕಣ್ಣಮುಂದೆ ಕುಣಿಯುತ್ತಿದ್ದಂತೆ ತೋರಿತು. ಒಂದು ಸಲ, ಅದು ಕಾಗದವಾಗಿ ಕಾಣುವುದು; ಒಂದು ಸಲ, ವಾಣಿಯಾಗಿ ಕಾಣುವುದು! ಅವನ ಕಡೆಯವರು ಆಡುತ್ತಿದ್ದಾಗ, ಅವನಿಗೆ ಓದುವುದಕ್ಕೆ ಸ್ವಲ್ಪ ಪುರಸತ್ತು ಇತ್ತು; ಆದರೆ ಓದಲು ಪ್ರಾರಂಭಿಸುವುದಕ್ಕೆ ಹೆದರಿದ. ಸುತ್ತ ಮುತ್ತಲೂ ಸ್ನೇಹಿತರಿದ್ದಾರೆ! ದೂರ ಎಲ್ಲಾದರೂ ಹೋಗಿ ಓದಬೇಕು. ಅರ್ಧ ಓದಿದಾಗ ಇವನ ಆಟದ ಸರ್ತಿ ಬಂದುಬಿಟ್ಟರೆ! ಪ್ರೇಮದ ಕಾಗದವನ್ನು ಅರ್ಧ ಓದಿಬಿಡುವುದು, ಒಣಗಿದ ಗಂಟಲಲ್ಲಿ ಅನ್ನದ ತುತ್ತು ಸಿಕ್ಕಿಕೊಂಡಹಾಗೆ! ನುಂಗುವುದಕ್ಕೆ ಆಗುವುದಿಲ್ಲ—ಉಗುಳುವುಕ್ಕೆ ಮನಸ್ಸಿಲ್ಲ; ಬಲು ಸಂಕಟಕ್ಕೆ ಕಾರಣ! ಇಷ್ಟು ಹೊತ್ತೇ ತಡೆದಿದ್ದನಂತೆ; ಇನ್ನು ಸ್ವಲ್ಪ ಹೊತ್ತು ಕಾಯಲಾರನೆ? ಅಷ್ಟರಲ್ಲಿ ಏನು ಕೊಳ್ಳೆಹೋಗುವುದು? ಕಾಯುವುದೇ ಸರಿ—ಕಾದ. ಓದುವುದಕ್ಕಾಗದಿದ್ದರೆ ಹೋಗಲಿ, ಕಾಗದವನ್ನು ಮುಟ್ಟುತ್ತಾ ಇರಬಹುದಲ್ಲ!—ಅದಕ್ಕೆ ಏನು ಅಡ್ಡಿ? ಏನೂ ಇಲ್ಲ ಷರಾಯಿ ಜೇಬಿನಲ್ಲಿ

ಕೈಹಾಕಿ, ಬೆರಳಿನಿಂದ ಕಾಗದವನ್ನು ಮೆಲ್ಲಗೆ ಸವರತೊಡಗಿದ! ಆಹಾ!—
ಏನು ಸುಖವೋ ಅವನಿಗೆ!

* * * *

ರಾಮನಾಥ ಆಟದ ಸರ್ತಿಯಲ್ಲಿ ಹನ್ನೊಂದನೆಯವನಾಗಿದ್ದ—ಅಂದರೆ, ಕೊನೆಯವನಾಗಿದ್ದ. ಅವನ ದುರದೃಷ್ಟದ ಗಾಳಿ ಅವನ ಕಡೆಯವರಿಗೂ ತಟ್ಟಿತ್ತೆಂದು ಕಾಣುತ್ತೆ! ಮೊದಲು ಹೋದವರೆಲ್ಲಾ, ಒಬ್ಬೊಬ್ಬರಾಗಿ, ಬೇಗಬೇಗ 'ಔಟ್' (out) ಆಗಿ ಹಿಂದಿರುಗಿದರು. ರಾಮನಾಥನ ಸರ್ತಿ ಬೇಗ ಬಂತು. ಇವನ ಕಡೆಯವರು ಗೆಲ್ಲುವುದಕ್ಕೆ ಇನ್ನೂ ಮೂವತ್ತು 'ರನ್ಸ್' (runs) ಬೇಕಾಗಿತ್ತು. ಇವರೇ ಕಡೆಯ ಆಟಗಾರರು! ಇವನ ಕಡೆಯವರ ಭರವಸೆಯೆಲ್ಲಾ ಈಗ ಇವನ ಮೇಲೇ ಇತ್ತು. ರಾಮನಾಥನಿಗಾದರೋ, ತನ್ನ ಮೇಲಿದ್ದ ಜವಾಬ್ದಾರಿಯ ಭಾರಕ್ಕಿಂತ, ತನ್ನ ಪರಾಯಿ ಜೇಬಿನಲ್ಲಿದ್ದ ವಾಣಿಯ ಕಾಗದದ ಭಾರ ಹೆಚ್ಚಾಗಿದ್ದಂತೆ ತೋರಿತು! ಈ ಎರಡು ಭಾರಗಳನ್ನೂ ಹೊತ್ತು, ಆದಷ್ಟು ದೃಢ ಪ್ರತಿಜ್ಞೆಯಿಂದ ಹೊರಟ! ತನ್ನಿಂದ ತನ್ನ ಕಡೆಯವರಿಗೆ ಸೋಲಾಗಬಾರದು ಎಂದುಕೊಂಡ; ಅರ್ಧ ಗಂಟೆ ತನ್ನ ಮನಸ್ಸು ವಾಣಿಯ ಕಾಗದವನ್ನು ಮರೆತಿದ್ದರೆ ಆದೀತಲ್ಲಾ!—ಎಂದುಕೊಂಡ; ವಾಣಿಯ ಕಾಗದ ಇವತ್ತು ಬರದೇ ಇದ್ದರೂ ಚೆನ್ನಾಗಿತ್ತು!—ಎಂದು ತೋರಿತು. ಇಲ್ಲ! ಇಲ್ಲ, ಬಂದದ್ದು ಸರಿ; ಆದರೆ ಸ್ವಲ್ಪ ಮುಂಚೆ ಬರಬೇಕಾಗಿತ್ತು. ಮುಂಚೆ ಹೇಗೆ ಬಂದೀತು? ಇಂದು ಭಾನುವಾರ! ಹುಂ! ಹಾಳು ಭಾನುವಾರ!.... ಹೀಗೆಲ್ಲಾ ಯೋಚಿಸುತ್ತಾ, ಹೋಗಿ ಆಟಕ್ಕೆ ಪ್ರಾರಂಭಿಸಿದ. ಆಟ ನಿಧಾನವಾಗಿ ಸಾಗಿತು. ಕಾಲು ಗಂಟೆ, ಹಾಗೂ ಹೀಗೂ ಕಷ್ಟಪಟ್ಟುಕೊಂಡು ಆಡಿದರು. ಅಷ್ಟು ಹೊತ್ತಿಗೆ, ಗೆಲ್ಲುವುದಕ್ಕೆ ಇನ್ನೂ ಹತ್ತು 'ರನ್ಸ್' ಬೇಕಾಗಿತ್ತು. ಎಲ್ಲರೂ "ಸ್ಟೆಡೀ, ರಾಮೂ!—ಸ್ಟೆಡೀ, ರಾಮೂ!" ಎಂದು ಎಚ್ಚರಿಕೆ ಕೊಡಲು ಆರಂಭಿಸಿದರು. ರಾಮನಾಥನ ಮನಸ್ಸಿಗೆ ವಿಶ್ವಪ್ರಯತ್ನ! ಒಂದು ಕಡೆ, ಜಯಲಕ್ಷ್ಮಿ ಸಿಕ್ಕೂ ಸಿಲುಕದ ಹಾಗೆ ಆಟವಾಡಿಸುತ್ತಿದ್ದಾಳೆ! ಇನ್ನೊಂದು ಕಡೆ, ಪ್ರೇಯಸಿಯ ಕಾಗದ! "ಇತ್ತ ದರಿ!—ಅತ್ತ ಪುಲಿ!" ಅಂದಳಂತೆ ಕೌರವನ ರಾಜ್ಯಲಕ್ಷ್ಮಿ. ಇಲ್ಲಿಯೂ ಸ್ವಲ್ಪ ಹಾಗೇ ಆಗಿತ್ತು! ಆ ಸಂಕಟ ಅನುಭವಿಸಿದವನೇ ಬಲ್ಲ! ಶತ್ರುವಿಗೂ ಬೇಡ! ಆಟ ಇನ್ನೂ ಸ್ವಲ್ಪ ಮುಂದೆ

ಸಾಗಿತು. ಗೆಲ್ಲುವುದಕ್ಕೆ ಇನ್ನೂ ನಾಲ್ಕು ' ರನ್ಸ್ ' ಬೇಕಾಗಿದೆ ಅನ್ನಬೇಕಾದರೆ, ರಾಮನಾಥನ ಜೊತೆಯವನು ಆಡುತ್ತಿದ್ದ. ಈ ಒಂದೆರಡು ಕ್ಷಣಗಳಲ್ಲಿ, ವಾಣಿಯ ಕಾಗದ ರಾಮನಾಥನನ್ನು ಕೆಣಕತೊಡಗಿತು. ಯೋಚಿಸಲಾರಂಭಿಸಿದ: "ಇನ್ನು ಮೇಲೆ ವಾಣಿಯ ಕಾಗದ ಸೋಮವಾರ ಬರೋ ಹಾಗೆ ಏರ್ಪಾಡು ಮಾಡ್ಬೇಕು. ಸಾಕು! ಈ ಹಾಳು ಭಾನುವಾರದ ಸಹ...." ಯೋಚನೆ ಕತ್ತರಿಸಿದ ಹಾಗಾಯಿತು! ಇದ್ದಕ್ಕಿದ್ದ ಹಾಗೆಯೇ, ಇವನ ಜೊತೆಯವನು ಚೆಂಡನ್ನು ಒಂದು ಪಕ್ಕಕ್ಕೆ ಹೊಡೆದು, ಇವನ ಕಡೆಗೆ ಓಡಿ ಬಂದೇ ಬಿಟ್ಟ! ರಾಮನಾಥ ಆ ಓಟಕ್ಕೆ ಸಿದ್ಧವಾಗಿರಲಿಲ್ಲ; ಆದರೂ ಜೊತೆಯವನು ಓಡಿ ಬಂದದ್ದರಿಂದ ಇವನೂ ಅವನಿದ್ದ ಸ್ಥಳದ ಕಡೆಗೆ ಓಡಲೇಬೇಕಾಗಿ ಬಂತು. ಓಡಿದ! ಆದರೆ ಸಮಯಕ್ಕೆ ಸರಿಯಾಗಿ ಓಡದೆ ಇದ್ದದ್ದರಿಂದ ' ರನ್ ಔಟ್ ' (run out) ಆಗಿಬಿಟ್ಟ! ಎಂತಹ ದುರದೃಷ್ಟ! ಇವನ ಕಡೆಯುವರು ನಾಲ್ಕು ' ರನ್ಸ್ ' ಸಾಲದೆ ಸೋತುಬಿಟ್ಟರು! ಜಯಲಕ್ಷ್ಮಿ ಜಾರಿಕೊಂಡಳು! ಎಲ್ಲರೂ ಇವನ ಕಡೆಯುವರು ಸೋತಿದ್ದಕ್ಕೆ ಇವನ ಮೇಲೆ ತಪ್ಪು ಹೊರಿಸಿದರು. ಮೇಲೆ ತನ್ನದು—ಎಂದು ಒಪ್ಪಿಕೊಂಡರೂ, ರಾಮನಾಥ ತನ್ನ ಮನಸ್ಸಿನಲ್ಲಿಯೇ, ಮೆಲ್ಲಗೆ ಆ ತಪ್ಪನ್ನು ವಾಣಿಯ ಕಾಗದದ ಮೇಲೆ ಹೊರಿಸಿದ!

ಆಟ ಮುಗಿದಮೇಲೆ ರಾಮನಾಥ, ಮುಖ ತೊಳೆದುಕೊಂಡು ಅಂಗಿ ತೊಟ್ಟುಕೊಂಡು, ಮನೆಗೆ ಹೊರಡಲು ಸಿದ್ಧನಾದ. ಮನೆಯೇ ಸರಿಯಾದ ಸ್ಥಳ—ವಾಣಿಯ ಕಾಗದವನ್ನು ಓದುವುದಕ್ಕೆ! ಅದಕ್ಕೆ ಸಂಶಯವಿಲ್ಲ! ತನ್ನ ಕೊಠಡಿಯಲ್ಲಿ, ಬಾಗಿಲು ಮುಚ್ಚಿ, ಅಗಣಿ ಹಾಕಿಕೊಂಡು ಕುಳಿತರೆ, ಸೊಳ್ಳೆ ಒಂದು ಬಿಟ್ಟು!—ಇನ್ಯಾರ ಅಡ್ಡಿಯೂ ಇಲ್ಲ! ಮನೆಯೇ ಸರಿ! ಆದರೆ ಮನುಷ್ಯನ ಯೋಚನೆಗಳೆಲ್ಲಾ ಅಷ್ಟು ಸರಾಗವಾಗಿ ನೆರವೇರುತ್ತವೆಯೇ? ಅದು ಶುದ್ಧ ಭ್ರಮೆ! ಗಣೇಶ ಬಂದು, "ಲೋ ರಾಮು, ಇವತ್ತು ' ಅಪೆರಾ ಹೌಸ್ 'ನಲ್ಲಿ ' ದಿ ಸೋಲ್ ಆಫ್ ಲಿಲಿತ್ ' ಅಂತೆ ಕಣೋ! ಬಾರೋ, ಹೋಗಿ ನೋಡೋಣ!" ಅಂದ. ರಾಮನಾಥ ಹೋಗಲು ಮನಸ್ಸಿಲ್ಲದೆ, "ಬೇಡಾ ಕಣೋ, ಬಹಳ ಆಯಾಸವಾಗಿದೆ; ಮನೇಗೆ ಹೋಗ್ಬೇಕು" ಅಂದ. ಗಣೇಶ, "ಇಲ್ಲಮ್ಮಾ, ಬಾ ಹೋಗೋಣ! ನಿಧಾನವಾಗಿ ಹೋಗೋಣ; ಇನ್ನೂ ಆರು ಗಂಟೆ. ಆ ' ಪಿಕ್ಚರ್ ' ನೋಡ್ಬೇಕಮ್ಮಾ ನೀನು!" ಎಂದು ಪುಸಲಾಯಿಸಿದ.

"ನನ್ನ ಹತ್ರ ದುಡ್ಡಿಲ್ವಲ್ಲೋ" ಎಂದ ರಾಮನಾಥ. ಅದು ಮಾತ್ರ ಸುಳ್ಳು! ಜೇಬಿನಲ್ಲಿ ಐದು ರೂಪಾಯಿನ ನೋಟು ಇತ್ತು. ಆದರೆ ಅವನಿಗೆ ತನ್ನ ಗುಟ್ಟನ್ನು ಬಿಟ್ಟುಕೊಡುವುದಕ್ಕಿಂತ ಸುಳ್ಳು ಹೇಳುವುದೇ ಮೇಲಾಗಿ ತೋರಿತು. ಗಣೇಶ ತಾನು ಕೊಡುವುದಾಗಿ ಹೇಳಿದ. ಇನ್ನು ನಿರ್ವಾಹವಿಲ್ಲ! "ಹುಂ, ನಡಿ" ಎಂದು ಹೊರಟ. ನೋಟದ ಪ್ರಾರಂಭಕ್ಕೆ ಇನ್ನೂ ಹತ್ತು ನಿಮಿಷ ಇದೆ ಅನ್ನುವ ಹಾಗೆಯೇ, ಇಬ್ಬರೂ 'ಸಿನಿಮಾ' ಮಂದಿರವನ್ನು ಸೇರಿದರು.

ಇನ್ನೂ ಹತ್ತು ನಿಮಿಷಗಳಿವೆಯಲ್ಲ! ಅಷ್ಟರಲ್ಲಿ ವಾಣಿಯ ಕಾಗದವನ್ನು ಓದಲಾಗುವುದಿಲ್ಲವೆ? ಇಲ್ಲ!—ಆಗುವುದಿಲ್ಲ! ಆ ಗಲಾಟೆಯಲ್ಲಿ ಹೊರಗೆ ನಿಂತು ಓದುವುದು ಹೇಗೆ? ಅಲ್ಲದೆ, ಗಣೇಶನನ್ನೊಬ್ಬನನ್ನೇ ಬಿಟ್ಟಿರುವುದು ಸರಿಯಲ್ಲ! ಅವನೇ ಟಿಕೀಟಿಗೆ ದುಡ್ಡು ಕೊಟ್ಟಿದ್ದಾನೆ! ಕಾಗದವಾದರೋ ಹತ್ತು ಪುಟಗಳಿಗೆ ಕಡಿಮೆ ಇರಲಾರದು. ಪುಟಕ್ಕೆ ಒಂದು ನಿಮಿಷ ಎಷ್ಟು ಮಾತ್ರಕ್ಕೂ ಸಾಲದು! ಔತಣದ ಊಟವನ್ನು ಅವಸರದಲ್ಲಿ ನುಂಗುವುದೇ? ನುಂಗಿದರೂ ರಸಾನುಭವವೆಲ್ಲಿ? ಜನಗಳ ನೂಕುನುಗ್ಗಲು ಹೆಚ್ಚಾಗಿದೆ. ಮುಂಚೆಯೇ ಒಳಗೆ ಹೋಗದಿದ್ದರೆ, ಆಮೇಲೆ ಸರಿಯಾದ ಸ್ಥಳ ಸಿಕ್ಕುವಂತೆ ತೋರಲಿಲ್ಲ. ವಾಣಿಯ ಕಾಗದವನ್ನು ಓದುವುದಕ್ಕೆ ಇದು ಸಮಯವಲ್ಲ! ರಾಮನಾಥ ಆ ಯೋಚನೆ ಬಿಟ್ಟ.

ಇಬ್ಬರೂ ಒಳಗೆ ಹೋಗಿ ಕುಳಿತುಕೊಂಡರು. ಜನ ಒಳಗೆ ಕಿಕ್ಕಿರಿದು ತುಂಬಿದ್ದರು. ಹತ್ತು ನಿಮಿಷ, ವಾಣಿಯ ಕಾಗದವನ್ನು ಓದುವುದಕ್ಕೆ ಸಾಲ ದಾಗಿ ತೋರಿದರೂ, ಕಾಯುವುದಕ್ಕೆ ವಿಪರೀತವಾಗಿ ಕಂಡಿತು! ಆ ಮಾತು ಈ ಮಾತಿನಲ್ಲಿ, ಆ ಹತ್ತು ನಿಮಿಷಗಳನ್ನೂ ಕಳೆದರು. ಆರೂವರೆಗೆ ಸರಿಯಾಗಿ ನೋಟ ಪ್ರಾರಂಭವಾಯಿತು. ಅದಕ್ಕೆ ಮುಂಚೆಯೇ ವಾಣಿಯ ಕಾಗದ ರಾಮನಾಥನ ಮನಸ್ಸನ್ನು ಸೆಳೆಯುವುದಕ್ಕೆ ತೊಡಗಿತ್ತು. ಇನ್ನೂ ಪರಾಯಿ ಜೇಬಿನಲ್ಲೇ ಇದ್ದ ಆ ಕಾಗದವನ್ನು ಮೆಲ್ಲಗೆ ಕೈಗೆ ತೆಗೆದುಕೊಂಡು, ಹಾಗೆಯೇ ತೂಗಲಾರಂಭಿಸಿದ; ಭಾರವಾಗಿತ್ತು! ಹತ್ತು ಪುಟಗಳ ಕಾಗದ ಭಾರವಾಗಿರದೆ ಮತ್ತೇನು? ಆದರೆ ರಾಮನಾಥನಿಗೆ, ಆ ಕಾಗದದ ಭಾರದ ಜೊತೆಗೆ, ತನ್ನ ರಾಣಿಯ ಪ್ರೇಮದ ಭಾರವೂ ಸೇರಿದ್ದ ಹಾಗೆ ತೋರಿತು. ಅಷ್ಟೇ ಅಲ್ಲ,

ಕಾಗದದ ಭಾರಕ್ಕಿಂತ ಪ್ರೇಮವೇ ವಿಾರಿ ತೂಗುತ್ತಿದ್ದಂತೆ ಭಾವಿಸಿಕೊಂಡ.

ಆ ದಿನದ ಚಿತ್ರ ಬಹಳ ಚೆನ್ನಾಗಿತ್ತು. ಮನದಲ್ಲಿ ನಾಟುವ ನೋಟಗಳು! ಹೃದಯವನ್ನು ಕರಗಿಸುವ ಸನ್ನಿವೇಶಗಳು! ಗಣೇಶ ಅವಾಕ್ಕಾಗಿ ಅದನ್ನೇ ನೋಡುತ್ತಿದ್ದ. ರಾಮನಾಥನ ಗಮನವು ಮಾತ್ರ ಬೇರೆ ಕಡೆ ಇತ್ತು. ಅವನ ಮನಸ್ಸಿನ ಫರದೆಯ ಮೇಲೆ, ಅವನ ಜ್ಞಾಪಕವು, ಬೇರೇ ದೃಶ್ಯಗಳನ್ನು ಹರಡುತ್ತಿತ್ತು. ಆ ದೃಶ್ಯಗಳಲ್ಲಿ ವಾಣಿ ನಾಯಕಿ!—ರಾಮನಾಥ ನಾಯಕ! ಒಂದೊಂದು ಚಿತ್ರವನ್ನೂ ತಡೆತಡೆದು ನೋಡತೊಡಗಿದ. ಎಂತಹ ಸುಖದ ಆಟಗಳು ಅವು! ಎಂತಹ ಮೈಮರೆಸುವ ಸನ್ನಿವೇಶಗಳು! ತಾನು ವಾಣಿ ಯೊಡನೆ ಆಡಿದ ಆಟಗಳನ್ನೂ ಸರಸ ವಿನೋದಗಳನ್ನೂ, ಮನದಲ್ಲಿ ಪುನಃ ಪುನಃ ಆಡಿದ. ವಾಣಿಯ ಒನಪು-ಒಯ್ಯಾರ, ಬಿಂಕ-ಬಿನ್ನಾಣಗಳ ನೆನಪು, ಪ್ರವಾಹದಂತೆ ಅವನ ಚಿತ್ತವನ್ನು ತೇಲಿಸಿತು. ಯೋಚನೆಯ ತರಂಗಗಳು ಏಳತೊಡಗಿದವು....“ಕಾಗದದಲ್ಲಿ ಇನ್ನೆಷ್ಟು ಪ್ರೇಮವನ್ನು ತುಂಬಿದ್ದಾಳೋ! —ಏನೇನು ಬಿನ್ನಾಣದ ನುಡಿಗಳನ್ನು ಬರೆದಿದ್ದಾಳೋ!—ಇವತ್ತು ಹಾಳು ಭಾನುವಾರ!—ಸಾಲದುದಕ್ಕೆ ಆಟ ಬೇರೆ!—ಇಲ್ಲದೆ ಇದ್ದಿದ್ದರೆ, ಕಾಗದ ಓದಿ ಎಷ್ಟೋ ಹೊತ್ತಾಗುತ್ತಿತ್ತು!....ನನ್ನ ಕೋಪದ ಕಾಗದಕ್ಕೆ ಸರಿಯಾಗಿ, ಅವಳೂ ಕೋಪದಿಂದ ಬರೆದಿದ್ದಾಳೋ ಏನೋ! ಹತ್ತು ಪೇಜು ತುಂಬಬೇಕಲ್ಲ! ಕೋಪದಿಂದ ಬರೆದಿದ್ದರೆ ಏನಾಯ್ತು? ಅದೂ ಚೆನ್ನಾಗೇ ಇರುತ್ತೆ! ಕೋಪದ ವಾಣಿ, ವಾಣಿಯ ಕೋಪದ ಕಾಗದ!—ಎರಡೂ ಸೊಗಸು!—ವಾಣಿಯುದು ಪ್ರೇಮದಲ್ಲಿ ಹೇಗೆ ದೊಡ್ಡ ಮಾರ್ಗವೋ, ಕೋಪದಲ್ಲೂ ಸ್ವಲ್ಪ ಹಾಗೆಯೇ! ಕೋಪ ಮೂಗಿನ ತುದೀಲೇ ಇರುತ್ತೆ—ಅವಳಿಗೆ! ಕೋಪದಲ್ಲಿ ಮಾತಾಡು ವಾಗಲೂ, ಅವಳ ಧ್ವನಿಯ ಸಂಗೀತ ಕೆಡೋಲ್ಲ!”....ಅವಳ ಧ್ವನಿಯು ನೆನಪಾದೊಡನೆಯೇ, ಅದು ಮೆಲ್ಲನೆ ಅವನ ಹೃದಯದ ಅಂತರಾಳದಲ್ಲಿ ಅತಿ ಸೂಕ್ಷ್ಮವಾದ ಒಂದು ತಂತಿಯನ್ನು ವಿಾಟಿದ ಹಾಗಾಯಿತು........“ವಾಣಿ ವೀಣೆ ನುಡಿಸೋದರಲ್ಲಿ ಈಚೆಗೆ ಇನ್ನೆಷ್ಟು ಕಲಿತಿದ್ದಾಳೋ? ಕಲ್ಯಾಣಿ ಅವಳ ರಾಗ! ಭೈರವಿ? ಅದೂ ಪರವಾಗಿಲ್ಲ! ಅವಳ ಕಂಠ ಯಾವ ರಾಗಕ್ಕಾದರೂ ಕಳೆಕಟ್ಟುತ್ತೆ! ಮುಂದಿನ ಸಲ ಮೈಸೂರಿಗೆ ಹೋದಾಗ, ಎಲ್ಲಾ ರಾಗಾನೂ ಮೊದಲಿಂದ ಕೇಳಬೇಕು. ಆದರೆ ಅವರ ಮನೇಲಿ, ಅವಳನ್ನು ಕೂರಿಸಿಕೊಂಡು

ವೀಣೆ ಕೇಳೋಕೆ ಸ್ವಲ್ಪಾನೂ ಅನುಕೂಲವಿಲ್ಲ! ನಿರಾತಂಕವಾಗಿರೋ ಹಾಗೆ ಒಂದು ಕೊಠಡಿ ಇಲ್ಲ—ಮುಖ್ಯವಾಗಿ! ಏನು ಮನೆಯೋ! ಅವರಾದರೂ ಏನು ಮಾಡಿಯಾರು? ಬಾಡಿಗೆ ಮನೆ!—ಇನ್ನು ಹೇಗೆ ಇದ್ದೀತು? ಊರಲ್ಲಿ ನಮ್ಮನೆ ಆದರೆ ಸರಿ! ಮಹಡಿಮೇಲಿನ ಕೊಠಡಿಯೆಲ್ಲಾ ನಮ್ಮದೇ ಆಗಿರುತ್ತೆ! ನಮ್ಮೂರಿಗೆ ಬಂದರೆ, ಅವಳ ವೀಣೆಗೆ ಬಿಡುವಿಲ್ಲ. ವಾಣಿ!—ವೀಣೆ! ವಾಣಿಯಿಂದ ವೀಣೆಗೆ ಕಳೆ! ವೀಣೆಯಿಂದ ವಾಣಿಗೆ ಕಳೆ!....ಏಪ್ರಿಲ್ ಹದಿನೈದಕ್ಕೆ ರಜ ಬರುತ್ತೆ. ಹದಿನಾರು—ಮೈಸೂರು; ಇಪ್ಪತ್ತು ಅಥವಾ ಇಪ್ಪತ್ತೆರಡಕ್ಕೆ—ವಾಣೀನೂ ಕರಕೊಂಡು—ನಮ್ಮೂರು...."

ಹೀಗೆ ನಡೆದದ್ದು, ನಡೆಯದೆ ಇದ್ದದ್ದು, ನಡೆಯಬೇಕಾದ್ದು, ಎಲ್ಲವನ್ನೂ ಕಲ್ಪಿಸಿಕೊಳ್ಳಲಾರಂಭಿಸಿದ! ಅವನ ಮನವನ್ನು ಹೊಕ್ಕು, ಅವನ ಕಲ್ಪನೆಯ ಚಿತ್ರಗಳನ್ನು ನೋಡುವುದಕ್ಕೆ ಸಾಧ್ಯವಾಗಿದ್ದಿದ್ದರೆ, ಆ ಪ್ರೇಮಿಗಳ ಎಣೆಯಿಲ್ಲದ ಪ್ರಣಯದ ಪರಾಕಾಷ್ಠತೆಯನ್ನು ನೋಡಬಹುದಾಗಿತ್ತು.

* * * *

ಎಂಟೂವರೆ ಗಂಟೆ ಹೊತ್ತಿಗೆ ನೋಟ ಮುಗಿಯಿತು. ಇಬ್ಬರೂ ಸೈಕಲ್ ಹತ್ತಿ ಮನೆಯ ಕಡೆ ಹೊರಟರು. ದುರದೃಷ್ಟ ಇನ್ನೂ ರಾಮನಾಥನ ಬೆನ್ನು ಬಿಟ್ಟಿರಲಿಲ್ಲ! ಅರ್ಧ ದಾರಿ ಬಂದಿದ್ದರು; ಆಗ ರಾಮನಾಥನ ಸೈಕಲ್ಲಿನ ಮುಂದುಗಡೆಯ ಚಕ್ರ 'ಠಿಸ್!' ಎಂದು ಶಬ್ದಮಾಡಿತು! ಅವನು "ಇದೇನು ಬಂತಪ್ಪಾ!" ಎಂದು, ಗೊಣಗುತ್ತ ಇಳಿದ. ಗಣೇಶನೂ ಇಳಿದ. ನೋಡಿದರೆ, ಮೊಳೆಸಹಿತವಾಗಿದ್ದ ಒಂದು ಕುದುರೆಯ ಲಾಳ, 'ಟಯರ್'(tyre)ನಲ್ಲಿ ಚೆನ್ನಾಗಿ ಊರಿಹೋಗಿದೆ! ರಾಮನಾಥ, "ಅಯ್ಯೋ, ನನ್ನ ಪುಣ್ಯವೇ!" ಎಂದು, ಅದರ ಮೇಲೆ ಸಿಟ್ಟಿನಿಂದ ಉಗುಳಿ, ಚರಂಡಿಗೆ ಎಸೆದು, ಗಣೇಶನನ್ನು ಕುರಿತು, "ಗಣೇಶಾ, ಇವತ್ತೆಲ್ಲಾ ಹೀಗೇ ಆಗಿದೆ ನೋಡು!—ನನ್ನ ಗ್ರಹಚಾರ! ಬೆಳಗಿನಿಂದಾ ಒಂದಲ್ಲಾ ಒಂದು ಕಿರಿಕಿರಿ!" ಎಂದ.

"ಯಾಕೋ?" ಎಂದು ಕೇಳಿದ ಗಣೇಶ.

"ನಮ್ಮ ಮನೇ ಹತ್ತಿರ ಒಂದು ಕರೀ ಬೆಕ್ಕು ಸುಳಿದಾಡುತ್ತೆ, ನೋಡು. ಅದು ಎಂದೂ ಇಲ್ಲದ್ದು ಇವತ್ತು ಬೆಳಗ್ಗೆ, ನಾನು ಕಣ್ಣು ಬಿಡೋ ಹೊತ್ತಿಗೆ ಸರಿಯಾಗಿ ನನ್ನ ರೂಮಿನ ಕಿಟಕೀಲಿ ಕೂತಿತ್ತು—ನೋಡು! ನೋಡಿದ

ಕೂಡ್ಲೆ ಮುಸುಕು ಹಾಕಿಕೊಂಡೆ! ಅವರೆ ಏನ್ಮಾಡೋದು!—ಮೊದಲೇ ನೋಡ್ಬಿಟ್ಟಿದ್ದೆ! ಇಷ್ಟಕ್ಕೆಲ್ಲಾ ಆ ಹಾಳು ಬೆಕ್ಕು ಕಾರಣ, ಕಣೋ! ಒಂದಲ್ಲಾ ಒಂದು ದಿನ ಅದನ್ನು ಸಾಯಿಸಿಬಿಡ್ತೀನಿ—ಬಿಡೊಲ್ಲ! ಕೊಂದ್ರೆ ಪಾಪ ಅಂತಾರೆ! ಪಾಪವೋ ಪುಣ್ಯವೋ! ಆ ಕಾಣದ ಪಾಪಾನಾದರೂ ಕಟ್ಕೋಬಹುದು; ಈ ಕಂಡ ಗ್ರಹಚಾರಾ ಸಹಿಸೋದು ಕಷ್ಟ!"

"ಪಾಪ! ಅದೇನ್ಮಾಡತ್ತೋ? ನೀನೊಬ್ಬ ಹುಚ್ಚ!"

"ನಾನೂ ನಂಬ್ತಿರ್ಲಿಲ್ಲ, ಕಣೋ! ಆದರೆ ಇವತ್ತಿನಿಂದ ನಂಬಿಕೆಗೆ ಪ್ರಾರಂಭವಾಗಿದೆ!"

* * * *

ಇಬ್ಬರೂ ಸೈಕಲ್ಲುಗಳನ್ನು ತಳ್ಳಿಕೊಂಡು, ನಡೆಯುತ್ತ ಹೊರಟರು. ರಾಮನಾಥ ಮನೆಗೆ ಬಂದಾಗ ಒಂಬತ್ತೂವರೆಯಾಗಿಬಿಟ್ಟಿತ್ತು. ಮನೆಯಲ್ಲಿ ಎಲ್ಲರದ್ದೂ ಊಟವಾಗಿ, ಇವನ ಚಿಕ್ಕಮ್ಮ ಇವನಿಗಾಗಿ ಕಾದಿದ್ದರು. ರಾಮನಾಥ ಬೇಗ ಬೇಗ ಬಟ್ಟೆ ಬಿಚ್ಚಿ, ಪಂಚೆ ಉಟ್ಟುಕೊಂಡು, ಕೈಕಾಲು ಮುಖ ತೊಳೆದುಕೊಂಡು, ಊಟಕ್ಕೆ ಕುಳಿತ. ಹಸಿವಾಗಿತ್ತು; ಬೇಗ ಬೇಗ ಊಟ ಮಾಡಿ ತನ್ನ ಕೊಠಡಿಗೆ ಬಂದ. ಊಟದಿಂದ ಹೊಟ್ಟೆಯ ಹಸಿವು ಅಡಗಿತು ಅಷ್ಟೆ; ಹೃದಯದ ಹಸಿವು ನೂರ್ಮಡಿಯಾಯಿತು! ತನ್ನ ಕೊಠಡಿಗೆ ಬಂದವನೇ ಬಾಗಿಲು ಮುಚ್ಚಿ ಅಗಣಿ ಹಾಕಿದ. ಇನ್ನು ಯಾರ ಆತಂಕವೂ ಇಲ್ಲ! ಯಾರೂ ಬರುವ ಹಾಗಿಲ್ಲ! ಜೇಬಿನಿಂದ ವಾಣಿಯ ಕಾಗದವನ್ನು ತೆಗೆದುಕೊಂಡು 'ಈಸೀಛೇರ್' (easy chair) ಮೇಲೆ ಕುಳಿತುಕೊಂಡ. ಅವನ ಮುಖ ಉಲ್ಲಾಸದಿಂದ ಅರಳಿತು. ಪ್ರೇಯಸಿಯ ಪ್ರೇಮವನ್ನು ಎದುರುಗೊಳ್ಳಲು ಅವನ ಹೃದಯ ತೆರೆದ ಹಾಗಾಯಿತು. ಆಸೆ ಕಣ್ಣುಗಳಲ್ಲಿ ಒಟ್ಟುಗೂಡಿತು. ಕಾಗದವನ್ನು ಒಡೆಯತೊಡಗಿದ. ಅವನ ದೇಹದಲ್ಲಿ ರಕ್ತವು "ವಾಣೀ!—ವಾಣೀ!" ಎಂದು ಹಾಡುತ್ತ ಹರಿಯಲಾರಂಭಿಸಿತು. ಈಗ, ಒಂದೊಂದು ಪುಟವನ್ನೂ, ಹತ್ತು ಹತ್ತು ನಿಮಿಷ ಓದಬಹುದು! ಕೇಳುವವರು ಯಾರು? ಅವಳ ಪತ್ರದ ಪ್ರೇಮವನ್ನು ಸವಿಯುತ್ತ, ರಾತ್ರಿಯನ್ನೆಲ್ಲಾ ಕಳೆಯಬಹುದು! ತಡೆಯುವವರಾರು? "ನನ್ನ—ನನ್ನ ವಾಣಿಯ ಕಾಗದ!" ಎಂದು ಮೆಲ್ಲನೆ ಹೇಳುತ್ತ, ಕಾಗದವನ್ನು ಹೊರಕ್ಕೆ ತೆಗೆದ. ಬಹಳ ಪುಟ

ಗಳಿದ್ದುವು. ಅವುಗಳ ಮಡಿಕೆಯನ್ನು ಬಿಚ್ಚಿದ. ಮೊದಲನೆಯ ಹಾಳೆ ಬರೀದು! ....“ ಇದೇನು!—ಎರಡನೇ ಹಾಳೆ? ಅದೂ ಬರೀದು!....ಮೂರನೆಯದೋ? ....ಅದೂ ಬರೀದೇ! ನಾಲ್ಕು-ಐದು-ಆರು—ಏನೂ ಇಲ್ಲ! ತಿರುವಿಹಾಕಿದ ಹಾಗೆಲ್ಲಾ ಬರೀ ಹಾಳೆಗಳೇ ಬರುತ್ತಿವೆಯಲ್ಲಾ! ಇದೇನು ಹುಚ್ಚು ವಾಣೀಗೆ! ಅದೆಷ್ಟು ಬರೀ ಹಾಳೆಗಳನ್ನಿಟ್ಟಿದ್ದಾಳೆ!....” ರಾಮನಾಥನ ಮೈ ತಣ್ಣಗಾಯಿತು; ಹುಬ್ಬು ಗಂಟಾಯಿತು. ಹಾಳೆಗಳನ್ನು ತಿರುವಿಹಾಕಿದ. ಏಳು-ಎಂಟು-ಒಂಬತ್ತು—ಎಲ್ಲಾ ಖಾಲೀ ಹಾಳೆಗಳೇ! ಹತ್ತನೆಯದು? ಅದೇ ಕೊನೆಯದು. ಹಾ! ಅದರಲ್ಲಿ ಏನೋ ಬರೆದಿರುವ ಹಾಗಿದೆ! ಏನೆಂದು ಬರೆದಿದ್ದಾಳೆ?

‘....ನಿಮ್ಮ ಕೋಪದ ಕಾಗದ ತಲ್ಪಿತು. ಆದರೆ ಸಾಲದು ಕೋಪ! ಈ ದೊಡ್ಡ ಕಾಗದ ನೋಡಿದಾಗ, ನಿಮಗೆ ಎಷ್ಟು ಸಿಟ್ಟು ಬಂತೋ ಅದನ್ನೆಲ್ಲಾ ತುಂಬಿ, ದಯವಿಟ್ಟು ಇನ್ನೊಂದು ಕಾಗದ ದಯಪಾಲಿಸಬೇಕು.

ನಿಮ್ಮ,

**ವಾಣಿ.’**

—ಎಂದು. ಇದೇನು ಹುಡುಗಾಟ!—ಬರೀ ಹಾಳೆಗಳನ್ನು ತುಂಬಿ! ಈ ಕಾಗದದ ದೆಸೆಯಿಂದ ಮುದುಕಿಯ ಮೇಲೆ ಬೈಸಿಕಲ್ ಬಿಟ್ಟುಬಿಡುವುದರಲ್ಲಿದ್ದ! ‘ಕ್ಯಾಚ್’ ಹಿಡೀಲಿಲ್ಲ! ಗೆಲ್ಲೋ ಸಮಯದಲ್ಲಿ ‘ರನ್ ಔಟ್’ ಆಗಿಬಿಟ್ಟ! ಎಲ್ಲಾ ಈ ಕಾಗದದ ದೆಸೆಯಿಂದ! ವಾಣಿಯ ಹುಡುಗಾಟ! ರಾಮನಾಥನ ಮನಸ್ಸಿಗೆ ಹೇಗೆ ಆಯಿತೋ ಅದನ್ನು ವರ್ಣಿಸಿ ಹೇಳುವುದು ಕಷ್ಟ! ಅನುಭವಿಸಿ ತಿಳಿದುಕೊಳ್ಳತಕ್ಕ ವಿಷಯ ಅದು! ಆದರೆ ಅವನ ನಿರೀಕ್ಷೆಯಲ್ಲಿ ಒಂದು ವಿಷಯ ಮಾತ್ರ ನಿಜವಾಗಿತ್ತು—ನೋಡಿ! ವಾಣಿಯ ಕಾಗದದಲ್ಲಿ ಹತ್ತು ಪೇಜುಗಳಿರಬಹುದು ಅಂದುಕೊಂಡಿದ್ದ; ಹತ್ತು ಪೇಜುಗಳಿದ್ದುವು! ಆ ಬರೀ ಹಾಳೆಗಳನ್ನೆಲ್ಲಾ ಪುನಃ ಪುನಃ ತಿರುವಿಹಾಕುತ್ತಾ ತನ್ನಷ್ಟಕ್ಕೆ ತಾನೇ ನಕ್ಕ. ಅವನಿಗೆ ಆ ಒಂದೊಂದು ಬರಿಯ ಹಾಳೆಯೂ, ಅವನನ್ನು ಅಣಕಿಸಿ ನಗುವಂತೆ ಬೋಧೆಯಾಯಿತು. ವಾಣಿ ಇದನ್ನು ಯೋಚಿಸುತ್ತಾ ಎಷ್ಟು ನಲಿಯುತ್ತಿದ್ದಾಳೋ! ರಾಮನಾಥ, ಅವಳು ಎದುರಿಗೆ ನಿಂತು, ಹಾಸ್ಯದಿಂದ ನಗುತ್ತ, ಬಳುಕಿ ನಲಿಯುತ್ತಿದ್ದಾಳೆ—ಎಂದೇ ಭಾವಿಸಿಕೊಂಡ.

ಅವನ ನಿರಾಶೆ, ಕೋಪ—ಎಲ್ಲಾ ಮಾಯವಾಯಿತು. ಕೊನೆಯ ಹಾಳೆಯಲ್ಲಿ ‘ನಿಮ್ಮ, ವಾಣಿ’ ಎಂದಿದ್ದ ಸ್ಥಳವನ್ನು ಮೆಲ್ಲನೆ ತನ್ನ ತುಟಿಗೆ ಒತ್ತಿಕೊಂಡ!

ಎಷ್ಟಾದರೂ ರಸಿಕ—ನೋಡಿ!!

---

# ಜೋಯಿಸರ ಚೌಡಿ !

ಮಲ್ಲಿಗೇಹಳ್ಳಿ ಕೃಷ್ಣಜೋಯಿಸರ ಕೀರ್ತಿ, ಪ್ರಭಾವಗಳು ಬಹು ಜನಗಳಿಗೆ ತಿಳಿದಿರಲಾರದು. ಪಾಪ, ಅದು ಅವರ ತಪ್ಪಲ್ಲ!—ಕಾಲಮಹಿಮೆ! ಇದು ಹಿಟ್ಲರ್-ಮುಸ್ಸೋಲಿನಿಗಳ ಕಾಲ! ಗಾಂಧಿ-ನೆಹರೂಗಳ ಯುಗ! ಮನೆಯ ಮೂಲೆಯಲ್ಲಿ ಕುಳಿತು, ಪ್ರಪಂಚವನ್ನೇ ನೋಡುವ ಕಾಲ! ಇಂಥಾ ಕಾಲದಲ್ಲಿ, ಕೃಷ್ಣಜೋಯಿಸರು ನಮ್ಮ ನಾಡಿನ ಜನರ ಗಮನಕ್ಕೆ ಇನ್ನೂ ಬಂದಿರದೆ ಇದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಮಲ್ಲಿಗೇಹಳ್ಳಿಯಲ್ಲಿ ಅವರ ಸ್ಥಾನ ಮಹತ್ವದಿಂದ ಕೂಡಿದ್ದು. ಅಲ್ಲಿಗೆ ಅವರೇ ಹಿಟ್ಲರ್-ಮುಸ್ಸೋಲಿನಿ, ಗಾಂಧಿ-ನೆಹರು ಎಲ್ಲಾ! ಮಲ್ಲಿಗೇಹಳ್ಳಿಗೆ ಅವರು ಮೆದುಳಿನಂತಿದ್ದರೆಂದರೆ, ಅದರಲ್ಲಿ ಎಲ್ಲಾ ಹೇಳಿ ಮುಗಿಸಿದಂತಾಗುತ್ತದೆ.

ಕೃಷ್ಣಜೋಯಿಸರು ತಮ್ಮ ಹೆಸರನ್ನು ಸಾರ್ಥಕಗೊಳಿಸುವ ಕಸಬಿನಲ್ಲಿ ನಿರತರಾಗಿದ್ದರು—ವಂಶಾನುಗತವಾಗಿ ಬಂದ ಕಸಬು. ಇದರ ಜೊತೆಗೆ, ಇವರೇ ಹೊಸದಾಗಿ ಒಂದು ಕಸಬನ್ನೂ ಕಲಿತಿದ್ದರು ; ಅದು ಭೂತಪಿಶಾಚಿಗಳನ್ನು ಬಿಡಿಸುವ ಮಂತ್ರವಿದ್ಯೆ. ಬರಬರುತ್ತ, ವಂಶದ ಕಸಬಿಗಿಂತ, ಇವರು ಹೊಸದಾಗಿ ಕಲಿತ ಕಸಬೇ ಬೆಳೆಯುತ್ತ ಬಂದು, ಒಂದೆರಡು ವರ್ಷದೊಳಗಾಗಿ ಮಲ್ಲಿಗೇಹಳ್ಳಿಯ ಸುತ್ತಮುತ್ತಿನ ಹದಿನೈದಿಪ್ಪತ್ತು ಹಳ್ಳಿಗಳಿಗೂ ವ್ಯಾಪಿಸಿತು. ಇವರ ಕೆಲಸ—ಎಲ್ಲಿ ಯಾರಿಗೆ ಭೂತಪಿಶಾಚಿಗಳು ಹಿಡಿದಿವೆಯೋ ಅಲ್ಲಿಗೆ ಹೋಗೋದು, ಆ ಭೂತಪಿಶಾಚಿಗಳನ್ನ ಅವರಿಂದ ಬಿಡಿಸೋದು, ಅವುಗಳನ್ನೆಲ್ಲಾ ಮಂತ್ರಿಸಿದ ತೆಂಗಿನಕಾಯಿಗಳಲ್ಲಿ ಸೆರೆಹಿಡಿದು ತಂದು, ಮಲ್ಲಿಗೇಹಳ್ಳಿ ಕೆರೇ ಏರಿ ಮೇಲಿನ ಮುದಿ ಹುಣಿಸೇಮರದಲ್ಲಿ ದಿಗ್ಬಂಧನ ಮಾಡಿಡೋದು—ಆಗಿತ್ತು. ಈ ಕಾರ್ಯಕ್ಕೆ ಅವರಿಗೆ, ಆಯಾ ಭೂತಪಿಶಾಚಿಗಳ ಕಾಟ-ಪ್ರಾಬಲ್ಯ, ಅವುಗಳ ಬಾಧೆಗೊಳಗಾಗಿದ್ದವರ ಸ್ಥಿತಿಗತಿಗಳಿಗನುಸಾರವಾಗಿ, ಸಂಭಾವನೆ ಸಿಕ್ಕುತ್ತಿತ್ತು. ಕೆಲವು ಕಾಲದಲ್ಲೇ, ಭೂತಪಿಶಾಚಿಗಳಿಗೆ ಸೆಂಟ್ರಲ್ ಜೈಲಿನಂತಿದ್ದ ಆ ಮುದಿ ಹುಣಿಸೇಮರದಲ್ಲಿ, ಎಲೆಗಳಿಗಿಂತ, ಜೋಯಿಸರು ತಂದು ಸೇರಿಸಿದ ಕೈದಿಗಳ ಸಂಖ್ಯೆಯೇ ಹೆಚ್ಚಾಯಿತು! ಹೀಗೆ, ಭೂತಭಯಂಕರರಾದ ಜೋಯಿಸರಿಗೆ,

ಯಾರೋ ಹಾಸ್ಯಕ್ಕಾಗಿ ಇಟ್ಟ "ಪಿಶಾಚಿ ಜೋಯಿಸರು" ಎಂಬ ಹೆಸರು ಅನ್ವರ್ಥವೂ, ಶಾಶ್ವತವೂ ಆಗಿಹೋಯಿತು! ಅವರೂ ಹೆಸರಿಗೆ ತಕ್ಕ ಹಾಗೇ ಇದ್ದರು ಅನ್ನಿ. ಒಳ್ಳೇ ಸ್ಥೂಲಕಾಯದ ಆಜಾನುಬಾಹು ಆಸಾಮಿ; ಕಪ್ಪು ಬಣ್ಣಕ್ಕೆ ಮಾತೃಭೂಮಿ! ಪಿಶಾಚಿಗಳನ್ನು ಬಿಡಿಸಲು ಮಂತ್ರ ಹೇಳಿ ಹೇಳಿ, ಗಂಟಲಲ್ಲಿ ಗೊಗ್ಗರ ಧ್ವನಿ ಹೊರಡುತ್ತಿತ್ತು!

ಕೃಷ್ಣಜೋಯಿಸರ ಅಂತರಂಗದಲ್ಲಿ, ಭೂತಪಿಶಾಚಿಗಳ ವಿಷಯದಲ್ಲಿ ಒಂದು ತೆರನ ಮಮತೆ ಉಂಟಾಗಿತ್ತು! ಅವರು ಈವರೆಗೆ ಗಳಿಸಿದ್ದ ಸುಮಾರು ಐದು ಸಾವಿರ ರೂಪಾಯಿಗಳಲ್ಲಿ, ನಾಲ್ಕು ಸಾವಿರ ರೂಪಾಯಿಗಳಾದರೂ ಅವುಗಳ ದೆಸೆಯಿಂದ ಬಂದದ್ದು. ಅಂಥಾದ್ದರಲ್ಲಿ ಮಮತೆ ಇಲ್ಲದೆ ಇರುತ್ತದೆಯೇ!

ಜೋಯಿಸರು ಇತರರಿಗೆ ಹಿಡಿಯುತ್ತಿದ್ದ ಭೂತಪಿಶಾಚಿಗಳನ್ನು ಓಡಿಸಿ ಗಂಟುಮಾಡುವ ಭರದಲ್ಲಿ, ತಮ್ಮನ್ನು ತಾವೇ ಮರೆತಿದ್ದರು. ಸರ್ವ ಭೂತ ಪಿಶಾಚಿಗಳ ಕೊರಳಿಗೆ ಪಾಶವಾಗಿದ್ದ ಕೃಷ್ಣಜೋಯಿಸರು, ತಮ್ಮೆದೆಯಲ್ಲಿ ಒಂದು ಪಿಶಾಚಿಗೆ ಸ್ಥಳ ಕೊಟ್ಟರು. ಅದು ಧನಪಿಶಾಚಿ! ದುಡ್ಡಿನ ರುಚಿ ಕಂಡ ಇವರ ಧನದಾಹ, ಉಪ್ಪು ತಿಂದವನ ನೀರಡಿಕೆಯಂತೆ, ನಿರಂತರವೂ ಬಾಧಿಸತೊಡಗಿತು. ಕುಡುಕನು ಹೆಂಡಕ್ಕೆ ದಾಸನಾದಂತೆ, ಭಂಗಿಕೋರನು ಭಂಗಿಸೊಪ್ಪಿಗೆ ಬಲಿಯಾದಂತೆ, ಅಫೀಮು ಸೇವಕನು ಅಫೀಮಿಗೆ ಸೋತಂತೆ, ಕೃಷ್ಣಜೋಯಿಸರು ಧನಪಿಶಾಚಿಗೆ ದಾಸರಾದರು—ಬಲಿಯಾದರು—ಸೋತರು! ತಮ್ಮ ದೇಹಗತವಾದ ಧನಪಿಶಾಚಿಯು ಹಸಿವನ್ನಡಗಿಸಲು, ಭೂತಪಿಶಾಚಿಗಳನ್ನು ಬಿಡಿಸಿದ್ದರಿಂದ ಅವರಿಗೆ ಬರುತ್ತಿದ್ದ ಸಂಭಾವನೆಯ ಸಣ್ಣ ತುತ್ತುಗಳು ಸಾಲದೆಹೋದವು. ಯಾರೋ ಅದೃಷ್ಟಶಾಲಿಗೆ, ಭೂಮಿಯಲ್ಲಿ ಅಷ್ಟು ಚಿನ್ನ ಸಿಕ್ಕಿತಂತೆ—ಇಷ್ಟು ಒಡವೆ ಸಿಕ್ಕಿತಂತೆ! ಕೊಪ್ಪರಿಗೆ ಹಣ ಸಿಕ್ಕಿತಂತೆ!—ಎಂಬ ಕಥೆಗಳನ್ನು ತಮ್ಮ ಬಾಲ್ಯದಿಂದಲೂ ಕೇಳಿದ್ದರು. ಆಗ ಆ ಕಥೆಗಳ ವಿಚಾರದಲ್ಲಿ ಅವರ ಭಾವನೆ ಹೇಗಾದರೂ ಇದ್ದಿರಲಿ, ಈಗ ಅವುಗಳ ವಿಚಾರದಲ್ಲಿ ಹೆಚ್ಚು ನಂಬಿಕೆಯುಂಟಾಗಿತ್ತು. ಹೊಸದಾಗಿ ಅಂಥ ಕಥೆಗಳನ್ನು ಯಾರಾದರೂ ಹೇಳಿದರೆ ಬಹಳ ಆಸಕ್ತಿಯಿಂದ ಕೇಳುವರು. ಹೌದು, ಏಕೆ ಬಾರದು? ಕೃಪಣರಾದ ಧನಿಕರು ಹಣವನ್ನು ನೆಲದಲ್ಲಿ ಹೂಳಿಡುವುದು ಅಪರೂಪವೇನೂ ಅಲ್ಲ. ಹಾಗೆ ಹೂತಿಟ್ಟ ಹಣ, ಧನಯೋಗವಿದ್ದ ಪುಣ್ಯವಂತರಿಗೆ ಲಭಿಸುವುದೂ ಅಪರೂಪವಲ್ಲ. ತಮಗೂ

ನಾಲ್ಕಾರು ಕೊಪ್ಪರಿಗೆ ಹೂತಿಟ್ಟ ಹಣ ಸಿಕ್ಕರೆ ಎಷ್ಟು ಚೆನ್ನಾಗಿರುತ್ತೆ!—ಎಂದು ಬಾಯಿ ಬಾಯಿ ಬಿಡುತ್ತಿದ್ದರು. ಆದರೆ ಭೂಮಿಯಲ್ಲಿರುವ ಹಣ ಬರೀ ಕಣ್ಣಿಗೆ ಕಾಣಿಸುವುದಲ್ಲ—ಅಂಜನ ಹಾಕಿಕೊಂಡು ನೋಡಬೇಕು. ಅಂಜನ ಪ್ರಯೋಗ ಜೋಯಿಸರಿಗೆ ಬಾರದ ವಿದ್ಯೆ. ಭೂಗತವಾದ ದ್ರವ್ಯವನ್ನು ಪಡೆಯುವುದಕ್ಕೆ ಅಂಜನಪ್ರಯೋಗ ಪೀಠಿಕಾ ಪ್ರಕರಣ. ಆದುದರಿಂದ ಜೋಯಿಸರು ಅದನ್ನು ಕಲಿಯಲು ನಿರ್ಧರಿಸಿದರು. ಒಂದೆರಡು ತಿಂಗಳು ಊರು ಸುತ್ತಿಕೊಂಡು ಬರುವುದಾಗಿ ಮನೆಯಲ್ಲಿ ಹೆಂಡತಿಗೆ ತಿಳಿಸಿ, ತಾವಿಲ್ಲದ ವೇಳೆಯಲ್ಲಿ ಸಂಸಾರ ತೊಂದರೆಯಿಲ್ಲದೆ ನಡೆಯುವಂತೆ ತಕ್ಕ ಏರ್ಪಾಟು ಮಾಡಿ, ಕೃಷ್ಣ ಜೋಯಿಸರು, ಒಂದು ಶುಭದಿವಸ, ಮಲ್ಲಿಗೇಹಳ್ಳಿಯಿಂದ ಪ್ರಯಾಣ ಬೆಳೆಸಿದರು. ಎರಡು ತಿಂಗಳಲ್ಲಿ ಬರುವುದಾಗಿ ಹೇಳಿದ್ದ ಜೋಯಿಸರು, ಮೂರು ತಿಂಗಳಾದರೂ ಬರಲೇ ಇಲ್ಲ. ನಾಲ್ಕು–ಐದನೇ ತಿಂಗಳುಗಳೂ ಕಳೆದುವು. ಜೋಯಿಸರ ಸುಳಿವೇ ಇಲ್ಲ. ಕೊನೆಗೆ ಆರನೆಯ ತಿಂಗಳಲ್ಲಿ, ಮಲೆಯಾಳದ ಯಾವುದೋ ಒಂದು ಊರಿನಿಂದ ಜೋಯಿಸರ ಹೆಂಡತಿಗೆ ಒಂದು ಕಾಗದ ಬಂತು. ತಾವು ಕ್ಷೇಮವಾಗಿರುವುದಾಗಿಯೂ, ಇನ್ನು ಹದಿನೈದು ದಿನಗಳಲ್ಲಿ ಊರು ಸೇರುವುದಾಗಿಯೂ ಬರೆದಿದ್ದರು. ಅದರಂತೆಯೇ ಹದಿನೈದು ದಿನಗಳನಂತರ ಕೃಷ್ಣ ಜೋಯಿಸರು ಪುನಃ ಮಲ್ಲಿಗೇಹಳ್ಳಿಗೆ ಬಂದರು.

ಕೃಷ್ಣ ಜೋಯಿಸರು ಊರು ಬಿಟ್ಟವರು ನೆಟ್ಟಗೆ ಮಲೆಯಾಳಕ್ಕೆ ಹೋದರು. ಅಲ್ಲಿ ಒಂದು ತಿಂಗಳು ಕಳೆಯುವುದರೊಳಗಾಗಿ, ಒಬ್ಬ ಪ್ರಸಿದ್ಧ ಮಾಂತ್ರಿಕನ ಸ್ನೇಹವನ್ನು ಸಂಪಾದಿಸಿ, ತಾವು ತೆಗೆದುಕೊಂಡುಹೋಗಿದ್ದ ಐದುನೂರು ರೂಪಾಯಿಗಳಲ್ಲಿ ಮುನ್ನೂರು ರೂಪಾಯಿಗಳನ್ನು ಖರ್ಚುಮಾಡಿ, ಅಂಜನದ ತಯಾರಿಕೆ–ಪ್ರಯೋಗ, ಅದಕ್ಕೆ ಸಂಬಂಧಿಸಿದ ಮಂತ್ರ–ತಂತ್ರಾದಿಗಳು—ಎಲ್ಲವನ್ನೂ ಕಲಿತು, ಅಲ್ಲಿಯೇ ಒಂದೆರಡು ಕಡೆ ತಮ್ಮ ವಿದ್ಯೆಯನ್ನು ಪರೀಕ್ಷೆಗೆ ಈಡುಮಾಡಿ, ಚೆನ್ನಾಗಿ ಬಂದಿತೆಂದು ಮನದಟ್ಟಾದಮೇಲೆ, ಊರಿಗೆ ಬಂದರು.

* * * *

ಮಲ್ಲಿಗೇಹಳ್ಳಿಯಿಂದ ಹೊನ್ನವಳ್ಳಿಗೆ ಎಂಟು ಮೈಲಿ. ಹಳ್ಳಿ ಗಾಡಿಗಳೂ, ಜನರೂ ತಿರುಗಿ ತಿರುಗಿ, ಜಾಡು ಬಿದ್ದು ಉಂಟಾದ ರಸ್ತೆಯೇ ಹೊರತು, ಆ ಎರಡು ಹಳ್ಳಿಗಳಿಗೂ ಮಧ್ಯೆ ಸರಿಯಾದ ರಸ್ತೆ ಇಲ್ಲ. ಮಲ್ಲಿಗೇಹಳ್ಳಿಯಿಂದ

ಆ ರಸ್ತೆಯಲ್ಲಿ ನಾಲ್ಕನೇ ಮೈಲಿ ಬಳಿ, ಒಂದು ಕಾಲುದಾರಿ ಕವಲೊಡೆದು, ರಸ್ತೆಯಿಂದ ಬಲಕ್ಕೆ, ಸುಮಾರು ಒಂದು ಮೈಲಿ ದೂರವಿರುವ ಒಂದು ತೋಪಿಗೆ ಹೋಗುತ್ತದೆ. ತೋಪು ದೊಡ್ಡದು; ಸುಮಾರು ಇನ್ನೂರು ಮರಗಳಿವೆ. ಎಲ್ಲಾ ಆಲದಮರಗಳು. ತೋಪಿಗೆ ಆ ಪ್ರಾಂತ್ಯದಲ್ಲಿ 'ಪಾಳೇಗಾರನ ತೋಪು' ಎಂಬ ಹೆಸರಿದೆ. ಹಿಂದೆ ಪಾಳೆಯಗಾರರು ಪ್ರಬಲರಾಗಿದ್ದ ಕಾಲದಲ್ಲಿ ಆ ತೋಪಿಗೆ ಸಮೀಪವಾಗಿ ಒಂದು ಊರು ಇತ್ತಂತೆ; ಅಲ್ಲಿ ಒಬ್ಬ ಪ್ರಬಲನಾದ ಪಾಳೆಯಗಾರನು ಆಳುತ್ತಿದ್ದನಂತೆ. ಈಗಲೂ ತೋಪಿನ ಅಂಚಿನಲ್ಲಿ ಸಣ್ಣ ಸಣ್ಣ ದಿಬ್ಬಗಳು ನೂರಾರು ಕಾಣುತ್ತವೆ. ಅಲ್ಲಿ ಊರು ಇತ್ತು ಅನ್ನುವುದಕ್ಕೆ ಸಾಕಾದಷ್ಟು ಪ್ರಮಾಣಗಳು ಈಗಲೂ ಕಾಣುತ್ತಿವೆ.

ಕೃಷ್ಣಜೋಯಿಸರು ಪಾಳೆಯಗಾರನ ತೋಪಿನ ವಿಷಯವಾಗಿಯೂ, ಅದರ ಬಳಿಯಲ್ಲೇ ಇದ್ದ ಆ ನಾಮಾವಶೇಷವಾದ ಊರಿನ ವಿಷಯವಾಗಿಯೂ, ಬಹುದಿನಗಳಿಂದ ಮನಸ್ಸಿನಲ್ಲಿಯೇ ಅನೇಕ ಊಹಾಪೋಹಗಳನ್ನು ನಡೆಸುತ್ತಿದ್ದರು. ಈಚೆಗೆ, ಧನಪಿಶಾಚಗ್ರಸ್ತರಾದಮೇಲೆ, ತೋಪಿನ ಬಳಿಯ ಪಾಳು ಪ್ರದೇಶದಲ್ಲಿ ಬಹಳ ದ್ರವ್ಯ ಭೂಗತವಾಗಿರಲೇಬೇಕೆಂದು ನಿರ್ಧಾರಕ್ಕೆ ಬಂದರು. ಹಿಂದಿನ ಪಾಳೆಯಗಾರರ ಧನಾರ್ಜನೆಯೆಲ್ಲಾ ನೆರೆಹೊರೆಯ ಪಾಳೆಯ ಪಟ್ಟುಗಳ ಲೂಟಿಯಿಂದ ಆಗುತ್ತಿತ್ತು. ಪೂರ್ವದಲ್ಲಿ, ಆಪತ್ತು ಒದಗಿದಾಗ ಹಣವನ್ನು ಜೋಪಾನ ಮಾಡಬೇಕಾದರೆ, ಗೌಪ್ಯವಾಗಿ—ಭೂಮಿಯಲ್ಲಿ ಯಾರೂ ಊಹಿಸಲಾಗದಂತಹ ಸ್ಥಳಗಳಲ್ಲಿ ಹೂತಿಡುವುದು ಸಾಧಾರಣ ಪದ್ಧತಿಯಾಗಿತ್ತು. ಈ ತರ್ಕದಿಂದ, ಆ ಪಾಳಿನಲ್ಲಿ ದ್ರವ್ಯ ಭೂಗತವಾಗಿರುವ ವಿಷಯದಲ್ಲಿ, ಜೋಯಿಸರಿಗೆ ಸಂಶಯವೇನೂ ಉಳಿಯಲಿಲ್ಲ. ಆದರೆ, ಅಷ್ಟು ದೊಡ್ಡ ಪಾಳಿನಲ್ಲಿ ಯಾವ ಜಾಗದಲ್ಲಿ ಹಣವಿದೆಯೋ ತಿಳಿಯುವುದು ಹೇಗೆ? ಇರಬಹುದೆಂಬ ಅನುಮಾನದಮೇಲೆ, ಪಾಳನ್ನೆಲ್ಲಾ ಅಗೆದುಹಾಕುವುದೆಂದರೆ ಸಾಧ್ಯವಿಲ್ಲ. ಅದನ್ನು ತಿಳಿಯಬೇಕಾದರೆ ಅಂಜನವಿದ್ಯೆ ಹೊರತು ಬೇರೆ ಮಾರ್ಗವೇ ಇಲ್ಲ. ಆದುದರಿಂದಲೇ ಜೋಯಿಸರು, ಹಣ ಖರ್ಚುಮಾಡಿ, ಕಷ್ಟಪಟ್ಟು ಅಂಜನ ವಿದ್ಯೆಯನ್ನು ಕಲಿತದ್ದು.

* * * *

ಕೃಷ್ಣಜೋಯಿಸರು ಮಳಿಯಾಳದಿಂದ ಊರಿಗೆ ಬಂದಮೇಲೆ ಒಂದು

ದಿನ ಅಂಜನ ತಯಾರುಮಾಡಿದರು. ಅಂಜನವನ್ನು ಯಾರ ಮೇಲೆ ಪ್ರಯೋಗ ಮಾಡುವುದೆಂದು ಯೋಚನೆ ಮಾಡಿ ಮಾಡಿ, ಕೊನೆಗೆ ಅದೇ ಹಳ್ಳಿಯಲ್ಲಿದ್ದ ಹತ್ತು–ಹನ್ನೆರಡು ವರ್ಷಗಳ ಒಬ್ಬ ತಬ್ಬಲಿ ದನಕಾಯುವ ಹುಡುಗನನ್ನು ಹಿಡಿದರು. ಅವನಿಗೆ ಸ್ವಲ್ಪ ದುಡ್ಡು—ತಿಂಡಿ ಕೊಟ್ಟು, ಆಸೆ ತೋರಿಸಿ, ಗುಟ್ಟಾಗಿಟ್ಟಿರಬೇಕೆಂದು ಆಣೆ–ಪ್ರಮಾಣ ಮಾಡಿಸಿ, ಒಂದು ದಿನ ರಾತ್ರಿ ಅವನ ಮೇಲೆ ಅಂಜನ ಪ್ರಯೋಗಮಾಡಿದರು. ಅದರ ಫಲವಾಗಿ ಅವರಿಗೆ, ತೋಪಿನ ಬಳಿಯ ಪಾಳುಭೂಮಿಯಲ್ಲಿ ಒಂದು ಸಣ್ಣ ಬಂಡೆ ಇರುವುದಾಗಿಯೂ, ಅದಕ್ಕೆ ಸಮೀಪದಲ್ಲೇ ಒಂದು ಹುತ್ತ ಇರುವುದಾಗಿಯೂ, ಹುತ್ತದಿಂದ ಉತ್ತರಕ್ಕೆ ಮೂವತ್ತು ಹೆಜ್ಜೆ ದೂರದಲ್ಲಿ ಒಂದು ಸಣ್ಣ ದಿಬ್ಬವಿರುವುದಾಗಿಯೂ, ಆ ದಿಬ್ಬದ ಕೆಳಗೆ ವಿಶೇಷ ದ್ರವ್ಯ ಅಡಗಿರುವುದಾಗಿಯೂ ತಿಳಿಯುಬಂತು.

ಜೋಯಿಸರ ಆನಂದಕ್ಕೆ ಪಾರವೇ ಇಲ್ಲವಾಯಿತು. "ಇನ್ನೇನು, ನಿಧಿ ಹಸ್ತಗತವಾದಂತೆಯೇ ಸರಿ!" ಎಂದು ಯೋಚಿಸಿದರು. ಇನ್ನೇನು, ಅಷ್ಟಲ್ಲದೆ? ಜೋಯಿಸರು ಮಾರನೆಯ ಬೆಳಿಗ್ಗೆ ಬಹಳ ಮುಂಚೆಯೇ ಎದ್ದು, ಪಾಳೆಯಗಾರನ ತೋಪಿನ ಕಡೆ ಹೊರಟರು. ಹೊನ್ನವಳ್ಳಿ ರಸ್ತೆಯಿಂದ ಕಾಲುದಾರಿಗೆ ತಿರುಗುವ ಸ್ಥಳದಲ್ಲಿ, ಎದುರಿಗೆ ಒಬ್ಬಿಬ್ಬರು ಹಳ್ಳಿಯವರು ಕಂಡು, "ಓ! ಏನ್ಸ್ವಾಮಿ ಈಟ್ಮುಂಚೇ?" ಎಂದು ಕೇಳಿದರು. ಅದಕ್ಕೆ ಜೋಯಿಸರು "ಸ್ವಲ್ಪ ತುರ್ತಾಗಿ ದರ್ಭೆ ಬೇಕಾಗಿತ್ತು, ಹುಡುಕಿಕೊಂಡು ಹೊರಟೆ, ಅಷ್ಟೆ" ಎಂದು ಹೇಳಿ ಮುಂದಕ್ಕೆ ಹೋದರು. ಸ್ವಲ್ಪ ಹೊತ್ತಿನಲ್ಲೇ ತೋಪನ್ನು ಹೊಕ್ಕು, ಆದರ ಆಚೆ ಇದ್ದ ಪಾಳುಜಾಗವನ್ನು ತಲುಪಿದರು. ಒಂದು ಸಲ, ಪಾಳು ನಿವೇಶನವನ್ನೆಲ್ಲಾ ಸಿಂಹಾವಲೋಕನ ದೃಷ್ಟಿಯಿಂದ ನೋಡಿದರು. ಬಂಡೆಗಳೂ, ಹುತ್ತಗಳೂ, ದಿಣ್ಣೆಗಳೂ ಬೇಕಾದಹಾಗಿದ್ದವು. ಇವರಿಗೆ ಬೇಕಾದದ್ದು, ಒಂದು ಬಂಡೆಗೆ ಸಮೀಪವಾಗಿರುವ ಹುತ್ತದಿಂದ ಉತ್ತರಕ್ಕೆ ಮೂವತ್ತು ಹೆಜ್ಜೆ ದೂರದಲ್ಲಿರುವ—ದಿಣ್ಣೆ. ಸ್ವಲ್ಪ ಸುತ್ತಾಡುವುದರಲ್ಲಿ ಒಂದು ಬಂಡೆಯೂ, ಅದಕ್ಕೆ ಕೇವಲ ಸಮೀಪವಾಗಿ ಒಂದು, ಆಳೆತ್ತರದ ಹುತ್ತವೂ ಕಾಣಿಸಿತು. ಅಲ್ಲಿಂದ ಉತ್ತರಕ್ಕೆ, ಸುಮಾರು ಮೂವತ್ತು ಗಜಗಳಾಚೆ, ಒಂದು ಸಣ್ಣ ದಿಬ್ಬವೂ ಕಾಣಿಸಿತು. ಜೋಯಿಸರ ಎದೆಯಲ್ಲಿ ಹರ್ಷೋತ್ಕರ್ಷವಾಗಿ ಲಕ್ಷ್ಮೀಸ್ತೋತ್ರ ಮಾಡಿದರು. ಸ್ವಲ್ಪ ಹೊತ್ತಾದಮೇಲೆ, ತೋಪಿನ ಅಂಚಿ

ನಲ್ಲಿದ್ದ ಒಂದು ದೊಡ್ಡ ಆಲದಮರವನ್ನು ನೆನಪಿನಲ್ಲಿಟ್ಟುಕೊಂಡು, ಅದರ ಬುಡದಿಂದ ಬಂಡೆ ಯಾವ ದಿಕ್ಕಿಗೆ, ಎಷ್ಟು ದೂರವಿದೆ—ಎಂಬುದನ್ನು ಕಂಡು ಕೊಂಡು, ಮನೆಗೆ ಬಂದರು.

ಇನ್ನು ಮಾಡಬೇಕಾದದ್ದು, ಆ ದಿಣ್ಣೆಯನ್ನು ಅಗೆಯುವುದು—ಅದರ ಒಳಗೆ ಹಣವೋ, ಚಿನ್ನವೋ—ಮುತ್ತುರತ್ನಗಳೋ—ಏನಿದೆಯೋ ಅದನ್ನು ಚೀಲಗಳಲ್ಲಿ ತುಂಬಿಕೊಂಡು ಮನೆಗೆ ಬರೋದು, ಇಷ್ಟೆ. ಆದರೆ ನೆಲ ಅಗೆಯುವ ಕಸಬು ಜೋಯಿಸರಿಗೆ ಬಂದದ್ದಲ್ಲ. ಹೆಚ್ಚುಕಡಿಮೆ ಒಂದಾಳೆತ್ತರವಿದ್ದ ಆ ದಿಣ್ಣೆ, ಕಣಿ ಹೇಳಿ ಹೇಳಿ ಡೊಳ್ಳು ಬೆಳೆಸಿದ್ದ—ಈ ಜೋಯಿಸರ ಅಗೆತಕ್ಕೆ ಜಗ್ಗು ವಂತಿರಲಿಲ್ಲ. ಅಲ್ಲದೆ ಅವರ ಬಳಿ ಅಗೆಯುವುದಕ್ಕೆ ಬೇಕಾದ ಗುದ್ದಲಿ, ಪಿಕಾಸಿ—ಇರಲಿಲ್ಲ. ಆದ್ದರಿಂದ ನಿರ್ವಾಹವಿಲ್ಲದೆ, ಮಲ್ಲಿಗೇಹಳ್ಳಿಯಲ್ಲೇ ನೆಲಸಿದ್ದ ಒಬ್ಬ ಮಣ್ಣೊಡ್ಡನನ್ನು ತಮ್ಮ ಅಂತರಂಗಕ್ಕೆ ಸೇರಿಸಿಕೊಂಡರು. ಅವನ ಹೆಸರು ಒಡ್ಡರ ಹನುಮಾಬೋಯಿ; ನಡುಪ್ರಾಯದ ಭೀಮಾಕಾರನಾದ ಆಳು. ಒಂದು ದಿನ ಅವನಿಗೆ ಗುಟ್ಟಾಗಿ ಎಲ್ಲವನ್ನೂ ತಿಳಿಸಿ, ಸಿಗುವ ನಿಧಿಯಲ್ಲಿ ಅವನಿಗೂ ಸ್ವಲ್ಪ ಕೊಡುವುದಾಗಿ ಮಾತು ಕೊಟ್ಟು, ದಿಣ್ಣೆಯನ್ನು ಅವನು ಅಗೆಯುವಂತೆ ಒಪ್ಪಿಸಿದರು. ವಿಷಯ ಗುಟ್ಟಾಗಿರಬೇಕೆಂದು ಅವನಿಗೆ ಒತ್ತಿ ಒತ್ತಿ ಹೇಳಿ, ಅವನಿಂದ ಮಾರಮ್ಮನ ಆಣೆ ಇಡಿಸಿದರು.

ಇಷ್ಟು ಏರ್ಪಾಟು ಮಾಡಿಕೊಂಡು ಕೃಷ್ಣಜೋಯಿಸರು ಸಮಯ ಕಾಯುತ್ತಿದ್ದರು. ಜಾತಕದ ರೀತಿಯಿಂದ ಅವರಿಗೆ ನಾಲ್ವತ್ತಾರನೆಯ ವರ್ಷದಲ್ಲಿ ಧನಲಾಭ ಸೂಚನೆಯಿತ್ತು. ಇನ್ನು ಒಂದು ತಿಂಗಳು ಎಂಟು ದಿನಗಳಿಗೆ ಅವರಿಗೆ ನಾಲ್ವತ್ತೈದು ವರ್ಷ ತುಂಬುವುದಿತ್ತು. ಧನಯೋಗವಿಲ್ಲದವನು ಹೊನ್ನು ಮುಟ್ಟಿದರೂ ಅದು ಮಣ್ಣಾಗುವುದೆಂದು ಅವರ ಸಿದ್ಧಾಂತ. ಆದುದ ರಿಂದಲೇ ಅವರು ಯೋಗಪ್ರಾಪ್ತಿಯಾಗಲಿ ಎಂದು ಕಾಯುತ್ತಿದ್ದರು. ಒಂದು ತಿಂಗಳು ಎಂಟು ದಿನಗಳೂ ಕಳೆದವು. ಜೋಯಿಸರು ನಾಲ್ವತ್ತೈದನೆಯ ವರ್ಧಂತಿಯನ್ನು ಬಹಳ ಉತ್ಸಾಹದಿಂದ ಮಾಡಿಕೊಂಡರು. ಆದಾದ ಎರಡು ಮೂರು ದಿನಗಳಮೇಲೆ, ಒಂದು ದಿನ ಪಂಚಾಂಗವನ್ನು ನೋಡಿ, ಧನಲಕ್ಷ್ಮಿ ಯನ್ನು ವಶಪಡಿಸಿಕೊಳ್ಳಲು, ಅಮಾವಾಸ್ಯೆ ಮಧ್ಯರಾತ್ರಿ ಹೊತ್ತಿಗೆ ಒದಗುವ ಒಂದು ಒಳ್ಳೇ ಮುಹೂರ್ತವನ್ನು ಗೊತ್ತುಮಾಡಿದರು.

ಅಮಾವಾಸ್ಯೆ ಬಂತು. ಜೋಯಿಸರು ದಿನವನ್ನೆಲ್ಲಾ ಲಕ್ಷ್ಮೀಸ್ತೋತ್ರದಲ್ಲಿ ಕಳೆದರು. ಸಾಯಂಕಾಲವಾಗುತ್ತಿದ್ದ ಹಾಗೆಯೇ ಪೂಜಾಸಾಮಗ್ರಿಗಳನ್ನು ಸಿದ್ಧಮಾಡಿಕೊಂಡರು. ದ್ರವ್ಯವೆಂದರೇನು ಸಾಮಾನ್ಯವೇ? ಸಾಕ್ಷಾತ್ ಲಕ್ಷ್ಮೀ ಸ್ವರೂಪ! ಕೈಹಿಡಿದ ಹೆಂಡತಿ ವಶವಾಗುವುದೇ ಒಂದೊಂದು ಸಲ ಬಹಳ ಕಷ್ಟವಾಗುತ್ತೆ! ಅಂಥಾದ್ದರಲ್ಲಿ ಚಂಚಲಳಾದ ಲಕ್ಷ್ಮಿ, ಯೋಗ್ಯ ಪೂಜೆಯಿಲ್ಲದೆ ವಶಳಾಗುವಳೇ?

ಸುಮಾರು ರಾತ್ರಿ ಹತ್ತು ಗಂಟೆ ಹೊತ್ತಿಗೆ ಹನುಮಾಬೋಯಿ ಬಂದು, ತೋಪಿನಲ್ಲಿ ಗುದ್ದಲಿ, ಪಿಕಾಸಿ, ಬುಟ್ಟಿಗಳು—ಎಲ್ಲವನ್ನೂ ಇಟ್ಟು ಬಂದಿರುವುದಾಗಿ ತಿಳಿಸಿದ. ಜೋಯಿಸರು "ಸರಿ, ನೀನು ಮುಂದೆ ಹೋಗಿ ಹೊನ್ನವಳ್ಳಿ ರಸ್ತೇಲಿ ಅಶ್ವತ್ಥಕಟ್ಟೆ ಇದೆಯಲ್ಲಾ—ಅಲ್ಲಿ ಕಾದಿರು; ಹತ್ತು ನಿಮಿಷ ಬಿಟ್ಟುಕೊಂಡು ನಾನೂ ಬರುತ್ತೇನೆ" ಎಂದು ಹೇಳಿಕಳಿಸಿದರು.

ಹತ್ತು ನಿಮಿಷವಾಯಿತು. ಜೋಯಿಸರು ಬಗಲಲ್ಲಿ ಒಂದು ಗಂಟು ಇಟ್ಟುಕೊಂಡು, ಬಾಯಲ್ಲಿ ಏನೋ ಪಿಟಿಪಿಟಿ ಅನ್ನುತ್ತ, ಮನೆಯಿಂದ ಹೊರಬಿದ್ದರು. ಹೊರಗೆ ಅಮಾವಾಸ್ಯೆ ಕತ್ತಲೆ! ಹಳ್ಳಿಯಲ್ಲಿ ಅನೇಕ ಮನೆಗಳಲ್ಲಿ ಆಗಲೇ ಜನರು ದೀಪ ಆರಿಸಿ ಮಲಗಿಬಿಟ್ಟಿದ್ದರು. ರಾತ್ರಿ ನಿಶ್ಶಬ್ದವಾಗಿತ್ತು. ಮಸಿಯಲ್ಲಿ ಇದ್ದಲಿ ಮುಳುಗಿದ ಹಾಗೆ ಕತ್ತಲಲ್ಲಿ ಜೋಯಿಸರು ಮಾಯವಾದರು. ಸ್ವಲ್ಪ ಹೊತ್ತಿನಲ್ಲೇ ಅಶ್ವತ್ಥಕಟ್ಟೆಯ ಬಳಿ ಬಂದರು. ಅಲ್ಲಿ ಇವರಿಗಾಗಿ ಕಾದಿದ್ದ ಬೋಯಿಯೊಡನೆ ಪಾಳೇಗಾರನ ತೋಪಿನ ಕಡೆ ಹೊರಟರು.

ಜೋಯಿಸರು ಈ ವೇಳೆಗೆ, ಸಂಪೂರ್ಣವಾಗಿ ಧನಪಿಶಾಚದ ಆಳ್ವಿಕೆಗೆ ಒಳಪಟ್ಟಿದ್ದರು. "ದುಡ್ಡೇನೋ ಸಿಕ್ಕುವುದು! ಸಿಕ್ಕಿದಹಾಗೆಯೇ! ಇನ್ನೇನು ........ಬೋಯಿಗೆ ಎಷ್ಟು ಕೊಡೋದು!........ಅವನು ಒಡ್ಡ—ಅವನ ತಲೇ ಸವರೋದು ಒಂದು ಕಷ್ಟವೇ?........ಬೀರನಹಳ್ಳಿ ಜಮೀನು ಪಕ್ಕದ ಹತ್ತು ಎಕರೆ ತರಿ ಕೊಂಡು ಹಾಕಿಬಿಡಬಹುದು........ಪುಟ್ಟತಾಯಿ ಲಗ್ನ........" ಎಂದು ಮುಂತಾಗಿ, ಖರ್ಚಿಲ್ಲದ ಮಂಡಿಗೆ ತಿನ್ನುತ್ತ, ಜೋಯಿಸರೂ, ಅವರನ್ನು ಹಿಂಬಾಲಿಸಿ ಬೋಯಿಯೂ, ನಡೆದು, ತೋಪನ್ನು ಹೊಕ್ಕರು. ಅಲ್ಲಿ ಬೋಯಿ ತಾನಿಟ್ಟಿದ್ದ ಗುದ್ದಲಿ, ಪಿಕಾಸಿ ಮೊದಲಾದುವುಗಳನ್ನು ತೆಗೆದುಕೊಂಡ. ಜೋಯಿಸರು ಮುಂದರಿದು, ತೋಪಿನ ಅಂಚಿನಲ್ಲಿ ತಾವು ನೆನಪಿಟ್ಟುಕೊಂಡಿದ್ದ

ದೊಡ್ಡ ಆಲದಮರವನ್ನು ಸೇರಿದರು. ಜೋಯಿಯನ್ನು ಆ ಮರದ ಅಡಿಯಲ್ಲೇ ಇರುವಂತೆ ಹೇಳಿ, ತಾವು ನೆನಪಿಟ್ಟುಕೊಂಡಿದ್ದ ದಿಕ್ಕಿನಲ್ಲಿ ನಿಧಾನವಾಗಿ ಹೆಜ್ಜೆ ಇಟ್ಟು ಹೋದರು. ಸ್ವಲ್ಪ ಹೊತ್ತಿನಲ್ಲೇ ಬಂಡೆ ಸಿಕ್ಕಿತು. ಅಲ್ಲಿಂದ ಅವರಿಗೆ ದಿಣ್ಣೆಯನ್ನು ಗುರ್ತಿಸುವುದು ಕಷ್ಟವಾಗಲಿಲ್ಲ. ಅದನ್ನೂ ಗುರ್ತಿಸಿದರು. ದಿಣ್ಣೆಯ ಸಮೀಪದಲ್ಲಿ ನಿಂತು ಜೋಯಿಯನ್ನು ಬರುವಂತೆ ಕೂಗಿದರು. ಜೋಯಿ ನಿಧಾನವಾಗಿ ಹೆಜ್ಜೆಯಿಡುತ್ತ ದಿಣ್ಣೆಯನ್ನು ಸಮೀಪಿಸಿದ. ಜೋಯಿ ಸರು ಸ್ವಲ್ಪ ಹೊತ್ತು ಮೌನವಾಗಿ ನಿಂತು, ತಮ್ಮ ಎದೆಯಲ್ಲಾಗಿದ್ದ ಅಲ್ಲೋಲ ಕಲ್ಲೋಲವನ್ನು ಶಾಂತಿಮಾಡಿದರು. ಆಮೇಲೆ ಆ ದಿಣ್ಣೆಗೆ ಪೂಜೆ ಮಾಡಿದರು. ದೀಪಗೀಪ ಹಚ್ಚಲಿಲ್ಲ. ಗಂಧದ ಕಡ್ಡಿಯಲ್ಲೇ ಮಂಗಳಾರತಿ ಮಾಡಿದರು. ಮಂತ್ರೋಚ್ಚಾರಣೆ ಅವಿಚ್ಛಿನ್ನವಾಗಿ ನಡೆಯುತ್ತಿತ್ತು. ದಿಣ್ಣೆಯ ಪೂಜೆಯಾದ ಮೇಲೆ ಅಗೆಯುವ ಸಾಮಗ್ರಿಗಳನ್ನೆಲ್ಲಾ ದಿಣ್ಣೆಯ ಮೇಲೆ ಇರಿಸಿ, ಅದಕ್ಕೂ ಪೂಜೆ ಮಾಡಿದರು. ಆಮೇಲೆ ಇಬ್ಬರೂ ದಿಣ್ಣೆಗೆ ಮೂರು ಸುತ್ತು ಹಾಕಿ ಸಾಷ್ಟಾಂಗ ನಮಸ್ಕಾರಮಾಡಿದರು. ಜೋಯಿಸರು, ಮೈ ಕೈ ಕೊಡವಿಕೊಳ್ಳುತ್ತ, ಜೋಯಿಗೆ ಅಗೆಯುವಂತೆ ಹೇಳಿದರು. ಜೋಯಿ ತಲೆಗೆ ಸುತ್ತಿದ್ದ ಲಪಾಟೆ, ಹಾಕಿದ್ದ ಬನೀನು ಬಿಚ್ಚಿಟ್ಟು, ಅಗೆಯುವುದಕ್ಕೆ ಪ್ರಾರಂಭಿಸಿದ. ಜೋಯಿಸರು ನಿಮಿಷಕ್ಕೊಂದು ಸಲ ಕೈಮುಗಿಯುತ್ತ, ಮಂತ್ರೋಚ್ಚಾರಣೆ ಮಾಡುತ್ತ, ಪಕ್ಕದಲ್ಲೇ ನಿಂತು ನೋಡುತ್ತಿದ್ದರು.

* * * *

ಬೆಳಗಿನ ಜಾವ; ಸುಮಾರು ಎರಡೂವರೆ–ಮೂರು ಗಂಟೆ ಸಮಯವಿರ ಬಹುದು; ಜೋಯಿ ಒಂದೇ ಸಮನೆ ಅಗೆಯುತ್ತಿದ್ದಾನೆ. ಜೋಯಿಸರು ಅವನ ಸಹಾಯಕ್ಕೆ ನಿಂತು, ಜೋಯಿ ತುಂಬಿ ತುಂಬಿ ಕೊಡುತ್ತಿದ್ದ ಮಣ್ಣನ್ನು ಪಕ್ಕಕ್ಕೆ ಹಾಕುತ್ತಿದ್ದಾರೆ. “ಪಿಕಾಸಿ ತುದಿ, ಹಣದ ಕೊಪ್ಪರಿಗೆಗೆ ತಾಗಿದ ಸದ್ದು ಈಗ ಕೇಳಿಸಬಹುದು!— ಇನ್ನೊಂದು ನಿಮಿಷಕ್ಕೆ ಕೇಳಿಸಬಹುದು!” —ಎಂದು, ಜೋಯಿಸರ ಎದೆ ತವಕದಿಂದ ಹೊಡೆದುಕೊಳ್ಳುತ್ತಿದೆ. ಸುಮಾರು ಮೂರು ಗಂಟೆ ಕಾಲ ಒಂದೇ ಸಮನೆ ಅಗೆದಿದ್ದ— ಜೋಯಿ. ಒಳ್ಳೇ ದೊಡ್ಡ ಗುಂಡಿಯೇ ಆಗಿತ್ತು. ಇಪ್ಪತ್ತು ಹೆಣಗಳನ್ನು ಒಟ್ಟಿಗೆ ಹೂಳಿ ಮುಚ್ಚಬಹು ದೆನ್ನುವಷ್ಟು ಅಗಾಧವಾಗಿತ್ತು ಗುಂಡಿ! ಇಷ್ಟು ಅಗೆದರೂ ಏನೂ ಸಿಕ್ಕದೆ

ಇದ್ದುದನ್ನು ನೋಡಿ, ಬೋಯಿ ಸ್ವಲ್ಪ ಸ್ವಲ್ಪವಾಗಿ ನಿರಾಶನಾಗುತ್ತಿದ್ದ. ಬೋಯಿ ಕೈ ನಿಧಾನಮಾಡಿದಂತೆಲ್ಲಾ, ಜೋಯಿಸರು, ಬೇಗೆ ಬೇಗ ಅಗೆಯುವಂತೆ ಪ್ರೋತ್ಸಾಹಮಾಡುತ್ತಿದ್ದರು. ಇನ್ನು ಅರ್ಧ ಗಂಟೆ ಅಗೆದಮೇಲೆ, ಪಿಕಾಸಿ ಏನೋ ಗಟ್ಟಿಯಾದ ಪದಾರ್ಥಕ್ಕೆ 'ಠಣ್' ಎಂದು ತಾಗಿದ ಸದ್ದಾಯಿತು. ಜೋಯಿಸರ ಮೈ ಪುಳಕಿತವಾಯಿತು! "ಬೋಯೀ, ನಿಧಿ! ನಿಧಿ!!" ಎಂದು ಹರ್ಷೋದ್ವೇಗದಿಂದ ನುಡಿದರು. ಬೋಯಿಗೂ ಹೊಸ ಹುಮ್ಮಸು ಬಂತು. ನಾಲ್ಕು ಗಂಟೆಗಳ ಕಾಲ ಒಂದೇ ಸಮನೆ ಅಗೆದು ಅಗೆದು ಸೋತಿದ್ದ ಅವನ ರಟ್ಟೆಗಳಿಗೆ, ಭೂಗತಳಾಗಿದ್ದ ಧನಲಕ್ಷ್ಮಿ ಹೊಸ ಚೇತನವನ್ನು ತುಂಬಿದಳು. ಜೋಯಿಸರ ಮಂತ್ರೋಚ್ಚಾರಣೆಯಂತೂ ಭಕ್ತಿರಸದಲ್ಲಿ ಕೊಚ್ಚಿಕೊಂಡು ಬರುತ್ತಿತ್ತು. ಬೋಯಿ ಇನ್ನೂ ಹತ್ತು ನಿಮಿಷ ಅಗೆದು, ಮಣ್ಣನ್ನೆಲ್ಲಾ ತೆಗೆದು ಪರಿಷ್ಕಾರಮಾಡಿ, ಕೈ ಆಡಿಸಿ ನೋಡಿದ—ನುಣುಪಾಗಿತ್ತು; ದಪ್ಪಗೆ, ದುಂಡಗೆ ಮೊಳದುದ್ದವಾಗಿತ್ತು!—ಒಂದು ಕಲ್ಲು! ರುಬ್ಬುವ ಕಲ್ಲಿನ ಆಕಾರದಲ್ಲಿತ್ತು. ಬೋಯಿಗೆ ರೇಗಿಹೋಗಯಿತು. "ಇದೇನಾ ನಿಧಿ, ಈ ಆರವ ತೋರಿಸಿದ್ದು!........ಯಾರಾದ್ರೂ ಮೇಸ್ತ್ರೀ ಕೈಕೆಳಗೆ ಈಟು ಕೆಲ್ಸಾ ಮಾಡಿದ್ರೆ ಒಂದು ರೂಪಾಯಿ ಗಿಟ್ಟುತ್ತು' ಎಂದು ಮನಸ್ಸಿನಲ್ಲೇ ಅಂದುಕೊಂಡ. ಅಗೆದು ಅಗೆದು ಸೋತ ನೋವು, ಕೊನೆಗೆ ನಿರಾಶೆಯಾದ ನೋವು—ಎರಡೂ ಸೇರಿ, ಬೋಯಿಯ ಮೈ ಬೆಂಕಿ ಬೆಂಕಿಯಾಯಿತು. ಜೋಯಿಸರು ಇವನ್ನೆಲ್ಲಾ ತವಕದಿಂದ ನೋಡುತ್ತಿದ್ದರು. ಕತ್ತಲಲ್ಲಿ ಬೋಯಿಯ ಮುಖ ಇವರಿಗೆ ಚೆನ್ನಾಗಿ ಕಾಣುತ್ತಿರಲಿಲ್ಲ. ಈ ಕ್ಷಣದಲ್ಲಿ ಅವರಿಗೊಂದು ಭಯ ಹುಟ್ಟಿತು. ಹಣದಾಸೆಗೆ ಬೋಯಿ, ತಮ್ಮನ್ನು ಕೊಂದು, ಅದೇ ಗುಂಡೀಲಿ ಮುಚ್ಚಿ, ಹಣವನ್ನು ತೆಗೆದುಕೊಂಡು ಹೋದರೇನು ಗತಿ?—ಎಂದು ಭಯಗ್ರಸ್ತರಾದರು. ಪ್ರಾಣವನ್ನು ಉಳಿಸಿಕೊಳ್ಳುವುದಕ್ಕೆ ಹಣವನ್ನೆಲ್ಲಾ ಬೋಯಿಗೇ ಬಿಟ್ಟುಬಿಡುವುದಕ್ಕೂ ಸಿದ್ಧರಾದರು. ಇಂಥ ಸಮಯಗಳಲ್ಲಿ ಯೋಚನಾತರಂಗ ಮಿಂಚಿನ ವೇಗದಿಂದ ಹರಿಯುತ್ತದೆ! ಬೋಯಿ ಏನೂ ಮಾತನಾಡದೆ ಸುಮ್ಮನಿದ್ದುದನ್ನು ನೋಡಿ, ಜೋಯಿಸರ ಭಯ ಇನ್ನೂ ಹೆಚ್ಚಿತು. ಏನೋ ದುರಾಲೋಚನೆ ಮಾಡುತ್ತಿರಬಹುದು ಎಂದು ತೋರಿತು; ಗಂಟಲು ಒಣಗಿ ಬಂತು. "ಏನಪ್ಪಾ, ಬೋಯೀ, ಸುಮ್ಮನಾದೆ? ಬೆಳಗ್ಗರಿಯೋದರೊಳಗೆ ಎಲ್ಲಾ

ಸಾಗಿಸಿಕೊಂಡು ಮನೇ ಸೇರಬೇಕಪ್ಪಾ" ಎಂದು ಪುಸಲಾಯಿಸತೊಡಗಿದರು. ಬೋಯಿ "ಹೌದು ಬುದ್ಧೀ, ಸಾಗಿಸಿಕೊಂಡ್ಹೋಗೋ ಹೊತ್ತಾಯ್ತು!" ಎಂದು ಹೇಳಿ, ಬಗ್ಗಿ, ಆ ಕಲ್ಲನ್ನು ತಟ್ಟನೆ ಎತ್ತಿ, ಗುಂಡಿಯಿಂದ ಮೇಲಕ್ಕೆ ಎಸೆದ. ಬೋಯಿಯ ಪ್ರಯತ್ನವನ್ನು ನೋಡಿ, ಜೋಯಿಸರು, ಏನೋ ತೂಕವಾದ ಪೆಟ್ಟಿಗೆಯಿರಬೇಕು—ಎಂದು ಬಗ್ಗಿ ನೋಡಿದರು. ಆ ಕತ್ತಲಲ್ಲಿ ಅವರಿಗೆ ಅದರ ಪರಿಚಯ ಚೆನ್ನಾಗಿ ಆಗಲಿಲ್ಲ. ಮುಟ್ಟಿ ನೋಡಿದರು. ಅವರಿಗೆ ದಿಗ್ಭ್ರಮೆಯಾಯಿತು! "ಧನಲಕ್ಷ್ಮಿ ಕೈಕೊಟ್ಟಳು!"—ಅಂದುಕೊಂಡರು. ಆ ದಿಣ್ಣೆ ಇದ್ದ ಜಾಗ, ಹಿಂದಕ್ಕೆ ಯಾಂದೋ ಮನೆಯ ಅಡಿಗೆಮನೆಯ ಭಾಗ ವಿದ್ದಿರಬೇಕೆಂದು ತೋರಿತು ಅವರಿಗೆ. "ಯಾಕೆ ಹೀಗಾಯಿತು?"—ಎಂದು ಯೋಚಿಸತೊಡಗಿದರು: "ಜಾತಕದಲ್ಲೇನಾದರೂ ದೋಷವಿರಬಹುದೇ?—ಛೆ! ಛೆ! ಎಲ್ಲಾದರೂ ಉಂಟೇ!....ಹಾಗಾದರೆ?........ಅಂಜನಪ್ರಯೋಗದಲ್ಲೇನಾದರೂ ಹೆಚ್ಚುಕಡಿಮೆಯಾಯಿತೇ?....ಆ ಹುಡುಗನಿಗೆ ದಿಕ್ಕು, ದೂರ ಸರಿಯಾಗಿ ಗೊತ್ತಾಗದೆ, ಏನಾದರೂ ಮೋಸವಾಯಿತೇ?...." ಎಂಬ ನಾನಾ ಯೋಚನೆಗಳು – ಬೋಯಿ ಕಲ್ಲನ್ನು ಮೇಲಕ್ಕೆ ಎಸೆದು, ಸುಧಾರಿಸಿಕೊಂಡು, ಗುಂಡಿಯಿಂದ ಮೇಲಕ್ಕೆ ಬರುವುದರೊಳಗಾಗಿ, ಜೋಯಿಸರ ತಲೆಯನ್ನು ಹೊಕ್ಕು ಹಾದುಹೋದುವು. ಹಣದಾಸೆಗೆ, ತಮ್ಮ ಮಾತಿನ ಮೇಲೆ, ಸರಿರಾತ್ರಿಯಲ್ಲಿ ಕಾಡಿಗೆ ಬಂದು, ನಾಲ್ಕು ಗಂಟೆ ಮೈಜೀವವು ಸುರಿಸಿ ದುಡಿದ ದೈತ್ಯಾಕಾರದ ಬೋಯಿ, ಮೇಲಕ್ಕೆ ಬಂದವನೇ ಆ ಗುಂಡುಕಲ್ಲನ್ನು ಅನಾಮತ್ತು ಮೇಲೆತ್ತಿ, ಜೋಯಿಸರ ಕಡೆ ಒಂದು ಹೆಜ್ಜೆ ಇಟ್ಟು, "ಏ! ಆರವಾ, ತಗೋ ನಿನ್ನಿಧೀನಾ! ತಲೇ ಮ್ಯಾಗೆ ಒತ್ಕೊಂಡ್ಹೋಗು!" ಎಂದು, ಅವರ ತಲೇ ಮೇಲೆ ಎಸೆಯುವುದರಲ್ಲಿದ್ದ! ಜೋಯಿಸರು ಆ ಕ್ಷಣದಲ್ಲಿ ಒಂದು ಚಮಕು ಮಾಡಿ, ಬಂದ ಗಂಡಾಂತರದಿಂದ ಪಾರಾದರು. ಎಷ್ಟಾದರೂ ಬ್ರಾಹ್ಮಣಬುದ್ಧಿ! ಪ್ರಳಯಾಂತಕ ಬುದ್ಧಿ!! ಇನ್ನೇನು, ಬೋಯಿ ಕಲ್ಲನ್ನು ಎಸೆಯಬೇಕು, ಅಷ್ಟರಲ್ಲಿ ಜೋಯಿಸರು,

"ಬೋಯೀ, ಬೋಯೀ! ದೇವೀ ಕಣೋ ಅವಳೂ! ದೇವೀ! ಶ್ರೀ ಚೌಡಾಂಬೇ ಕಣೋ!....ಏನು, ಬರೀ ಕಲ್ಲೂಂತ ತಿಳಿದುಬಿಟ್ಟೆಯಾ?.... ನಿನ್ನ ಮನೆ ಹಾಳಾದೀತು!—ಜೋಕೆ!!" ಎಂದು ಕೂಗಿಕೊಂಡರು.

ಜೋಯಿಸರು "ಚೌಡಾಂಬೆ" ಅನ್ನುವುದೇ ತಡ, ಬೋಯಿ ತಣ್ಣಗಾಗಿ ಹೋದ; ಕಲ್ಲನ್ನು ಮೆಲ್ಲಗೆ ಕೆಳಗಿಟ್ಟ. ಜೋಯಿಸರು "ಬದುಕಿದಹಾಗಾಯಿತು" ಎಂದುಕೊಂಡರು. ಒಡ್ಡನನ್ನು ಕುರಿತು,

"ಲೋ ಬೋಯಿ, ನಿನ್ನ ಮನೆಗೆ ನೀನೇ ಬೆಂಕಿ ಇಟ್ಟುಕೊಳ್ಳುತ್ತಿದ್ದೆಯಲ್ಲಾ! ನಾನೇನು ಹೇಳಲಿ? ನಿನ್ನ ಕೈಗೆ ಸಿಕ್ಕಿದವಳು ಚೌಡಮ್ಮ! ತಿಳಿಕೋ—ನಿನ್ನ ಜನ್ಮ ಪಾವನವಾಯ್ತೂಂತ!!.... ಅಷ್ಟು ಗೊತ್ತಾಗಬೇಡವೇ ನಿನಗೆ, ಹನುಮಾಬೋಯಿ!.... ನೋಡು, ಈ ಊರಿಗೆ ಊರೇ ಪಾಳುಬಿದ್ದು ಹೋಗಿದೆ! ಚೌಡಮ್ಮನ್ನ ಕಸಕ್ಕೆ ಕಡೆಯಾಗಿ ಕಂಡಿರಬೇಕು—ಈ ಊರ್‍ನಲ್ಲಿದ್ದ ಮುಟ್ಠಾಳರು!.... ಅದಕ್ಕೇ ದೇವಿ ಅವರ ಊರಿಗೆ ಊರನ್ನೇ ಹೊತ್ತುಬಿಟ್ಟಳು! ಕಾಣೊಲ್ಲವೇ?"

ಎಂದು ಹೇಳಿ, ತಮ್ಮ ಗಂಟಿನಲ್ಲಿದ್ದ ಅರಿಶಿನ ಕುಂಕುಮ ತೆಗೆದು, ಆ ಕಲ್ಲಿನ ಮೇಲೆ ಉದುರಿಸಿ, ಪಿಟಪಿಟ ಅನ್ನುತ್ತ ಪ್ರದಕ್ಷಿಣೆ ಹಾಕಿ, ನಮಸ್ಕಾರ ಮಾಡಿದರು. ಬ್ರಾಹ್ಮಣನೇ ಕಲ್ಲಿಗೆ ಪೂಜೆಮಾಡಿ ನಮಸ್ಕಾರ ಮಾಡಿದಮೇಲೆ ಇನ್ನು ಮಣ್ಣು ಅಗೆಯುವ ಒಡ್ಡ ಸುಮ್ಮನಿರಲಾದೀತೇ? ಅವನೂ ಪ್ರದಕ್ಷಿಣೆ ಹಾಕಿ ನಮಸ್ಕಾರಮಾಡಿದ. ಜೋಯಿಸರು ಹೂಡಿದ ಆಟದಿಂದ, ಬೋಯಿಯ ನಿರಾಶೆ, ಕೋಪ ಎಲ್ಲಾ ಅಡಗಿ, ಅವನು ಹೇಳಿದ ಹಾಗೆ ಕೇಳುವ ನಾಯಿಯಂತಾದ. ಜೋಯಿಸರು ಪುನಃ ಬೋಯಿಯನ್ನು ಕುರಿತು,

"ಬೋಯಿ, ಇದು ಸಾಮಾನ್ಯಾಂತ ಮಾತ್ರ ತಿಳೀಬೇಡ! ಕೊಪ್ಪರಿಗೆ ಹಣಕ್ಕಿಂತ ದೊಡ್ಡ ನಿಧೀ ಕಣೋ—ಈ ಚೌಡಾಂಬೇ! ನಿನ್ನ ಕೈಗೆ ಸಿಕ್ಕಿದ್ದಾಳೆ; ನಿನಗೆ ಒಲಿದ ಕುಲದೇವತೇಂತ ತಿಳಿದುಕೋ; ಎಲ್ಲಾ ಭೂತ ಪಿಶಾಚಿಗಳಿಗೂ ಈ ದೇವಿ ಮೇಸ್ತ್ರೀ ಇದ್ದ ಹಾಗೆ.... ಇವಳು ಒಲಿದಳೊಂದ್ರೆ, ನೀನು ಮುಟ್ಟಿದ್ದು ಚಿನ್ನ! ಅಗೆದದ್ದು ಚಿನ್ನ!! ರೇಗಿದಳೊಂದ್ರೆ, ಆಯ್ತು ನಿನ್ನ ಗತಿ! ನಿನ್ನ ವಂಶದ ಗತಿ!!.... ಬಿಡಬೇಡ ಈ ದೇವೀನ—ತೆಗೆದುಕೋ. ನಮ್ಮ ಹಳ್ಳಿ ಕಾಯ್ದು ಕಾಪಾಡೋಕೆ ಒಂದು ಚೌಡಿ ಇರಲಿಲ್ಲ. ಇವಳನ್ನು ಒಯ್ದು ನಮ್ಮೂರ ಕೆರೆ ಏರಿ ಮೇಲಿನ ಹುಣಿಸೇಮರದಡೀಲಿ ಪ್ರತಿಷ್ಠೆ ಮಾಡೋಣ; ನಿನಗೆ ಮಂಗಳವಾಗುತ್ತೆ" ಎಂದರು.

ಇಷ್ಟು ಹೊತ್ತಿಗೆ ಬೆಳಕು ಹರಿಯುತ್ತ ಬಂದಿತ್ತು. ಜೋಯಿಸರು

ಬೋಯಿಯು ಕೈಲಿ ಆ ರುಬ್ಬುವ ಕಲ್ಲನ್ನು ಹೊರಿಸಿಕೊಂಡು ಊರಿಗೆ ಬಂದರು. ಹಳ್ಳಿಯಲ್ಲಿ ಇವರಿಗೆ ಚೌಡಿ ಸಿಕ್ಕಿದ ಸುವಾರ್ತೆ ಬಲು ಬೇಗ ಹಬ್ಬಿತು. ಜೋಯಿಸರು, ತಮಗೆ ಕನಸಿನಲ್ಲಿ ಚೌಡಿ ಪ್ರತ್ಯಕ್ಷವಾಗಿ, ತಾನು ಇರುವ ಸ್ಥಳವನ್ನು ತೋರಿಸಿದ ಹಾಗೂ, ತನ್ನನ್ನು ಭೂಮಿಯಿಂದ ತೆಗೆದು ಸರಿಯಾಗಿ ಪ್ರತಿಷ್ಠೆಮಾಡಿ ಪೂಜಿಸದೆ ಇದ್ದರೆ, ಮಲ್ಲಿಗೇಹಳ್ಳೀನ ಹುಲ್ಲಿನ ಕಂತೆ ಸುಟ್ಟ ಹಾಗೆ ಸುಟ್ಟುಹಾಕಿಬಿಡುವುದಾಗಿ ಹೇಳಿದಂತೆಯೂ, ಅದರಂತೆಯೇ ತಾವು ಆ ಜಾಗಕ್ಕೆ ಹೋಗಿ, ಅಗೆಸಿ, ಚೌಡಾಂಬೆಯನ್ನು ತಂದಿರುವುದಾಗಿಯೂ—ಒಂದು ಕಥೆಯನ್ನು ಉರುಳಿಸಿಬಿಟ್ಟರು. ಜೋಯಿಸರು ಪೂಜೆಮಾಡಿ ಬಳಿದಿದ್ದ ಅರಿಶಿನ, ಕುಂಕುಮದಿಂದ, ಆ ಗುಂಡುಕಲ್ಲಿಗೆ ಒಂದು ಅಪೂರ್ವವಾದ ದೇವತಾ ಕಳೆ ಬಂದಿತ್ತು. ಜೋಯಿಸರ ಕಥೆಯಿಂದ ಅದು ಇನ್ನೂ ಹೆಚ್ಚಿ, ಹಳ್ಳಿಯವರು ಅದನ್ನು, "ನಮ್ಮಮ್ಮಾ! ಚೌಡಾಂಬೇ!—" ಎಂದು ಬಹಳ ಆದರದಿಂದ ಬರಮಾಡಿಕೊಂಡರು.

ಕಲ್ಲು ಸಿಕ್ಕಿದ ಮೂರನೆ ದಿನವೇ ಹಳ್ಳಿಯವರೆಲ್ಲಾ ಸೇರಿ ಅದನ್ನು ಕೆರೆ ಏರಿಯ ಮೇಲಿನ ಹುಣಿಸೇಮರದ ಕೆಳಗೆ, ಜೋಯಿಸರ ಸಹಾಯದಿಂದ ಶಾಸ್ತ್ರೋಕ್ತವಾಗಿ ಪ್ರತಿಷ್ಠೆಮಾಡಿದರು. ಜೋಯಿಸರ ಕನಸಿನಲ್ಲಿ ಕಾಣಿಸಿಕೊಂಡು ಸಿಕ್ಕಿತ್ತಾದ್ದರಿಂದ ಅದನ್ನು 'ಜೋಯಿಸರ ಚೌಡಿ!' ಎಂದು ಕರೆಯಲಾರಂಭಿಸಿದರು.

ಸ್ವಲ್ಪ ಕಾಲದಲ್ಲೇ 'ಜೋಯಿಸರ ಚೌಡಿ!' ಬಹಳ ಪ್ರಸಿದ್ಧಿಗೆ ಬಂದಳು. ಹಿಂದೆ ಯಾರದೋ ಮನೆಯ ಪಾಕಶಾಲೆಯಲ್ಲಿ, ಮಸಾಲೆ ಅರೆಯುವುದರಲ್ಲೇ ಜೀವ ತೇಯುತ್ತಿದ್ದ ಆ ಏನೂ ಅರಿಯದ ಗುಂಡುಕಲ್ಲು, ಬ್ರಾಹ್ಮಣನ ಪ್ರಚಂಡ ಬುದ್ಧಿವಂತಿಕೆಯಿಂದ, ಹೊಸದೊಂದು ವ್ಯಕ್ತಿತ್ವವನ್ನು ಪಡೆದು, ಮಲ್ಲಿಗೇಹಳ್ಳಿಯ ಹುಣಿಸೇಮರದಡಿಯಲ್ಲಿ ವಿರಾಜಿಸತೊಡಗಿತು. ಅದು ಬಹಳ ಉಗ್ರ ದೇವತೆ ಎಂಬ ಕೀರ್ತಿ—ಕೆಟ್ಟ ಸುದ್ದಿ ಬೇಗ ಹರಡುವಂತೆ—ಬಹಳ ಬೇಗ ಸುತ್ತುಮುತ್ತಿನ ನಾಡಿನಲ್ಲೆಲ್ಲಾ ಹಬ್ಬಿತು.

ಒಂದೆರಡು ವರ್ಷಗಳಲ್ಲೇ, ಹಳ್ಳಿಯವರೆಲ್ಲಾ ಚಂದಾ ಹಾಕಿ, 'ಜೋಯಿಸರ ಚೌಡಿ'ಗೆ ಒಂದು ಸಣ್ಣ ಗುಡಿ ಕಟ್ಟಿಸಿಕೊಟ್ಟರು. ಸಮೀಪದಲ್ಲೇ, ನಾಲ್ಕು ಎಕರೆ ಹುಲುಸಾದ ತರೀ ಜಮೀನನ್ನು ಅದಕ್ಕಾಗಿ ಬಿಟ್ಟರು. ವರ್ಷೇ ವರ್ಷೇ

ಜಾತ್ರೆ ನಡೆಯುವ ಏರ್ಪಾಡು ಮಾಡಿದರು. ಮಲ್ಲಿಗೇಹಳ್ಳಿಯವರಿಗೂ, ಅದರ ಆಸುಪಾಸಿನಲ್ಲಿದ್ದ ಹತ್ತಿಪ್ಪತ್ತು ಹಳ್ಳಿಯವರಿಗೂ, ಚೌಡೀಪಟ್ಟಕ್ಕೇರಿದ ಆ ಗುಂಡುಕಲ್ಲಿನ ವಿಷಯದಲ್ಲಿ ಭಯವೂ, ಭಕ್ತಿಯೂ ಅಷ್ಟಿಷ್ಟಲ್ಲ. ಇಪ್ಪತ್ತು ಮನೆಯ ಬೀರನಹಳ್ಳಿಯಲ್ಲಿ ಇಸ್ಲಾಮಿನ ಏಕಮಾತ್ರ ಪ್ರತಿನಿಧಿಯಾಗಿದ್ದ ಕುಲುಮೆ ಬುಡನ್ ಸಾಬಿ ಸಹ, ಚೌಡಿಯ ವಿಷಯದಲ್ಲಿ ನಮ್ರತೆಯಿಂದ ನಡೆದುಕೊಳ್ಳುವ ಹಾಗಾಯಿತು! ಇಷ್ಟಾದರೂ, ಜೋಯಿಸರ ಮನಸ್ಸಿನಲ್ಲಿ— ಅದು ರುಬ್ಬುವ ಕಲ್ಲೇ ಹೊರತು ಬೇರೆಯಲ್ಲ—ಎಂದು ನಿಶ್ಚಯವಾಗಿತ್ತು! ಅವರೇನೋ, ಆಪತ್ಕಾಲದಲ್ಲಿ ತಮ್ಮ ತಲೆ ಉಳಿಸಿಕೊಳ್ಳುವುದಕ್ಕೆ ಅದನ್ನು 'ಚೌಡಿ' ಎಂದು ಕರೆದರು; ಅರಿಶಿನ, ಕುಂಕುಮ ಬಳಿದರು; ನಮಸ್ಕಾರ ಹಾಕಿದರು. ಆದರೆ ತಾವು ತಲೆ ಉಳಿಸಿಕೊಳ್ಳಲು ಮಾಡಿದ ಬುದ್ಧಿವಂತಿಕೆಯ ಫಲವಾಗಿ, ಆ ರುಬ್ಬುವ ಕಲ್ಲು, ಇಪ್ಪತ್ತು ಹಳ್ಳಿಗಳಿಗೆ ರುದ್ರದೇವತೆಯಾಗಿ ಪರಿಣಮಿಸುವುದೆಂದು ಅವರು ಕನಸಿನಲ್ಲೂ ಕಾಣರು. ಕರ್ಮಫಲ ಕಲ್ಲಿಗೂ ತಪ್ಪಿದ್ದಲ್ಲವೆಂದು ತೋರುತ್ತದೆ! ಕಲ್ಲು ಚೌಡಿಯಾಯಿತು! ಭಕ್ತರಿಗೆ ಲೆಕ್ಕವೇ ಇಲ್ಲ! ನಾಲ್ಕೆಕರೆ ತರೀ ಜಮೀನೂ ಮೀಸಲಾಯಿತು! ಇದನ್ನೆಲ್ಲಾ ನೋಡಿ, ಜೋಯಿಸರು ಒಂದು ದಿನ ಬೆಳಿಗ್ಗೆ ಮನೆಯ ಜಗುಲಿಯ ಮೇಲೆ ಕುಳಿತು, ಮನಸ್ಸಿನಲ್ಲೇ ಮೆಲಕು ಹಾಕತೊಡಗಿದರು:

"ಆಹಾ! ಇದೀಗ ಆಶ್ಚರ್ಯ! ಯಾವುದೋ ಕಾಲದಲ್ಲಿ, ಯಾರದೋ ಮನೆಯ ಒರಳಲ್ಲಿ ಅಡಿಕೊಂಡಿದ್ದ ಈ ಗುಂಡುಕಲ್ಲು, ಹೀಗಾಗುವುದೆಂದು ಯಾರು ಕಂಡಿದ್ದರು? ನಾನು ಜೀವ ಉಳಿಸಿಕೊಳ್ಳೋಕೆ ಅದನ್ನು ಚೌಡಿ— ಅಂತ ಕರೆದು ಪೂಜೆಮಾಡಿದ ಮಾತ್ರಕ್ಕೆ, ಅದು ನಿಜವಾಗಿಯೂ ಚೌಡಿಯೇ ಆಗಬೇಕೆ?....ಇದೇನು ನನ್ನ ಪೂಜೆಯ ಮಹತ್ತ್ವೋ?....ಅಥವಾ ಈ ಹಳ್ಳಿಯವರಿಂದ ಎಲ್ಲ ಅದು, ಚೌಡಿ—ಚೌಡಾಂಬೆ—ಚೌಡಮ್ಮ—ಅಂತ ಕರೆಸಿಕೊಂಡು, ದಿನಬೆಳಗಾದರೆ ಕುರಿ, ಕೋಳಿಗಳ ರಕ್ತಾಭಿಷೇಕ ಮಾಡಿಸಿಕೊಂಡು, ತನ್ನ ಪೂರ್ವದ ವ್ಯಕ್ತಿತ್ವ-ಕರ್ಮವನ್ನು ಮರೆತು, ಚೌಡಿಯ ಅವತಾರವನ್ನು ತಾಳಿತೋ?...."

ಈ ಸಮಯಕ್ಕೆ ಸರಿಯಾಗಿ, ಮಲ್ಲಿಗೇಹಳ್ಳಿ ಪಟೇಲ ಮರುಳೀಗೌಡ, ಜೋಯಿಸರನ್ನು ಕಾಣುವುದಕ್ಕೆ ಬಂದ. ಜೋಯಿಸರು "ಬಾ, ಮರುಳಣ್ಣ,

ಏನು ಸಮಾಚಾರ?" ಎಂದು ಕೇಳಿದರು.

ಮರುಳೇಗೌಡ "ಏನೂ ಇಲ್ಲಾ ದೋಸಿಗರೇ, ತಮ್ಮನ್ನೇ ಕಾಣೋಕೆ ಬಂದೆ" ಎಂದ.

"ಏನು, ಹೇಳು?" ಎಂದರು ಜೋಯಿಸರು.

"ಏನೂ ಇಲ್ಲಾ ದೋಸಿಗರೇ, ಚೌಡಮ್ಮನ ಮಾತು ಒಂದೀಟು ಆಡೋದಿತ್ತು, ಬಂದೆ."

"ಅದೇನು?"

"ಮೊನ್ನೆ ಇಪ್ಪತ್ತು ಹಳ್ಳೀ ಪಟೇಲ್ರೂ ಸೇರಿ ಪಂಚಾಯ್ತಿ ನಡೆಸಿದ್ವಿ—ಪ್ರತಿಯೊಬ್ಬ ಪಟೇಲ್ನೂ ತನ್ನ ಹಳ್ಳೀಲಿ ವರ್ಷಕ್ಕೆ ಮನೆಗೊಂದು ರೂಪಾಯಿ ನಂತೆ ಕಾಣ್ಕೆ ವಸೂಲ್ಮಾಡಿ ಕೊಡಬೇಕೂಂತ. ತಮ್ಗೆ ಹೇಳಾನಾಂತ ಬಂದೆ."

"ಬಹಳ ಒಳ್ಳೇ ಕೆಲ್ಸ, ಗೌಡ—ಬಹಳ ಒಳ್ಳೇ ಕೆಲ್ಸ" ಎಂದರು ಜೋಯಿಸರು. ಅವರಿಗೆ ಕಾಣಿಕೆ ಮಾತು ಕೇಳಿ ಕಿವಿ ನೆಟ್ಟಗಾಯಿತು. ಆದರೆ ಅದನ್ನು ತೋರಿಸಿಕೊಳ್ಳದೆ, ಕೇಳಿದರು:

"ಸರಿ ಮರುಳಣ್ಣ, ನಿಮ್ಮ ತೀರ್ಮಾನವೇನೋ ಬಹಳ ಶ್ಲಾಘ್ಯ ವಾದದ್ದೇ—ಆದರೆ, ಈ ಕಾಣಿಕೆ ವಸೂಲಿ ಸಲೀಸಾಗಿ ನಡಕೊಂಡು ಬರುತ್ತ ದೆಯೇ?"

"ಅದರಲ್ಲೇನೂ ಅನುಮಾನವಿಲ್ಲಾ, ದೋಸಿಗರೆ; ಚೌಡಮ್ಮನ ಮುಂದೆ ಪರ್ಮಾಣಾ ಆಗಿಬಿಟ್ಟಿದೆ."

"ಸುಮಾರು ಎಷ್ಟು ವಸೂಲಾಗಬಹುದು?"

"ಎಲ್ಲಾ ಲೆಕ್ಕಾಚಾರ ಹಾಕಿದ್ರಲ್ಲಿ, ನೋಡಿ ದೋಸಿಗರೇ, ವರ್ಷಕ್ಕೆ ಮೂರು ಸಾವಿರ ರೂಪಾಯಿಗೇನೂ ಮೋಸವಿಲ್ಲ."

ಜೋಯಿಸರ ಮೈ ಜುಂ ಎಂದಿತು. ವರ್ಷಕ್ಕೆ ಮೂರು ಸಾವಿರ ರೂಪಾಯಿ! ಇಷ್ಟು, ಬರೀ ಕಾಣಿಕೇಲಿ! ಜೊತೆಗೆ ನಾಲ್ಕೆಕರೆ ಜಮೀನಿನ ವರಮಾನ!—ತಪ್ಪುಗಾಣಿಕೆ—ಜಾತ್ರೆ ವರಮಾನ ಎಲ್ಲಾ ಸೇರಿ, ನಾಲ್ಕು ಸಾವಿರ ರೂಪಾಯಿ ಗಳಿಗೇನೂ ಅಡ್ಡಿ ಇಲ್ಲಾಂತ ತೋರಿತು, ಪಿಶಾಚದ ಜೋಯಿಸರಿಗೆ. ಭೂಮಿಯಾಲಿ ಹಣದ ಕೊಪ್ಪರಿಗೆ ಅಡಗಿರೋ ಜಾಗ ಪತ್ತೆಮಾಡೋಕೆ, ಹಣ ಸುರಿದು ಅಂಜನ ವಿದ್ಯೆ ಕಲಿತರು. ಹಣದಾಸೆಗೆ ಹೆಣವಾಗುವುದರಲ್ಲಿದ್ದರು! ಇವರಿಗೆ ಸಿಕ್ಕಿದ್ದೇನೋ

ಕಲ್ಲೇ! ಅವರಿಗೆ ಮನಸ್ಸಿನಲ್ಲೇ ಕೊರೆಯುತ್ತಿತ್ತು: "ಅಂಜನವಿದ್ಯೆ ಬರೀ ಮೋಸ—ಇದರಲ್ಲಿ ನಂಬಿಕೆ ಇಟ್ಟು ಮುನ್ನೂರು ರೂಪಾಯಿಗೆ ಮೋಸವಾಯಿತಲ್ಲಾ!" ಎಂದು ಅಡಿಗಡಿಗೆ ಮರುಗುತ್ತಿದ್ದರು. ಕೊಪ್ಪರಿಗೆ ಹಣಕ್ಕಾಗಿ ಆಳುದ್ದ ಅಗೆಸಿದ್ದ ಗುಂಡಿಯಲ್ಲಿ ರುಬ್ಬುವ ಕಲ್ಲನ್ನು ನೋಡಿದಾಗ, ಜೋಯಿಸರ ಎದೆಯಲ್ಲಿದ್ದ ಬೃಹದಾಕಾರದ ಧನಪಿಶಾಚಿ ಉಡುಗಿ ಮುದುರಿಕೊಂಡಿತು. ಮರುಳೀಗೌಡನ ಮಾತುಗಳನ್ನು ಕೇಳಿ, ಜೋಯಿಸರು ಮನಸ್ಸಿನಲ್ಲೇ ಲೆಕ್ಕಾಚಾರ ಹಾಕತೊಡಗಿದೊಡನೆಯೇ, ಅವರ ಅಂತರಂಗದಲ್ಲಿ ಮುದುರಿಕೊಂಡು ನಿದ್ರಿಸುತ್ತಿದ್ದ ಆ ಧನಪಿಶಾಚಿಯನ್ನು ಹೊಡೆದೆಬ್ಬಿಸಿದಂತಾಯಿತು! ಅವರು ಮನಸ್ಸಿನಲ್ಲೇ ಯೋಚಿಸತೊಡಗಿದರು: "ಆಹಾ, ನನ್ನ ಚಮಕಿನಿಂದ ಚೌಡಿಯಾದ—ಈ ಚಟ್ನಿ ಅರೆದುಕೊಂಡಿದ್ದ ಕಲ್ಲಿಗೆ, ವರ್ಷಕ್ಕೆ ನಾಲ್ಕು ಸಾವಿರ ರೂಪಾಯಿ ವರಮಾನ!....ರುಬ್ಬುವ ಕಲ್ಲಿಗೆ ಹೊನ್ನಿನ ಹೊಳೆ! ಇರಲಿ, ಈ ಹೊಳೆಯಿಂದ ನನ್ನ ಮನೆಗೊಂದು ಕಾಲುವೆ ಹೊಡೆಯದಿದ್ದರೆ ನಾನು ಕೃಷ್ಣ ಜೋಯಿಸನೇ ಅಲ್ಲ!" ಎಂದು ನಿರ್ಧರಿಸಿಕೊಂಡು, ಗಟ್ಟಿಯಾಗಿ,

"ಸರಿ, ಮರುಳಣ್ಣ, ಇಷ್ಟು ವರಮಾನದ ಆಡಳಿತ, ವಿನಿಯೋಗ—ಇವುಗಳ ವಿಚಾರ ಏನಾದರೂ ಇತ್ಯರ್ಥಮಾಡಿದಿರಾ?" ಎಂದು ಕೇಳಿದರು.

"ಅದೇ ಮಾತು ಆಡೋಣಾಂತ ಬಂದೆ ತಪ್ಪಾತ್ರ, ದೋಸಿಗರೇ" ಎಂದ ಗೌಡ.

"ಅಯ್ಯೋ ಮರುಳಣ್ಣಾ, ನಂದೇನಿದೆಯಪ್ಪ ಮಾತು, ಇದರಲ್ಲಿ?"

"ಅದೆಂತಾ ಮಾತು ಬುದ್ದೀ, ತಾವಾಡೋದು? ತಮ್ಮಿಂದ್ಲೇ ಅಲ್ವೇ ನಮ್ಮೂರಿಗೆ ಚೌಡಮ್ಮ ಬಂದದ್ದು?"

"ಅದು ಊರಿಗೆ ತಲೆ ಅನ್ನಿಸಿಕೊಂಡ ನಿನ್ನ ಪುಣ್ಯ! ನಿಮ್ಮ ಹಳ್ಳೀ ಪುಣ್ಯ! ನೋಡೂ, ದುಡ್ಡು ಕಾಸಿನ ವಿಚಾರದಲ್ಲಿ ಒಂದು ಕೆಟ್ಟ ಮಾತು ಬರಬಾರದು. ನಾನೇ ಮುಂದೆ ಬಂದು ಏನಾದರೂ ಒಂದು ಏರ್ಪಾಟು ಮಾಡಿದೇಂತ ಇಟ್ಕೋ—ಆಗ ಜನ ಏನಂದಾರು? ನೀನೇ ಏನಂದೀಯ?...."

"ಹಾಗಲ್ಲಾ ಬುದ್ದೀ—"

"ನನ್ಮಾತು ಕೇಳು; ನೀವಿಷ್ಟತ್ತು ಹಳ್ಳೀ ಪಟೇಲ್ರು ಏನು ತೀರ್ಮಾನ ಮಾಡ್ತೀರೋ ಅದು ನನಗೂ ಸಮ್ಮತ. ದೇವಿ ನನ್ನ ಕನಸಿನಲ್ಲಿ ಒಂದಲ್ಲ ಹತ್ತು

ಸಲ ಕಾಣಿಸಿಕೊಂಡಳು; ಅಪ್ಪಣೆ ಮಾಡಿದಳು; ಹೋದೆ; ಕರೆತಂದೆ; ಇಗೋ —ನಿಮಗೆ ಒಪ್ಪಿಸಿದೆ. ಚೌಡಮ್ಮನ ಪ್ರತಿಷ್ಠೆಯೂ ಆಯಿತು. ನನ್ನ ಕೆಲಸ ಅಲ್ಲೀಗೆ ಮುಗೀತು. ಇನ್ನು ಆಕೆಯ ಪೂಜೆ–ಪುನಸ್ಕಾರ, ಜಾತ್ರೆ-ಜಯಭೇರಿ ಎಲ್ಲಾ ನಿಮ್ಮಂಥ ಹಳ್ಳೀ ಯಜಮಾನರಿಗೆ ಸೇರಿದ್ದು. ದೇವೀಗೆ ಸಲ್ಲೋ ಕಾಣಿಕೆಯ ವಸೂಲಿ–ವೆಚ್ಚ ಎಲ್ಲಾ ನಿಮ್ಮ ಧರ್ಮ ಕರ್ಮದ ಮೇಲೆ ನಡೀ ಬೇಕೂಂತ ಅಷ್ಟು ಕೇಳಿಕೋತೀನಿ, ಅಷ್ಟೆ. ಈ ವಿಚಾರದಲ್ಲಿ ನೀವು ಇಪ್ಪತ್ತು ಪಟೇಲರೂ ಸೇರಿ, ದೇವೀಮೇಲೆ ಭಾರ ಹಾಕಿ, ಒಂದು ತೀರ್ಮಾನಕ್ಕೆ ಬನ್ನಿ; ಅದರ ಮೇಲೆ, ನನ್ನ ಮಾತೊಂದೇ ಅಲ್ಲ—ಯಾರ ಮಾತೂ ಇಲ್ಲ."

ಹೀಗೆಂದು ಹೇಳಿ ಜೋಯಿಸರು ಮರುಳೀಗೌಡನನ್ನು ಕಳಿಸಿಕೊಟ್ಟರು. ಅವನು ಹೋದಮೇಲೆ ಜೋಯಿಸರಿಗೆ ಧನಪಿಶಾಚಿಯ ಕಾಟ ಹೆಚ್ಚಾಯಿತು. ಏನು ತೀರ್ಮಾನಮಾಡುವರೋ—ಎಂದು ಬಹಳ ಕುತೂಹಲದಿಂದ ಕಾದಿದ್ದರು.

* * * *

ಪಟೇಲರುಗಳ ಪಂಚಾಯಿತಿಯ ಫಲವಾಗಿ, ಚೌಡಮ್ಮನ ಪೂಜೆ–ಪುನಸ್ಕಾರಾದಿಗಳು, ಆಕೆಯನ್ನು ಭೂಗರ್ಭದಿಂದ ಬಿಡುಗಡೆ ಮಾಡಿ ಪುನಃ ಪ್ರತಿಷ್ಠೆಮಾಡಿದ ಜೋಯಿಸರಿಗೇ ಇರತಕ್ಕದ್ದೆಂದೂ, ಚೌಡಮ್ಮನಿಗೆ ಸಲ್ಲ ಬೇಕಾದ ಕಾಣಿಕೆ-ಹರಕೆ ಇತ್ಯಾದಿಗಳನ್ನು ಆಯಾ ಹಳ್ಳಿಯ ಪಟೇಲರುಗಳು ವಸೂಲುಮಾಡಿ ಮರುಳೀಗೌಡನಿಗೊಪ್ಪಿಸತಕ್ಕದ್ದೆಂದೂ, ಚೌಡಾಂಬೆಗೆ ಬರುವ ವರಮಾನದಲ್ಲಿ ಮೂರನೇ ಒಂದು ಭಾಗ ಜೋಯಿಸರಿಗೆ ಸಲ್ಲತಕ್ಕದ್ದೆಂದೂ, ಇನ್ನೊಂದು ಭಾಗ ಚೌಡಮ್ಮನ ಜಾತ್ರೆ–ಉತ್ಸವಾದಿಗಳಿಗಾಗಿ ವಿನಿಯೋಗ ವಾಗತಕ್ಕದ್ದೆಂದೂ, ಉಳಿದೊಂದು ಭಾಗ ಇಪ್ಪತ್ತು ಹಳ್ಳಿಗಳಲ್ಲೂ ಧರ್ಮಕಾರ್ಯ ಗಳಿಗಾಗಿ ವಿನಿಯೋಗವಾಗಬೇಕೆಂದೂ ತೀರ್ಮಾನವಾಯಿತು.

* * * *

ಜೋಯಿಸರ ಹೃದಯ ಸಂತೋಷದಿಂದ ತುಂಬಿ ತುಳುಕಲಾರಂಭಿಸಿತು. ಮೇಲೆ ಮಾತ್ರ ಮಹಾಜನಗಳ ತೀರ್ಮಾನಕ್ಕೆ ತಾವು ತಲೆಬಾಗಲೇಬೇಕೆಂದೂ, ಇದು ಚೌಡಾಂಬೆಯ ಚಿತ್ತವೆಂದೂ ಹೇಳತೊಡಗಿದರು.

ತೀರ್ಮಾನ ತಿಳಿದ ನಾಲ್ಕನೇ ದಿನ, ರಾತ್ರೆ ಊಟವಾದಮೇಲೆ ಜೋಯಿ

ಸರು, ಮನೆ ಮುಂದಿನ ಜಗುಲಿಯ ಮೇಲೆ ಕುಳಿತು, ನಶ್ಯ ಸೇದುತ್ತ ಹಾಗೆಯೇ ಯೋಚಿಸತೊಡಗಿದರು :

"ಮೂರನೇ ಒಂದು ಭಾಗ—ಅಂದರೆ ಒಂದು ಸಾವಿರ ರೂಪಾಯಿ ಕಡ್ಡಾಯವಾಗಿ ಬರೋದು; ಇದರಮೇಲೆ ಜಾತ್ರೆ-ಉತ್ಸವಾದಿಗಳಲ್ಲಿ ಬರೋ ಹೆಚ್ಚುಗಾಣಿಕೆ. ಈ ಮಂಕುಗಳ ನೂರಾರು ತರಲೆ-ತಾಪತ್ರಯ-ವ್ಯಾಜ್ಯ—ಇವೆಲ್ಲಾ ಚೌಡಮ್ಮನ ಮುಂದೆಯೇ ತೀರ್ಮಾನವಾಗುವ ಹಾಗೆ ಮಾಡಿದರೆ, ಆ ತಪ್ಪುಗಾಣಿಕೆಗಳು ಬೇರೆ! ಸಾವಿರದೈನೂರಕ್ಕೇನೂ ಕಡಿಮೆಯಿಲ್ಲ—ಸಾವಿರದೈನೂರು!—ಯಾರಿಗುಂಟು-ಯಾರಿಗಿಲ್ಲ?....ಆಹಾ, ಯಾರ ಯಾರ ಭಾಗಕ್ಕೆ ಲಕ್ಷ್ಮಿ, ಯಾವ ಯಾವ ರೂಪದಲ್ಲಿ ಬರುತ್ತಾಳೊ!" ಎಂದು ಯೋಚಿಸುತ್ತ, ರೂಪಾಯಿ-ಆಣೆ-ಪೈಗಳ ಲೆಕ್ಕ ಹಾಕುತ್ತ, ಮನಸ್ಸಿನಲ್ಲೇ ಧನಪಿಶಾಚಿಗೆ ಕನಕಾಭಿಷೇಕ ಮಾಡಲಾರಂಭಿಸಿದರು.

---

ಉಷಾ ಪ್ರೆಸ್, ಮೈಸೂರು